ಶ್ರೀ ಶೇಷಾಚಲ ಗ್ರಂಥಮಾಲೆ, ಆನಂದವನ

# ಸ್ವರಾಜ್ಯ ಸೋಪಾನ

(ಐತಿಹಾಸಿಕ ಕಾದಂಬರಿ)



ಲೇ:

**ನಾಗೇಶ.**



ಪ್ರಕಾಶಕ:

**ಯ. ಗು. ಕುಲಕರ್ಣಿ,**

ಸಂಪಾದಕ, ಸ. ಚ. ಆನಂದವನ-ಅಗಡಿ



೧೯೪೨

೧—೮—೦

# ಅನುಕ್ರಮಣಿಕೆ



——

# ಸ್ವರಾಜ್ಯಸೋಪಾನ.

## ೧ ತಂತು

ಕ್ರಾಂತಿಯ ಕೂಗು ಹಳ್ಳಿಡೆಯಲ್ಲಿಯೂ ಕೇಳಬರುತ್ತಿತ್ತು. ಕ್ರಾಂತಿಯ ಖಡ್ಗಗಳು ಝಳಪಿಸತೊಡಗಿದವು; ಕ್ರಾಂತಿಯ ಸಿಂಹನಾದವು ಗಿರಿ-ಕಂದರಗಳಲ್ಲಿ ಪ್ರತಿಧ್ವನಿತವಾಗತೊಡಗಿತ್ತು. ಜನತೆಯು ಕ್ರಾಂತಿಗಾಗಿ ಅತ್ಯಾತುರಗೊಂಡಿತ್ತು. ಕ್ರಾಂತಿಯೇ ಮಾನವೀ ಜೀವನದ ಮುಖ್ಯ ಗುರಿಯಾಗಿತ್ತು. ಕ್ರಾಂತಿದೇವಿಯ ತಾಂಡವನೃತ್ಯದಿಂದ ಜನಪದವು ಅಲ್ಲೋಲಕಲ್ಲೋಲವಾಗತೊಡಗಿತ್ತು. ಕ್ರಾಂತಿಯ ದೀಕ್ಷೆ ಹೊಂದಿದ ಶಿವಪ್ರಭುವು ಕ್ರಾಂತಿಗಾಗಿ ವ್ಯಾಹತಿಯಿಲ್ಲದೆ ಪರಿಶ್ರಮ ಪಡತೊಡಗಿದ್ದನು. ಪುಣ್ಯಶ್ಲೋಕಿಯಾದ ಶಿವರಾಯನ ಕ್ರಾಂತಿಯ ಖಡ್ಗವು ವೈರಿಗಳನ್ನು ಎದೆಗೆಡಿಸಿತ್ತು. ಅವನ ಪ್ರಯತ್ನದ ಫಲವಾಗಿ ಜನತೆಯು ಸ್ವರಾಜ್ಯಸೋಪಾನವನ್ನೇರತೊಡಗಿತ್ತು. ಹಿಂದುಪದಪಾತಶಾಹಿಯ ಶ್ರೀಗಣೇಶವಾಗಿ ತೋರಣಗಡ ಮೊದಲಾದ ದುರ್ಗಗಳು ಶಿವಪ್ರಭುವಿನ ಸ್ವಾಧೀನವಾದ್ದರಿಂದ ಕ್ರಾಂತಿಕಾರ್ಯಕ್ಕೆ ಕಳೆಯೇರಿತ್ತು.

ವಿಜಾಪುರದ ಅರಸರು ಶಿವಪ್ರಭುವಿಗೆ ಬಂಡುಗಾರನು, ಸುಲಿಗೆಗಾರನು, ರಾಜದ್ರೋಹಿಯು ಮೊದಲಾದ ಹೆಸರು ಕೊಡುತ್ತ, ಅವನ ಸಹವಾಸವನ್ನು ಯಾರೂ ಮಾಡಲಾಗದೆಂದು ಜನರಿಗೆ ಉಪದೇಶಿಸುತ್ತಿದ್ದರು. ಅವನ ರಾಷ್ಟ್ರಕಾರ್ಯಕ್ಕೆ ಚನ್ನಾಗಿ ಆತಂಕವನ್ನುಂಟುಮಾಡಲು ಬಹುಪರಿಯಾಗಿ ಪ್ರಯತ್ನವು ನಡೆಯುತ್ತಿತ್ತು. ಪ್ರತ್ಯಕ್ಷ ಶಿವಪ್ರಭುವಿನ ತಂದೆಯೂ ಸಹ ಅವನಿಗೆ ವಿರೋಧಿಯಾಗಿದ್ದನು. ವಿಜಾಪುರದ ದೊಡ್ಡ ದೊಡ್ಡ ಸರದಾರರು ಸ್ವರಾಜ್ಯಸೋಪಾನವನ್ನೇರತೊಡಗಿದ ಹಿಂದುಗಳ ಎದೆಗೆ ಖಡ್ಗಪ್ರಹಾರ ಮಾಡತೊಡಗಿದ್ದರು. ಇಂಥ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಧೃತಿಗುಂದದೆ ಶಿವಪ್ರಭುವಿನ ಹಿಂದುಪದಪಾತಶಾಹೀ ಸ್ಥಾಪನೆಗಾಗಿ ಎಷ್ಟೋ ಜನ ತರುಣರು ನಾ ಮುಂದೆ ನಾ ಮುಂದೆ ಎಂದು ಸಾಹಸ ಮಾಡತೊಡಗಿದ್ದರು.

ದಕ್ಷಿಣದ ಶಾಹೀರಾಜ್ಯಗಳು ದಕ್ಷಿಣದ ಹಿಂದುಗಳ ಮೇಲೆ ಅನ್ಯಾಯ-ಅತ್ಯಾಚಾರಗಳನ್ನು ನಡೆಯಿಸಿದ್ದವು. ವಿದೇಶೀಯ ಹಾಗು ವಿಧರ್ಮೀಯ ರಾಜರು ತಮ್ಮ ಹಿತಚಿಂತನೆ ಮಾಡಲಾರರೆಂಬ ಅರಿವು ಬಹುತರವಾಗಿ ಎಲ್ಲ ಹಿಂದುಗಳಿಗೆ ಉಂಟಾಗಿತ್ತು. ಧರ್ಮ-ವಿತ್ತ-ಜೀವಿತಗಳು ಕ್ಷಣಭಂಗುರವಾಗತೊಡಗಿ ತಮ್ಮ ಅಸ್ತಿತ್ವವೇ ನಾಶವಾಗುವವೆಂಬ ಅಂಜಿಕೆಯು ಹಿಂದುಗಳಲ್ಲಿ ಹುಟ್ಟಿತ್ತು. ಇಂಥ ಪರಿಸ್ಥಿತಿಯಲ್ಲಿ ಕಣ್ಣು ಮುಚ್ಚಿಕೊಂಡು ಕುಳಿತರೆ ಹಿಂದುಸ್ತಾನವು ಹಿಂದುಗಳದಾಗಿ ಉಳಿಯದೆಂಬ ಭಾವನೆಯು ಜಾಗ್ರತವಾಯಿತು. ಶಿವಪ್ರಭುವು ತರುಣವೃಂದದಲ್ಲಿಯ ಅಜಾಗ್ರತವಾಗಿದ್ದ ಕ್ಷಾತ್ರತೇಜವನ್ನು ಜಾಗ್ರತಗೊಳಿಸಿದನು. ಆಗ ಕ್ರಾಂತಿಯು ಕೂಗು ದಿಕ್ತಟಗಳಲ್ಲಿ ನಿನಾದಗೊಂಡಿತು. ಕ್ರಾಂತಿಯ ಅಬ್ಬರದಿಂದ ಶಾಹೀ ಸಿಂಹಾಸನಗಳು ಅದುರಿದವು. ಶಾಹಿಗಳ ಎದೆಗಳು ಒಡೆದವು. ಶಿವರಾಯನು ಹಿಂದುಗಳ ಅನಭಿಷಿಕ್ತ ರಾಜನಾಗಿ ಮೆರೆಯತೊಡಗಿದ್ದನ್ನು ನೋಡಿ ಆ ಯವನರಾಜರು ಭಯದಿಂದ ತತ್ತರಿಸತೊಡಗಿದರು. ಸಾಮ ದಾನ ಭೇದ ದಂಡ ಮೊದಲಾದ ಉಪಾಯಗಳಿಂದ ಹಿಂದುಗಳ ಶಕ್ತಿಯನ್ನು ನಷ್ಟಪಡಿಸಿ ಸ್ವರಾಜ್ಯಮಂದಿರವನ್ನು ಉಧ್ವಸ್ತಗೊಳಿಸಲು ಅವರ ಪ್ರಯತ್ನ ನಡೆದಿತ್ತು. ಯವನ ರಾಜರ ಮಹತ್ತರವಾದ ಪಾಶವೀಶಕ್ತಿಗೆ ಆತ್ಮಶಕ್ತಿಯಿಂದ ಎದೆಗೊಟ್ಟು ಆ ಶಕ್ತಿಯನ್ನು ನಷ್ಟಪಡಿಸಿ ಸ್ವರಾಜ್ಯಮಂದಿರವನ್ನು ಕಟ್ಟಿಯೇ ತೀರಬೇಕೆಂದು ಶಿವಪ್ರಭುವು ಪಣತೊಟ್ಟಿದ್ದನು. ಸ್ವರಾಜ್ಯವು ಭಿಕ್ಷೆಯಿಂದ ದೊರೆಯತಕ್ಕದ್ದಲ್ಲ; ಯಾಚನೆಯಿಂದ ಲಭಿಸತಕ್ಕದ್ದಲ್ಲ; ಬೇರೆಯವರಲ್ಲಿ ಹೋಗಿ ಸಹಾಯ ಹೊಂದಿ ಸಾಹಸ ಮಾಡಿದರೆ ಕೈಸೇರತಕ್ಕದ್ದಲ್ಲ. ಅದು ಸ್ವಾರ್ಥತ್ಯಾಗ-ಆತ್ಮತ್ಯಾಗರೂಪಿಯಾದ ಮಹಾಯಜ್ಞದಿಂದಲೇ ಕೈವಶವಾಗತಕ್ಕದ್ದೆಂಬ ಮಾತು ಶಿವರಾಯನ ಆದರ್ಶ ವರ್ತನೆಯಿಂದ ಎಲ್ಲರಿಗೂ ಮನವರಿಕೆಯಾಗಿತ್ತು. ಸ್ವರಾಜ್ಯದ ಬೀಜಾಕ್ಷರ ಮಂತ್ರವು ತರುಣರ ತಲೆಗಳಲ್ಲಿ ಚನ್ನಾಗಿ ಪ್ರಕಾಶ ಕೆಡಹಿತು. ನಾವು ಯಾರು, ಇಷ್ಟು ದಿನಗಳ ವರೆಗೆ ನಾವೂ ನಮ್ಮ ಜನರೂ ಮಾಡಿದ್ದೇನು? ಇದೇ ರೀತಿ ಮುಂದೆ ಸಾಗಿದರೆ ನಮ್ಮ ಹಾಗು ನಮ್ಮ ದೇಶದ ಅವಸ್ಥೆಯು ಏನಾದೀತೆಂಬದರ ಕಲ್ಪನೆಯು ತರುಣರಿಗೆ ಚನ್ನಾಗಿ ಆಗತೊಡಗಿತು. ಕೂಡಲೆ ಅವರು ಜಯ ಕ್ರಾಂತಿದೇವಿ! ಎಂಬ ಜಯಘೋಷ ಮಾಡಿ, ಶಿವರಾಯನ ಹಿಂದುಪದಪಾತಶಾಹಿಯ ದಳದಲ್ಲಿ ಸೇರಿದರು. ಹಿಂದು ಜನತೆಗೆ ಸ್ವರಾಜ್ಯಸೋಪಾನವನ್ನೇರಲು ಅವಕಾಶವನ್ನು

ಕಲ್ಪಿಸಿಕೊಡತೊಡಗಿದರು. ವೀರ ಅಭಿಮನ್ಯುವಿನಂತೆ ಪ್ರತಾಪಶಾಲಿಯಾಗಿದ್ದ ಬಾಲ ಶಿವರಾಯನ ಉದಾತ್ತ ಧ್ಯೇಯದ ಕಲ್ಪನೆಯಾಗಲು, ಮಾವಳೇ ತರುಣರು ಅವನ ಕಾರ್ಯಕ್ಕೆ ಸಹಾಯಕರಾದರು; ಸ್ವಾರ್ಥತ್ಯಾಗ ಆತ್ಮತ್ಯಾಗಗಳನ್ನು ಮಾಡಲಿಕ್ಕೆ ಸಿದ್ಧರಾದರು. ಹೀಗೆ ಸ್ವಯಂಸೇವಕ ದಳದಲ್ಲಿ ಸೇರಿದ ಸ್ವದೇಶಭಕ್ತ ತರುಣರಲ್ಲಿ ದೇವಗಾವಿಯ ಹಂಬೀರರಾಯನೊಬ್ಬನು.

ಹಂಬೀರರಾಯನು ದೇವಗಾವಿಯ ಜಹಾಗೀರದಾರ ಗಂಭೀರರಾಯನ ಮಗನು. ಗಂಭೀರರಾಯನ ಜಹಾಗೀರಿಯು ಅದಿಲಶಾಹಿಯ ಶಾಸನಕ್ಕೆ ಒಳಪಟ್ಟದ್ದಾಗಿತ್ತು. ಹಿಂದು ಜಹಾಗೀರದಾರರೂ ದೇಶಮುಖರೂ ಇನಾಮುದಾರರೂ ಆಳರಸರ ಒಲವಿನಂತೆ ನಡೆದರೆ ಮಾತ್ರ ಬಾಳುತ್ತಿದ್ದರು. ಯಾವದೊಂದು ನಿಮಿತ್ತದಿಂದ ಮುಸಲ್ಮಾನೀ ಸರದಾರ-ಸುಭೇದಾರರ ಅವಕೃಪೆಗೆ ಪಾತ್ರರಾದರೆ, ಅವರ ಜಹಾಗೀರಿಗಳು ತತ್‌ಕ್ಷಣದಲ್ಲಿ ಮಾಯವಾಗುತ್ತಿದ್ದವು. ಗಂಭೀರರಾಯನು ಯವನ ಸುಭೇದಾರನ ಅವಕೃಪೆಗೆ ಈಡಾದುದರಿಂದ ಅವನ ಜಹಾಗೀರಿಯು ನಾಶವಾಗಿ ಹೋಯಿತು. ಊರ ಹೊರಗಿನ ಒಂದು ಮನೆಯೂ ಆ ಮನೆಯ ಸುತ್ತುಮುತ್ತಲಿನ ಕೆಲವು ಭೂಮಿಗಳೂ ಮಾತ್ರ ಗಂಭೀರರಾಯನಿಗೆ ಉಳಿದವು. ಗಂಭೀರರಾಯನು ತನ್ನ ಜಹಾಗೀರಿಯನ್ನು ಮರಳಿ ಪಡೆಯುವದಕ್ಕಾಗಿ ವಿಫಲಪ್ರಯತ್ನ ಮಾಡಿ ನಿಷ್ಫಲನಾದನು. ಪ್ರಯತ್ನದ ಫಲವಾಗಿ ಅವನಿಗೆ ಹೇರಳವಾದ ಋಣಭಾರದ ಲಾಭಮಾತ್ರ ಆಯಿತು. ಈ ದುಃಖ ನೈರಾಶ್ಯಗಳಲ್ಲಿ ಬೆಂದು ಬೆಂಡಾಗಿ ಅವನು ಇಹಲೋಕವನ್ನು ತೊರೆದನು. ಜಹಾಗೀರದಾರ ಅಡ್ಡ ಹೆಸರಿನಿಂದ ಈ ವಿಶಾಲವಾದ ಜಗತ್ತಿನಲ್ಲಿ ಅವನ ಹೆಂಡತಿಯೂ ಹದಿನೈದು-ಹದಿನಾರು ವರ್ಷ ವಯಸ್ಸಿನ ಮಗನಾದ ಹಂಬೀರರಾಯನೂ ಪರದೇಶಿಗಳಾಗಿ ಉಳಿದರು. ಜಹಾಗೀರಿಯೂ ಜಹಾಗೀರಿಯ ಮಾನ-ವೈಭವಗಳೂ ನಷ್ಟವಾಗಿ ಹೋದುದರಿಂದ, ಗಂಭೀರರಾಯನ ಪತ್ನಿಯಾದ ಜಯಾಬಾಯಿಯು ಚಿಂತೆಯಿಂದ ಬಳಲುತ್ತಿದ್ದಳು. ಆದರೂ ಅವಳು ಅಷ್ಟೊಂದು ಧೃತಿಗುಂದಲಿಲ್ಲ. ತನ್ನ ಮಗನು ಪ್ರತಾಪಶಾಲಿಯಾದರೆ ಉತ್ಕರ್ಷ ಹೊಂದುವ ಕಾಲವು ಉಂಟಾಗಿರುವದೆಂದು ಬಗೆದಳು. ಅವಳಿಗೆ ದುಃಖದಲ್ಲಿಯೇ ಶಾಂತಿ-ಸಮಾಧಾನಗಳ ಸೂಚನೆಗಳು ತಲೆದೋರತೊಡಗಿದವು. ಶಿವಪ್ರಭುವಿನ ಕ್ರಾಂತಿಯ ಗಾಳಿಯು ಎಲ್ಲೆಡೆಯಲ್ಲಿ ಬೀಸತೊಡಗಿದಂತೆ ದೇವಗಾವಿಯಲ್ಲಿಯೂ ಬೀಸತೊಡಗಿತು. ಹಂಬೀರರಾಯನು ತನ್ನ ಚಿಕ್ಕತನದಲ್ಲಿ

ಯೇ ಶಿವಪ್ರಭುವಿನ ಸ್ವರಾಜ್ಯಸ್ಥಾಪನೆಯ ಸತ್ರದಲ್ಲಿ ಸೇರಬೇಕೆಂಬ ಇಚ್ಛೆಯನ್ನು ಪ್ರಕಟಿಸತೊಡಗಿದನು. ಮಗನ ಸದಿಚ್ಛೆಯಿಂದ ಜಯಾಬಾಯಿಯು ಸಂತುಷ್ಟಳಾದಳು. ಆಗ ಅವಳು ಮಗನಿಗೆ ಓದು-ಬರೆಹದ ಶಿಕ್ಷಣವನ್ನು ವಿಶೇಷವಾಗಿ ಕೊಡಿಸುವ ಹವ್ಯಾಸಕ್ಕೆ ಬೀಳದೆ, ತತ್ಕಾಲೀನ ಯುದ್ಧಕಲೆಯಲ್ಲಿ ನಿಪುಣನನ್ನು ಮಾಡಲಾರಂಭಿಸಿದಳು. ಸಿಂಹದ ಉದರದಿಂದ ಸಿಂಹದ ಮರಿಯೇ ಹುಟ್ಟುವದಲ್ಲದೆ ಜಂಬೂಕವು ಎಂದೂ ಹುಟ್ಟಲಾರದೆಂಬದರ ಭರವಸೆಯು ಗಂಭೀರರಾಯನ ಪ್ರತಾಪವನ್ನು ನೋಡುವವರಿಗೆ ಉಂಟಾಗತೊಡಗಿತು. ಗಂಭೀರರಾಯನು ತಂದೆಯ ಹೆಸರನ್ನು ಕಾಯುವನೆಂದು ಜನರು ಅನ್ನತೊಡಗಿದರು. ತಾಯಿಯ ಸದುಪದೇಶದಿಂದಲೂ ಜನರ ಉತ್ತೇಜನದಿಂದಲೂ ಗಂಭೀರರಾಯನ ಸ್ಫೂರ್ತಿಯು ದ್ವಿಗುಣಿತವಾಯಿತು. ಶಿವಪ್ರಭುವಿನ ಸಾನಿಧ್ಯ ಹೊಂದಿದರೆ ತನ್ನ ಕಲಿತನದ ಪ್ರಯೋಜನವಾಗುವದೆಂದು ಆವನು ಮನಗಂಡನು.

ದೇವಗಾವಿಯು ದೇವಿ ನದೀ ತೀರದಲ್ಲಿತ್ತು. ಅದೇ ನದೀ ತೀರದಲ್ಲಿ ದೇವಗಾವಿಯ ಬಳಿಯಲ್ಲಿಯೇ ಒಂದು ಮಠವಿದ್ದು, ಅದಕ್ಕೆ ವಿರಕ್ತ ಮಠವೆನ್ನುತ್ತಿದ್ದರು. ಮಠದ ಮಹಂತನು ಧನವಂತನಿದ್ದು ಸಾವುಕಾರಿಕೆಯ ಉದ್ಯೋಗವನ್ನು ಮಾಡುತ್ತಿದ್ದನು. ಇವನು ಎಷ್ಟೋ ಇನಾಮದಾರರಿಗೂ ಜಹಾಗೀರದಾರರಿಗೂ ಸಾಲಕೊಡುತ್ತಿದ್ದನು. ಗಂಭೀರರಾಯನ ಜಹಾಗೀರಿಯು ಜೀವಂತವಿರುವ ವರೆಗೆ ಮಹಂತನ ವರ್ಚಸ್ಸು ಹೆಚ್ಚಾಗಿರಲಿಲ್ಲ. ಜಹಾಗೀರಿಯು ನಷ್ಟವಾಗಿ ಗಂಭೀರರಾಯನು ಬಡವನಾದ ಕೂಡಲೆ ಮಹಂತನ ಯೋಗ್ಯತೆಯು ಜಹಾಗೀರದಾರನಿಗಿಂತ ಮಿಗಿಲಾಯಿತು. ಜಹಾಗೀರಿಯನ್ನು ಮರಳಿ ಪಡೆಯುವ ಹವ್ಯಾಸಕ್ಕೆ ಬಿದ್ದ ಗಂಭೀರರಾಯನು ಮಹಂತನಲ್ಲಿ ಹೇರಳವಾಗಿ ಸಾಲ ಮಾಡಿದ್ದನು. ಜಹಾಗೀರದಾರ ಮನೆತನವು ಸಾಲದ ಬಾಧೆಯಲ್ಲಿ ಸಿಲುಕಿದ ಮೇಲಂತೂ ಮತ್ತಿಷ್ಟು ವರ್ಚಸ್ಸನ್ನು ಕಳೆದುಕೊಂಡಿತು. ಗಂಭೀರರಾಯನ ಹೆಂಡತಿಯಾದ ಜಯಾಬಾಯಿಯು ಚಾಣಾಕ್ಷಳಿದ್ದುದರಿಂದ, ಬಂದ ಉತ್ಪನ್ನದಲ್ಲಿ ಜಾಣತನದಿಂದ ಉಪಜೀವಿಕೆ ಸಾಗಿಸಿಕೊಂಡು ಹೋಗುತ್ತಿದ್ದಳು. ಆವಳಿಗೆ ತೊಂದರೆ ಕೊಟ್ಟು, ಅವಳ ಭೂಮಿಗಳನ್ನೆಲ್ಲ ಕಸಿದುಕೊಳ್ಳಬೇಕೆಂಬ ವಿಚಾರವು ಮಹಂತನಾದ ಧನಗಿರಿಯಲ್ಲಿ ಹುಟ್ಟಿತು. ಬಡ್ಡಿಗಾಗಿ ಹಾಕಿದ ಭೂಮಿಗಳಿಂದ ಉತ್ಪನ್ನವು ಸರಿಯಾಗಿ ಬರುವ

ದಿಲ್ಲವೆಂದೂ ಇನ್ನೂ ಒಂದೆರಡು ಭೂಮಿಗಳನ್ನು ಬಡ್ತಿಗಾಗಿ ಕೊಡಬೇಕೆಂದೂ ಘನಗಿರಿಯು ಜಯಾಬಾಯಿಗೆ ತೊಂದರೆಕೊಡತೊಡಗಿದನು. ಆ ಮಹಂತನ ಉಪದ್ರವದಿಂದ ಅವಳು ದಿಙ್ಮೂಢಳಾದಳು. ಈ ಕುತ್ತಿನಿಂದ ಹೇಗೆ ಪಾರಾಗಬೇಕೆಂದು ಗಂಭೀರರಾಯನೂ ಯೋಚನೆಗೊಳಗಾದನು.

ಘನಗಿರಿ ಮಹಂತನು ಇನಾಮುದಾರ-ಜಹಾಗೀರದಾರರಿಗಲ್ಲದೆ ಇತರರಿಗೂ ಸಾಲಕೊಡುತ್ತಿದ್ದನು. ಪ್ರತಿವರ್ಷವೂ ಸಾಲದಲ್ಲಿ ಎಷ್ಟೋ ಭೂಮಿಗಳು ಅವನ ವಶವಾಗಿದ್ದುವು. ವರ್ಷ-ವರ್ಷಕ್ಕೆ ಮಠದ ವೈಭವವು ಬೆಳೆಯುತ್ತ ನಡೆಯಿತು. ಅವನ ಮಠದ ವ್ಯವಸ್ಥೆಯೂ ವೈಭವವೂ ಒಂದು ರಾಜಮಂದಿರದಂತೆ ಕಂಗೊಳಿಸುತ್ತಿದ್ದವು. ಮಹಂತನೂ ಅವನ ದಿವಾಣನೂ ಕುಶಾಗ್ರಬುದ್ಧಿಯವರಿದ್ದುದರಿಂದ, ಮುಸಲ್ಮಾನ ಸುಭೇದಾರರ ಕೃಪೆಯನ್ನು ಯುಕ್ತಿಯಿಂದ ಸಂಪಾದಿಸಿಕೊಂಡು ದೇವಗಾವಿಯ ಮುಷ್ಟಿಗೆ ನ್ಯಾಯಾಧಿಕಾರವನ್ನು ಸಂಪಾದಿಸಿದ್ದರು. ಘನಗಿರಿಯು ನ್ಯಾಯಾಧಿಕಾರಿಯಾಗಿ, ದಿವಾಣನಾದ ಧುಂಡಿರಾಜನ ಸಲಹೆಯಂತೆ ನ್ಯಾಯದಾನ ಮಾಡುತ್ತಿದ್ದನು. ಈ ಮಹಂತನಿಗೆ ವಿಜಾಪುರದ ಸುಭೇದಾರನ ಪೂರ್ಣ ಬೆಂಬಲವಿತ್ತು. ವಿಜಾಪುರದ ಓಲಗದ ಸುಭೇದಾರರಿಗೂ ಘನಗಿರಿಯಂಥ ಜನರ ಅವಶ್ಯಕತೆಯು ಹೆಚ್ಚಾಗಿತ್ತು. ಯಾಕಂದರೆ ಇಂಥ ಹಸ್ತಕರ ಸಹಾಯದಿಂದ ಶಿವಪ್ರಭುವಿನ ಸ್ವರಾಜ್ಯ ಸಂಸ್ಥಾಪನೆಯ ಕಾರ್ಯವನ್ನು ಹಾಳು ಮಾಡಬೇಕೆಂಬ ಕುತೂಹಲವು ಅವರಲ್ಲಿದ್ದುದರಿಂದ, ಇಂಥ ಜನರಿಗೆ ಬಹಳ ಉತ್ತೇಜನ ದೊರೆಯುತ್ತಿತ್ತು. ಇಂಥ ಜನರೇ ಸ್ವಾರ್ಥಲಾಲಸೆಯಿಂದ ಸ್ವಜನರ ಕೊರಳು ಕೊಯ್ಯುತ್ತಲಿದ್ದರು. ಗಂಭೀರರಾಯನ ಜಹಾಗೀರಿಯು ನಷ್ಟವಾಗಲಿಕ್ಕೆ ಮಹಂತನ ಕಾರಸ್ಥಾನವೇ ಕಾರಣವಾಯಿತೆಂದು ಜನರು ಅನ್ನುತ್ತಿದ್ದರು. ಈ ಸಂಗತಿಯು ಜಯಾಬಾಯಿಗೂ ಗಂಭೀರರಾಯನಿಗೂ ತಿಳಿದಿತ್ತು. ಆದ್ದರಿಂದ ಸ್ವಜನಘಾತಕಿಯಾದ ಮಹಂತನ ವಿಷಯವಾಗಿ ತಾಯಿ--ಮಗನ ಆದರಬುದ್ಧಿಯು ನಷ್ಟವಾಗಿ ದ್ವೇಷವು ಹುಟ್ಟತೊಡಗಿತ್ತು; ಆದರೆ ಅವರ ದ್ವೇಷ--ತ್ವೇಷಗಳಿಂದ ಏನೂ ಪ್ರಯೋಜನವಾಗುವಂತಿದ್ದಿಲ್ಲ. ಯಾಕಂದರೆ ಮಹಂತನು ಅಧಿಕಾರೈಶ್ವರ್ಯಸಂಪನ್ನನು. ಒಂದೆ ಯವನಪಾತಶಾಹಿಯ ಬೆಂಬಲವಿದ್ದವನು. ಆದ್ದರಿಂದ ಮುಂದೆ ಏನು ಮಾಡಬೇಕೆಂದು ಅವರಿಗೆ ತೋಚದಾಯಿತು.

ಜಯಾಬಾಯಿಯು ಜಹಾಗೀರಿಯ ಐಶ್ವರ್ಯವನ್ನು ಅನುಭವಿಸಿದವ ಳಿದ್ದುದರಿಂದ ತನ್ನ ಮೊದಲಿನ ಪದ್ಧತಿಯನ್ನು ಬಿಟ್ಟಿರಲಿಲ್ಲ. ಮನೆಯಲ್ಲಿ ನಾಲ್ಕು ಜನ ದಾಸ-ದಾಸಿಯರಿದ್ದರು. ಈ ಎಲ್ಲ ವ್ಯವಸ್ಥೆಯನ್ನು ಸಾಗಿಸಿ ಕೊಂಡು ಹೋಗುವಷ್ಟೇ ಭೂಮಿಯು ಅವಳ ವಶದಲ್ಲಿತ್ತು. ಜಹಾಗೀರಿಯು ಹೋದರೂ ಆ ಬಗೆಯ ವ್ಯವಸ್ಥೆಯು ಉಳಿದದ್ದು ಧನಗಿರಿಗೂ ಅವನ ಪ್ರಧಾನ ಢುಂಡಿರಾಜನಿಗೂ ಸಹನವಾಗಲಿಲ್ಲ. ಇನ್ನೂ ಒಂದೆರಡು ಚಲೋ ಭೂಮಿ ಗಳನ್ನು ಎತ್ತಿಹಾಕಿ ಅವಳನ್ನು ಸಾಮಾನ್ಯ ನಾಗರಿಕರಂತೆ ಮಾಡಲು ಅವರು ಪ್ರಯತ್ನಿಸತೊಡಗಿದರು. ಅದಕ್ಕಾಗಿಯೇ ಬಡ್ಡಿಯ ಸಲುವಾಗಿ ಹೆಚ್ಚು ಭೂಮಿ ಯನ್ನು ಹಚ್ಚಿಕೊಡಬೇಕೆಂದು ಅವರು ಜಯಾಬಾಯಿಗೆ ತೊಂದರೆ ಕೊಡ ತೊಡಗಿದರು.

ಬಡ್ಡಿ-ಗಂಟು ಸಹ ಮುಟ್ಟಿಹೋಗುವಷ್ಟು ಭೂಮಿಯನ್ನು ಕೊಟ್ಟರೂ ಮಹಂತನ ಪೀಡೆಯು ನಿವಾರಣೆಯಾಗದ್ದನ್ನು ನೋಡಿ ಹಂಬೀರರಾಯನು ಯೋಚನೆಗೊಳಗಾದನು. ಇದೇ ಸ್ಥಿತಿಯಲ್ಲಿದ್ದರೆ ಮಹಂತನ ಅತ್ಯಾಚಾರವು ಹೆಚ್ಚಾಗಿ ಬಾಳಿಕೊಂಡಿರುವದೇ ಕಷ್ಟವಾಗುವದೆಂಬ ಮನವರಿಕೆಯು ಅವನಿ ಗಾಯಿತು. ಆಗ ಅಭಿಮಾನಿಯೂ ಪ್ರತಿಭಾಸಂಪನ್ನನೂ ಆದ ಆ ತರುಣನು ಶಿವಪ್ರಭುವಿನ ಸ್ವರಾಜ್ಯಸೇವಾಸಂಘದಲ್ಲಿ ಸೇರಬೇಕೆಂದು ನಿರ್ಧರಿಸಿದನು. ಕ್ರಾಂತಿಯನ್ನು ಸಾರಿ ಸ್ವರಾಜ್ಯಸೋಪಾನವನ್ನೇರದೆ ಮುಕ್ತಿಯಿಲ್ಲವೆಂದು ಗ್ರಹಿಸಿ ಅವನು ತನ್ನ ಮನೋದಯವನ್ನು ತಾಯಿಗೆ ತಿಳಿಸಿದನು. ಹಂಬೀರ ರಾಯನ ಮನೋಭೂಮಿಕೆಯನ್ನು ನೋಡಿ ಜಯಾಬಾಯಿಯು ಆನಂದ ಭರಿತಳಾದಳು. ಮಗನ ಯೋಗ್ಯತೆಯು ಸ್ವರಾಜ್ಯಸೋಪಾನಗಳನ್ನೇರಲು ತಕ್ಕದ್ದಿರುವದೆಂಬದು ಅವಳಿಗೆ ಗೊತ್ತಾಗಿತ್ತು. ಆಗ ಅವಳು ಅತ್ಯಂತ ಸಂಭ್ರಮದಿಂದ ಶಿವಪ್ರಭುವಿನ ಕೃಪಾಛತ್ರದಲ್ಲಿರಲು ಒಪ್ಪಿಗೆಯಿತ್ತಳು. ಹಂಬೀರರಾಯನು ತಾಯಿಯ ಶುಭಾಶೀರ್ವಾದದಿಂದ ಉತ್ಸಾಹಗೊಂಡು "ಜಯ ಕ್ರಾಂತಿದೇವಿ!" ಎಂದು ಜಯಘೋಷ ಮಾಡಿ, ತನ್ನ ವಿಜಯಿ ಖಡ್ಗ ವನ್ನು ಹಿರಿದನು!

———

## ೨ ದಬ್ಬಾಳಿಕೆ

ವಿರಕ್ತಮಠದ ಮಹಂತ ಧನಗಿರಿಯ ವಿಷಯವಾಗಿ ಜನರಲ್ಲಿ ತಿರಸ್ಕಾರಬುದ್ಧಿಯು ಉತ್ಪನ್ನವಾಗಿತ್ತು. ಮಠದ ಮಹಂತನಂಥ ವಿರಕ್ತನು ಸಾಮಾನ್ಯ ವ್ಯಾಪಾರಿಗಳಂತೆ ನಡೆಯುತ್ತ, ಜನರಿಗೆ ಹಣ ಕೊಟ್ಟು ದೊಡ್ಡ ಬಡ್ಡಿಯನ್ನು ತೆಗೆದುಕೊಳ್ಳುತ್ತಲೂ, ಭೂಮಿಗಳನ್ನು ಕಸಿದುಕೊಳ್ಳುತ್ತಲೂ ಅವರನ್ನು ನಿರ್ಧನ್ಯಗೊಳಿಸಿದ್ದನು. ಜಹಾಗೀರದಾರ ಗಂಭೀರರಾಯನ ಜಹಾಗೀರಿಯು ನಷ್ಟವಾಗಲಿಕ್ಕೆ ಇವನೇ ಕಾರಣೀಭೂತನಾಗಿದ್ದನು. ಗಂಭೀರರಾಯನು ಜಹಾಗೀರದಾರನೆನಿಸಿಕೊಂಡಿರುವ ವರೆಗೆ ತನ್ನ ವರ್ಚಸ್ಸು ಬೆಳೆಯುವದಿಲ್ಲ ಎಂದು ಬಗೆದು, ಮಹಂತನು ಗಂಭೀರರಾಯನ ವಿಷಯವಾಗಿ ಶಾಹೀ ಓಲಿಗವು ರುಷ್ಟವಾಗುವಂತೆ ಕಾರಸ್ಥಾನ ರಚಿಸಿ, ಜಹಾಗೀರಿಯನ್ನು ನಷ್ಟಗೊಳಿಸಿದನು. ಅವನ ಈ ಮಹಾಕಾರ್ಯಕ್ಕಾಗಿ ದೇವಗಾವಿಯ ನ್ಯಾಯಾಧಿಕಾರದ ಪ್ರತಿಫಲವು ಲಭಿಸಿತ್ತು. ಗಂಭೀರರಾಯನು ತನ್ನ ಜಹಾಗೀರಿಯನ್ನು ಮರಳಿ ಪಡೆಯುವ ಹವ್ಯಾಸಕ್ಕೆ ಬಿದ್ದಾಗ ಮಹಂತನಲ್ಲಿ ಸಾಲ ತೆಗೆದುಕೊಂಡು ಎರಡು ಭೂಮಿಗಳನ್ನು ಹಾಕಿಕೊಟ್ಟಿದ್ದನು. ಗಂಭೀರರಾಯನಿರುವವರೆಗೆ ಮಹಂತನು ಆ ಭೂಮಿಯೊಳಗಿನ ಉತ್ಪನ್ನವನ್ನು ಬಡ್ಡಿ ಎಂದು ತೆಗೆದುಕೊಂಡು ಸುಮ್ಮನಿರುತ್ತಿದ್ದನು. ಗಂಭೀರರಾಯನು ಮೃತನಾದೊಡನೆಯೆ ಆ ಭೂಮಿಯಿಂದ ಬಡ್ಡಿ ತೀರುವದಿಲ್ಲವೆಂದೂ, ಇನ್ನೂ ಒಂದೆರಡು ಭೂಮಿಗಳನ್ನು ಬಡ್ಡಿಗಾಗಿ ಹಚ್ಚಿಕೊಡಬೇಕೆಂದೂ, ಹಾಗೆ ಮಾಡದೆ ಹೋದರೆ ರಾಜಶಾಸನದಂತೆ ಕೆಲಸಮಾಡಬೇಕಾಗುವದೆಂದೂ ದಿವಾಣ ಧುಂಡಿರಾಜನು ಜಯಾಬಾಯಿಯ ಹಾಗು ಹಂಬೀರರಾಯನ ಸುತ್ತು ಕೈತೊಳೆಕೊಂಡು ಬೆನ್ನುಹತ್ತಿದನು. ಕೊನೆಗೆ ವಿಜಾಪುರದ ಸುಭೇದಾರನ ಸಹಾಯಹೊಂದಿಯಾದರೂ ಹಂಬೀರರಾಯನ ಭೂಮಿಗಳನ್ನು ಸ್ವಾಧೀನ ತೆಗೆದುಕೊಳ್ಳಬೇಕೆಂದು ಅವನು ನಿರ್ಧರಿಸಿದನು. ಈ ಕಾರ್ಯಕ್ಕೆ ಮಹಂತನ ಬೆಂಬಲವು ಅಷ್ಟೊಂದು ಇರಲಿಲ್ಲ. ಅನೇಕ ಕುಚೋದ್ಯತನಗಳಿಂದ ಧುಂಡಿರಾಜನು ಅವನ ಮನವೊಲಿಸಿಕೊಂಡು, ಸುಭೇದಾರನ ಕಡೆಗೆ ವಿನಂತಿ ಪತ್ರ ಕಳುಹಿಸಿ, ಅಲ್ಲಿಂದ ದೂತರ ನೆರವು ಪಡೆದನು. ಸುಭೆಯಿಂದ ಜಮಾದಾರನು ಕೆಲವು ಚಾರರೊಂದಿಗೆ ಬಂದ ಕೂಡಲೆ ಧುಂಡಿರಾಜನು ಹುರುಪುಗೊಂಡನು. ಕೂಡಲೆ ಅವನು ಜಮಾದಾರನನ್ನು ಕರೆದುಕೊಂಡು ಮಹಂತನ ಬಳಿಗೆ ಹೋದನು. ಅನಂ

ತರ ಆ ಮೂವರಲ್ಲಿ ವಿಚಾರವಿನಿಮಯ ನಡೆಯಿತು. ಆಗ ಮಹಂತನು ಜಮಾದಾರನನ್ನು ಕುರಿತು.—"ಸಾಹೇಬ, ಜಹಾಗೀರದಾರ ಹಂಬೀರರಾಯನ ಆಸ್ತಿಯನ್ನು ಸ್ವಾಧೀನಪಡಿಸಿಕೊಳ್ಳುವ ಕೆಲಸ ನಡೆದಾಗ ಅವನು ನಿಮ್ಮ ಸರಕಾರೀ ದೂತರಿಗೆ ಅಪಮಾನ ಮಾಡಿದನು; ಅಲ್ಲದೆ ಸರಕಾರೀ ಕಾಗದ-ಪತ್ರಗಳನ್ನು ಕಸಿದು ಬಿಸುಟಿದನು. ನಮ್ಮ ಹಣದ ಬಗ್ಗೆ ಆಸ್ತಿಯನ್ನು ಸ್ವಾಧೀನಪಡಿಸಿಕೊಳ್ಳುವ ಮೊದಲು ಸರಕಾರೀ ಅಪರಾಧದ ವಿಚಾರಣೆಯಾಗಬೇಕಾಗಿದೆ. ಎಷ್ಟು ಸಾರೆ ಆಜ್ಞಾಪತ್ರ ಕಳುಹಿಸಿದರೂ ಅವನು ಬಂದು ನಮಗೆ ಭೆಟ್ಟಿಯಾಗಲೊಲ್ಲನು. ಅದಕ್ಕಾಗಿ ನಿಮ್ಮ ನೆರವು ಪಡೆಯಬೇಕಾಯಿತು. ಹಂಬೀರರಾಯನು ಜಹಾಗೀರಿಯನ್ನು ಕಳೆದುಕೊಂಡಿದ್ದರೂ, ದೇವಗಾವಿಯ ಜನತೆಯು ಆ ಮನೆತನದ ಮೇಲೆ ಇನ್ನೂ ಭಕ್ತಿವಿಶ್ವಾಸವುಳ್ಳದ್ದಿದೆ. ಆ ಜನರ ಬೆಂಬಲದಿಂದ ಅವನು ಬಹಳ ಉದ್ಧಾಮತನ ಮಾಡತೊಡಗಿದ್ದಾನೆ. ನೀವು ಅವನನ್ನು ತಂದು ನ್ಯಾಯಸಭೆಯಲ್ಲಿ ನಿಲ್ಲಿಸಿದರೆ ವಿಚಾರಣೆ ಮಾಡಲಿಕ್ಕೆ ಅನುಕೂಲವಾಗುವದು."

"ಜಮಾದಾರಸಾಹೇಬ, ಹಂಬೀರರಾಯನನ್ನು ಸೆರೆಹಿಡಿದು ತರದಿದ್ದರೆ ಕೇವಲ ಮಹಂತರ ಮಾನವಷ್ಟೇ ಹೋಯಿತೆಂದು ಭಾವಿಸಕೂಡದು; ಇವರಿಗೆ ನ್ಯಾಯದಾನದ ಅಧಿಕಾರ ಕೊಟ್ಟ ವಿಜಾಪುರ ಆದಿಲಶಾಹೀ ಓಲಗದ ಗೌರವವೂ ನಷ್ಟವಾಗುವದೆಂದು ಭಾವಿಸಿರಿ. ಹಂಬೀರರಾಯನು ಆ ಶಿವಾಜಿಯ ಸೈನ್ಯದಲ್ಲಿ ಸೇರಬೇಕೆಂದು ಯೋಚನೆ ನಡೆಯಿಸಿರುವನು. ಆ ರಾಜದ್ರೋಹಿಯನ್ನು ಹಿಡಿದು ಅಂಕೆಯಲ್ಲಿ ತರದಿದ್ದರೆ ಮುಂದೆ ಕಠಿಣವಾಗುವದು." ದಿವಾಣ ಘುಂಡಿರಾಜನು ಹೀಗೆ ದ್ವೇಷದಿಂದ ನುಡಿದು ಹಲ್ಲುಕಡಿಯುತ್ತ:—"ಆ ನರಾಧಮನು ಮಠದಲ್ಲಿದ್ದ ಪುಷ್ಕರಣಿಯಲ್ಲಿ ವಿಷಹಾಕಿದ್ದನು. ಅಲ್ಲಿಯ ಮೀನಗಳು ಮೃತವಾದೊಡನೆ ನಾವು ಅವನ ಕಾರಸ್ಥಾನ ಗುರತಿಸಿದೆವು; ಆದರೆ ಯೋಗ್ಯ ಸಾಕ್ಷಿಗಳ ಅಭಾವಕ್ಕಾಗಿಯೂ ದೇವಗಾವಿಯ ಜನತೆಯು ಸಂತಾಪಗೊಳ್ಳುವದೆಂಬ ಭಯಕ್ಕಾಗಿಯೂ ನಾವು ಆ ಅಪರಾಧದ ಬಗ್ಗೆ ನ್ಯಾಯ ವಿಚಾರಣೆ ಮಾಡುವ ಗೋಜಿಗೆ ಹೋಗಲಿಲ್ಲ. ಈಗ ಹಂಬೀರರಾಯನು ಸರಕಾರೀ ದೂತನಿಗೆ ಅಪಮಾನ ಮಾಡಿ, ಅವನನ್ನು ಬಡಿದು ಸರಕಾರೀ ಕಾಗದ-ಪತ್ರಗಳನ್ನು ಕಸಿದು ಚೆಲ್ಲಿ, ಶಾಹೀ ಓಲಗದ ಅಪಮಾನ ಮಾಡಿರುವನು. ಅವನ ಈ ಅಪರಾಧಕ್ಕಾಗಿ ದೊಡ್ಡ ಶಾಸನ ವಿಧಿಸದಿದ್ದರೆ ನಾವು ಇಲ್ಲಿ

ಪಾಸಿಸಿಕೊಂಡಿರುವದು ಕಠಿಣವಾದೀತು. ಅಲ್ಲದೆ ಆ ಪುಂಡನು ತನ್ನ ಕೆಲವು ಅನುಚರರೊಂದಿಗೆ ರಾಜದ್ರೋಹಿ ಶಿವಾಜಿಯ ಪುಂಡದಳವನ್ನು ಸೇರಿದರೆ ಶಾಹೀ ಸಾಮ್ರಾಜ್ಯಕ್ಕೆ ನುಕ್ಸಿಷ್ಟು ತೊಂದರೆಯಾಗುವದು."

ಮುಹಂತನ ಹಾಗು ಧುಂಡಿರಾಜನ ಮಾತುಗಳನ್ನು ಕೇಳಿ ಜಮಾದಾರನು ರೊಚ್ಚಿಗೆದ್ದನು. ಆಗ ಅವನು: —"ಮುಹಂತರೆ, ನಿಮ್ಮಲ್ಲಿ ಅನೇಕ ದೂತರಿರುವರು. ಜನರು ರುಷ್ಟರಾಗುವರೆಂಬ ಭಯದಿಂದ ನೀವು ಸ್ವಸ್ಥ ಕುಳಿತುಕೊಳ್ಳುವಿರಿ. ಹಂಬೀರರಾಯನು ರಾಜದ್ರೋಹಿಯಾದ ಶಿವಾಜಿಯ ದಳವನ್ನು ಕೂಡಿಕೊಳ್ಳಲಿರುವನೆಂಬ ಸುದ್ದಿಯನ್ನು ನೀವು ಇದುವರೆಗೂ ಓಲಗಕ್ಕೆ ತಿಳಿಸಿಲ್ಲ. ಇದಕ್ಕಾಗಿ ನೀವು ನಮ್ಮ ಸುಭೇದಾರರೆದುರಿಗೆ ಯೋಗ್ಯ ಉತ್ತರ ಕೊಡಬೇಕಾದೀತು. ಕಾಫರರಾದ ನೀವು ಎಲ್ಲರೂ ಒಂದೇ ಎಂದು ಅನ್ನುವ ಪ್ರಸಂಗ ತರುತ್ತೀರಿ. ನಾವು ನಿಮಗೆ ಬೇಕಾದ ಹಾಗೆ ಪ್ರತಿಷ್ಠೆಯನ್ನೂ ಅಧಿಕಾರವನ್ನೂ ಕೊಟ್ಟಿರುವವಲ್ಲದೆ, ನಿಮ್ಮ ವೈಭವಗಳನ್ನು ಬೇಕಾದ ಹಾಗೆ ಬೆಳೆಯಿಸಿಕೊಳ್ಳಲು ಸಂಧಿಯನ್ನು ಕಲ್ಪಿಸಿಕೊಟ್ಟಿದ್ದೇವೆ. ಹೀಗಿದ್ದು ನೀವು ಓಲಗದ ವಿಷಯವಾಗಿ ದ್ರೋಹಚಿಂತನೆ ಮಾಡುತ್ತಿರುವದು ಎಷ್ಟು ಅನುಚಿತವೆಂಬದನ್ನು ನೀವೇ ಯೋಚಿಸಿರಿ."

ಜಮಾದಾರನ ಗರ್ಜನೆಯಿಂದ ಮುಹಂತನೂ ಧುಂಡಿರಾಜನೂ ನಡುಗಿದರು. ಆಗ ಧುಂಡಿರಾಜನು ತನ್ನ ಮಾತನ್ನು ತಿದ್ದಿಕೊಳ್ಳುವದಕ್ಕಾಗಿ:-- "ಜಮಾದಾರಸಾಹೇಬ, ಹಂಬೀರರಾಯನು ಶಿವಾಜಿಯ ಸೈನ್ಯದಲ್ಲಿ ಸೇರುವನೆಂಬ ಬಗ್ಗೆ ಇನ್ನೂ ನಮಗೆ ಸಾಕ್ಷಿಗಳು ದೊರೆತಿಲ್ಲ. ಒಬ್ಬಿಬ್ಬರೆದುರಿಗೆ ಅವನ ತಾಯಿಯು ಮಾತ್ರ ಪ್ರಸ್ತಾಪವೆತ್ತಿದ್ದಳಂತೆ. ಹಾರಿಕೆಯ ಸುದ್ದಿಯ ಸಲುವಾಗಿ ಅಷ್ಟೊಂದು ಗಾಬರಿಯಾಗಲಿಕ್ಕೆ ಕಾರಣವೇನಿರುವದು ಹೇಳಿರಿ? ಅಂಥ ಸಮಯ ಬಂದದ್ದಾದರೆ ಆಗಿಂದಾಗ ಅಶ್ವಾರೋಹಿಗಳಿಂದ ಓಲಗಕ್ಕೆ ಸುದ್ದೀ ಹಚ್ಚುವಷ್ಟು ಸಿದ್ಧತೆಯಲ್ಲಿ ನಾವು ಇದ್ದೇ ಇರುವೆವು. ಹಂಬೀರರಾಯನ ನೀಚತನ ಹೇಳುವ ಓಘದಲ್ಲಿ ಅವನ ಅಂತಸ್ಥ ಕಾರಸ್ಥಾನ ಹೇಳಬೇಕಾಯಿತು. ಗುಪ್ತ ವಾರ್ತೆಗಳನ್ನಾದರೂ ತಿಳಿಸುವದು ನಮ್ಮ ಕರ್ತವ್ಯವೆಂಬದು ನಿಜ; ಆದರೆ ಈಗ ಮಾಡಿರುವ ಅಪರಾಧಕ್ಕಾಗಿಯೆ ಅವನಿಗೆ ದೊಡ್ಡ ಶಾಸನವಾಗುವಂತಿದೆ. ಹೀಗಿರುವಾಗ ಸಾಕ್ಷಿಗಳಿಲ್ಲದ ಪ್ರಸಂಗಗಳನ್ನು ಎತ್ತಿ ಪ್ರಯೋಜನವೇನು? ನೀವು ನಿಮ್ಮ ದೂತರನ್ನು ತೆಗೆದುಕೊಂಡು ಹೋಗಿ ಈಗಲೆ ಆ ದ್ರೋಹಿಯನ್ನು ಸೆರೆ

ಹಿಡಿದುಕೊಂಡು ಬಿಟ್ರಿ. ನ್ಯಾಯಾಧೀಶರು ಅವನಿಗೆ ಆಜನ್ಮ ಕಾರಾಗ್ರಹವಾಸದ ಶಾಸನ ವಿಧಿಸಲಿಕ್ಕೆ ಸಿದ್ಧರೇ ಇರುವರು. ಜಮಾದಾರಸಾಹೇಬರೆ, ನೀವು ನಮಗೆ ಅನುಕೂಲರಾಗಿ ನಡೆದರೆ ನಾವು ಇದೇ ದೇವಗಾಂವಿಯನ್ನೇ ನಮಗಿಸಬಹುದು, ಆದರೆ ನೀವೇ ನಮ್ಮ ಮೇಲೆ ಕ್ರುದ್ಧರಾದರೆ ನಮ್ಮನ್ನು ಯಾರು ಕೇಳಬೇಕು? ನೀವು ಕೊಟ್ಟ ಅಧಿಕಾರ. ನಿಮ್ಮ ಬಲವಿದ್ದರೆ ಮಾತ್ರ ಅವರ ಪ್ರಯೋಜನವಾಗುವದು. ನೀವು ನಮಗೆ ಬೆಂಬಲವಿದ್ದರೆ ಬೇಕಾದ ರೀತಿಯಿಂದ ಓಲಗದ ಸೇವೆ ಮಾಡಲು ನಮಗೆ ಹುರುಪು ಬರುವದು. ವಿಜಾಪುರದ ಆದಿಲಶಾಹಿಯೆಂದರೆ ಸಾಮಾನ್ಯವೆಂದು ನಮ್ಮ ಗ್ರಹಿಕೆಯಿಲ್ಲ. ನಮ್ಮ ಭಾಗ್ಯವಿಧಾತರೇ ನೀವು. ನಮ್ಮನ್ನು ಕುಗ್ಗಿಸದೆ ಹಿಗ್ಗಿಸುತ್ತ ಹೋದರೆ ನಿಮ್ಮ ಪಾತಶಾಹೀ ಕಾರ್ಯಕ್ಕೆ ನಮ್ಮಿಂದ ಎಷ್ಟಾದರೂ ಪ್ರಯೋಜನವಾಗುವದು.”

ಢುಂಡಿರಾಜನ ಮಾತಿನಿಂದ ಜಮಾದಾರನು ಸಂಭ್ರಮಗೊಂಡನು. ಆದಿಲಶಾಹೀ ರಾಜ್ಯದ ವಿಷಯವಾಗಿ ದಿವಾಣನಲ್ಲಿ ಅಕೃತ್ರಿಮ ಪ್ರೇಮವಿರುವದೆಂದು ಅವನು ಭಾವಿಸಿದನು. ಆಗ ಅವನು:- “ದಿವಾಣಸಾಹೇಬ, ನೀವು ನನ್ನ ಮಾತುಗಳನ್ನು ಹಚ್ಚಿಕೊಳ್ಳಬೇಡಿರಿ. ರಾಜಕಾರಣದಲ್ಲಿ ನಾವು ಒಮ್ಮೊಮ್ಮೆ ನಮ್ಮ ಮನಸ್ಸು ಕಠೋರ ಮಾಡಬೇಕಾಗುವದು. ಜನರನ್ನು ನಮ್ಮ ಅಂಕೆಯಲ್ಲಿ ತೆಗೆದುಕೊಳ್ಳಲಿಕ್ಕೆ ದರ್ಪೋಕ್ತಿಯನ್ನಾಡಬೇಕಾಗುವದು. ನಾವು ಹಾಗೆ ಮಾಡದೆ ಹೋದರೆ ಪಾತಶಾಹೀ ಸಿಂಹಾಸನಕ್ಕೆ ದ್ರೋಹ ಮಾಡಿದಂತಾಗುವದು. ಆ ಸಿಂಹಾಸನವು ಸ್ಥಿರವಾಗುವದಕ್ಕಾಗಿ ನಾವೂ ನೀವೂ ಯತ್ನಿಸಬೇಕು.”

“ನಿಜವು-ನಿಜವು, ಜಮಾದಾರಸಾಹೇಬರೆ, ನಿಮ್ಮ ಮಾತುಗಳು ಅಕ್ಷರಶಃ ನಿಜವು. ಪಾತಶಾಹೀ ಸಿಂಹಾಸನದ ಉಪ್ಪುಂಡ ಮೇಲೆ ಅದರ ಬಗ್ಗೆ ನಿಷ್ಠೆಯಿಂದ ನಡೆಯುವದು ನಮ್ಮ ಧರ್ಮವೇ ಆಗಿದೆ. ನಿಷ್ಠೆಯಿಂದ ಕರ್ತವ್ಯ ಮಾಡತೊಡಗಿದಾಗ ಒಮ್ಮೊಮ್ಮೆ ಮನಸ್ಸು ಕಠೋರ ಮಾಡಬೇಕಾಗುವದು; ಅಪರಾಧಿಗೆ ಶಿಕ್ಷೆ ವಿಧಿಸುವಾಗ ನಾವು ಮನಸ್ಸನ್ನು ಕಲ್ಲಿಗಿಂತ ಕಲ್ಲು ಮಾಡುವದಿಲ್ಲವೆ? ಅದರಂತೆ ನೀವಾದರೂ ನಿಮ್ಮ ಕರ್ತವ್ಯಪಾಲನೆ ಮಾಡುವಾಗ ಮನಸ್ಸು ಕಠಿಣ ಮಾಡಬೇಕಾಗುವದು; ನಿಷ್ಠುರತನ ತೋರಿಸಬೇಕಾಗುವದು. ಹಾಗೆ ಮಾಡದೆ ಹೋದರೆ ರಾಜದ್ರೋಹದ ಅಪರಾಧವನ್ನು ನಾವೇ ಮಾಡಿದಂತಾಗುವದು” ಎಂದು ಧನಗಿರಿಯು ನುಡಿದನು:—“ಜಮಾದಾರ ಸಾಹೇಬ,

ಇನ್ನು ಹಂಬೀರರಾಯನನ್ನು ಸೆರೆ ಹಿಡಿಯಲು ಹೊರಡಬಹುದಲ್ಲವೆ? ನಮ್ಮ ದಿವಾಣ ಧುಂಡಿರಾಜನೂ ನಮ್ಮ ದೂತರೂ ನಿಮ್ಮ ನೆರವಿಗಾಗಿ ಬರುವರು."

"ಓಹೋ! ಬೇಗನೆ ಹೊರಡಲಿಕ್ಕೆಬೇಕು. ನಾವು ಬಂದದ್ದು ತಿಳಿದರೆ ಹಂಬೀರರಾಯನು ಎಲ್ಲಿಯಾದರೂ ಓಡಿ ಹೋಗಬಹುದು. ಮಹಂತರೆ, ಊರಲ್ಲಿ ಹಂಬೀರರಾಯನ ಪಕ್ಷವು ದೊಡ್ಡದಿರಬಹುದು. ನಾವು ಸೆರೆಹಿಡಿಯುವಾಗ ಅವನ ಪಕ್ಷದ ಜನರು ಗೊಂದಲವೆಬ್ಬಿಸಬಹುದಲ್ಲವೆ?"

"ಛೇ! ಹಾಗೆ ಗೊಂದಲವೆಬ್ಬಿಸುವಂಥ ಧೈರ್ಯಶಾಲಿಗಳು ಅವನ ಕಡೆ ಇಲ್ಲ. ಇನ್ನು ಅವನೇ ಏನಾದರೂ ಗೊಂದಲವೆಬ್ಬಿಸುವ ಸಂಭವವಿದೆ. ಅವನಿಗೆ ಅವಕಾಶ ಕೊಡದ ಹಾಗೆ ಹೆಡಮುರಿಗೆ ಬಿಗಿದು ತರಲಿಕ್ಕೆ ಬೇಕು. ಜಮಾದಾರ ಸಾಹೇಬರೆ, ನಿಮ್ಮಂಥವರು ಹೀಗೆ ಹೆದರಿದರೆ ಹೇಗೆ?"

"ನಾನು ಹೆದರುವೆನೆಂದು ನೀವು ಕಲ್ಪಿಸಬೇಡಿರಿ. ನನಗೆ ಏನಾದರೂ ಅಪಾಯ ಸಂಭವಿಸುವ ಪ್ರಸಂಗವೊದಗಿದರೆ ನನ್ನ ಹಿಂದೆ ಆದಿಲಶಾಹೀ ಸಾಮ್ರಾಜ್ಯವೇ ಬೆಂಬಲವಾಗಿದೆಯೆಂಬ ಧೈರ್ಯ ನನಗುಂಟು. ಆದರೂ ಎಲ್ಲ ಸಂಗತಿಗಳ ಬಗ್ಗೆ ಮೊದಲೇ ಯೋಚನೆ ಮಾಡಿಟ್ಟುಕೊಂಡಿರುವದು ಒಳ್ಳೇದು" ಎಂದು ಜಮಾದಾರನು ನುಡಿದು:—"ದಿವಾಣಸಾಹೇಬ, ನಡೆಯಿರಿ; ಆ ಉದ್ಧಾಮನಾದ ಹಂಬೀರರಾಯನನ್ನು ಬಂಧಿಸಿ ತರೋಣ."

"ನಾನು ಸಿದ್ಧನಿದ್ದೇನೆ ಸರಕಾರ!" ಧುಂಡಿರಾಜನು ಸ್ಥಾನದಿಂದೆದ್ದು ಗೂಟಕ್ಕೆ ಅಲೆಯುತೊಡಗಿದ್ದ ತನ್ನ ಖಡ್ಗವನ್ನು ಟೊಂಕಕ್ಕೆ ಕಟ್ಟಿಕೊಂಡನು. ಜಮಾದಾರನು ತನ್ನ ದೂತರನ್ನು ಕರೆದುಕೊಂಡು ಹಂಬೀರರಾಯನ ಮನೆಗೆ ಬಂದನು.

ಧುಂಡಿರಾಜನೂ ಜಮಾದಾರನೂ ದೂತರೂ ಮನೆಗೆ ಬಂದದ್ದು ನೋಡಿ ಜಯಾಬಾಯಿಯು ಗಾಬರಿಯಾದಳು. ಇದೊಂದು ಅನಿಷ್ಟ ಘಟನೆಯೆಂದು ಅರಿತು ಅವಳು ತನ್ನ ಮಗನನ್ನು ಕೂಗಿದಳು. ಹಂಬೀರರಾಯನು ಕುತೂಹಲ ಪೂರ್ಣ ದೃಷ್ಟಿಯಿಂದ ಅವರನ್ನು ನೋಡುತ್ತ ನಿಂತನು. ಆಗ ಜಮಾದಾರನು ಒಳಗೆ ಬಂದಕೂಡಲೆ:—"ಹಂಬೀರರಾಯನು ನೀನೇ ಏನು?" ಎಂದು ಪ್ರಶ್ನೆ ಮಾಡಿದನು.

"ಹೌದು" ಎಂದು ಹಂಬೀರರಾಯನು ನುಡಿದು:—"ನನ್ನ ಕಡೆಗೆ ನಿಮ್ಮ ಕೆಲಸವೇನಿದೆ?" ಎಂದನು.

"ಕೆಲಸವಿರುವದೆಂದೇ ಬಂದಿದ್ದೇವೆ. ನೀನು ಅಪರಾಧಿಯಿರುವೆ. ಸರಕಾರೀ ದೂತನ ಮಾನಭಂಗ ಮಾಡಿರುವದರಿಂದ ನೀನು ಆದಿಲಶಾಹೀ ಓಲಿಗದ ಅಪಮಾನ ಮಾಡಿದಂತಾಗಿದೆ. ನಿನ್ನ ಅಪರಾಧದ ವಿಚಾರಣೆಯು ಧನಗಿರಿ ಮಹಂತರ ನ್ಯಾಯಾಸನವೆದುರಿನಲ್ಲಿ ನಡೆಯತಕ್ಕದ್ದಿರುವದು. ಈ ಧುಂಡಿರಾಜರೇ, ವಾದಿಗಳು. ಸರಕಾರೀ ದೂತರಿಬ್ಬರು ಸಾಕ್ಷೀದಾರರಿದ್ದಾರೆ. ನೀವು ಈಗಲೇ ನ್ಯಾಯಸಭೆಗೆ ಬರತಕ್ಕದ್ದು."

"ನನಗೆ ನ್ಯಾಯಸಭೆ, ವಾದಿ-ಸಾಕ್ಷಿ ಮೊದಲಾದವುಗಳ ಗುರುತಿಲ್ಲ. ನಾನೇನು ಆದಿಲಶಾಹೀ ಸರಕಾರದ ಗುಲಾಮನಲ್ಲ. ಸ್ವತಂತ್ರ ಭಾರತದ ಏಕನಿಷ್ಠ ಸೇವಕನಿರುವೆನು. ಶಿವಪ್ರಭುವಿನ ಪ್ರಜೆಯೂ ದಾಸನೂ ಆಗಿರುವೆನು."

"ಇವನನ್ನು ಈಗಲೇ ಬಂಧಿಸಿರಿ! ಈ ಉನ್ಮತ್ತನನ್ನು ಏನು ನೋಡುತ್ತೀರಿ. ಸರಕಾರೀ ಜನರೆದುರಿಗೆ ಇವನು ಹೇಗೆ ಸೊಕ್ಕಿನಿಂದ ಮಾತಾಡುವನು ನೋಡಿದಿರಾ? ಈ ರಾಜದ್ರೋಹಿಗೆ ಯೋಗ್ಯ ಶಾಸನ ವಿಧಿಸಲಿಕ್ಕೆಬೇಕು." ಎಂದು ಧುಂಡಿರಾಜನು ಸಂತಾಪದಿಂದ ನುಡಿದನು.

"ಯಾರು ಶಾಸನ ವಿಧಿಸುವವರು? ಯಾರಿಗೆ ಶಾಸನವು? ಮೂರ್ಖಾ! ನಿನ್ನ ಕಾರಸ್ಥಾನದಿಂದ ನಮ್ಮ ಜಹಾಗೀರಿಯು ಹಾಳಾಯಿತು. ಮಹಂತರಂಥ ಸರ್ವಸಂಗ ಪರಿತ್ಯಾಗಿಗಳ ಮನಸ್ಸು ಕಲುಷಿತವಾಗುವದಕ್ಕೆ ನೀನೇ ಕಾರಣನಾಗಿರುವೆ. ಸ್ವಾರ್ಥಲೋಲುಪತೆಯಿಂದ ವಿಧರ್ಮೀಯರ ಹಾಗು ಭಾರತದ ಕಟ್ಟಾ ಶತ್ರುಗಳಾದ ಯವನರ ತುಣುಕು ರೊಟ್ಟಿಗಾಗಿ ಸ್ವಜನರ ಕೊರಳು ಕೊಯ್ಯುವಂಥ ರಾಷ್ಟ್ರದ್ರೋಹಿಯಾದ ನಿನ್ನನ್ನು ನಮ್ಮ ಭಾರತ ಸಮ್ರಾಟ ಶಿವಪ್ರಭುವಿನ ನ್ಯಾಯಾಸನವೆದುರಿಗೆ ಎಳೆದು ನಿಲ್ಲಿಸಬೇಕಾಗಿದೆ."

ಹಂಬೀರರಾಯನು ಕ್ರುದ್ಧವಾಣಿಯಿಂದ ನುಡಿಯುತ್ತಿರಲು, ಜಮಾದಾರನು ತನ್ನ ದೂತರಿಗೆ ಅವನನ್ನು ಸೆರೆಹಿಡಿಯಲಿಕ್ಕೆ ಆಜ್ಞೆ ಕೊಟ್ಟನು. ಕೂಡಲೆ ನಾಲ್ಕಾರು ಜನ ದೂತರು ಒಮ್ಮೆಲೆ ಏರಿ ಹೋಗಿ ಅವನನ್ನು ಸೆರೆ ಹಿಡಿದರು; ಹಂಬೀರರಾಯನ ಕೈಯಲ್ಲಿ ಖಡ್ಗವಿದ್ದರೆ ಎಲ್ಲರ ಪಾರುಪತ್ಯವಾಗುತ್ತಿತ್ತು. ಆದರೆ ಅವನ ಖಡ್ಗವು ಆಗ ಅವನ ಬಳಿಯಲ್ಲಿರಲಿಲ್ಲ. ದೂತರು ಅವನನ್ನು ಬಂಧಿಸಿದ ಕೂಡಲೆ ಧುಂಡಿರಾಜನು:—"ಉನ್ಮತ್ತತನಕ್ಕೆ ತಕ್ಕ ಪ್ರಾಯಶ್ಚಿತ್ತವೊದಗುವದೆಂಬ ಪಾಠವನ್ನು ನೀನು ಚನ್ನಾಗಿ ಕಲಿ."

"ಮೂರ್ಖಾ! ಬಾಯಿಮುಚ್ಚು. ಹೆಚ್ಚು ಹರಟುವ ಕಾರಣವಿಲ್ಲ. ನಿಮ್ಮ

ಸ್ಥಿರ ಸುದೈವವೆಂದೇ ಶಸ್ತ್ರವು ನನ್ನ ಬಳಿಯಲ್ಲಿಲ್ಲ. ಉಪಾಯವಿಲ್ಲ. ನಡೆ, ನೀನು ಕರೆದುಕೊಂಡು ಹೋಗುವಲ್ಲಿಗೆ ಅವಶ್ಯವಾಗಿ ಬರುವೆನು ನಡೆ."

"ನನ್ನ ಆಜ್ಞೆಯಲ್ಲ, ಜಮಾದಾರ ಸಾಹೇಬರ ಆಜ್ಞೆ. ಅವರು ನಿನ್ನನ್ನು ಕರೆದುಕೊಂಡು ಹೋಗಬೇಕಾದ ಸ್ಥಳಕ್ಕೆ ಕರೆದುಕೊಂಡೇ ಹೋಗುವರು. ನೀನು ಯೋಚಿಸಬೇಡ."

"ಧುಂಡಿರಾಜರೆ, ಜಮಾದಾರ ಸಾಹೇಬರೆ! ನನ್ನ ಮಗನನ್ನು ಬಿಡಿರಿ. ನಿಮಗೆ ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ." ಕೈ ಜೋಡಿಸಿ ಜಯಾಬಾಯಿಯು ದೀನವಾಣಿಯಿಂದ ನುಡಿದಳು.

"ಅಮ್ಮಾ! ಈ ನರಾಧಮರಿಗೆ ಅಂಗಲಾಚಿ ಬೇಡಿಕೊಳ್ಳುವ ಕಾರಣವಿಲ್ಲ. ಇವರೇನು ದೇವರಲ್ಲ. ದೇವರನ್ನು ಬೇಡಿಕೊಂಡರೆ ಎಷ್ಟಾದರೂ ಫಲವು ದೊರೆತೀತು. ನೀವು ನಿಶ್ಚಿಂತೆಯಿಂದಿರಿ. ಪರಮಾತ್ಮನು ಸತ್ಯಕ್ಕೆ ಜಯಕೊಡುತ್ತಿರುತ್ತಾನೆ. ಇನ್ನು ಬೇಗನೆ ಶಿವಪ್ರಭುವಿನ ಕಾಲವು ಬರಲಿದೆ. ಯೋಚಿಸಬೇಡಿರಿ."

"ಏನು ನಿಮ್ಮ ಪರಮಾತ್ಮ! ಏನು ನಿಮ್ಮ ಶಿವಪ್ರಭು! ಎಲ್ಲವೂ ಹುಚ್ಚರಸಂತೆ! ಒಬ್ಬ ಸುಲಿಗೆಗಾರನ ಬೆನ್ನುಹತ್ತಿ ಎಲ್ಲರೂ ವ್ಯರ್ಥ ಸತ್ತುಹೋಗುವಿರಿ. ಮುಂದುಗಾಣದ ನಿಮ್ಮ ಕೇಡುಗಾಲ!" ಎಂದು ಜಮಾದಾರನು ಉದ್ಧತೆಯಿಂದ ನುಡಿದನು.

"ಯಾರ ಕೇಡುಗಾಲವೋ! ಕಾಲವೇ ಎಲ್ಲವನ್ನು ನಿರ್ಣಯಿಸುವದು. ನಳಮಾಂಧಾತ, ಯುಧಿಷ್ಠಿರ, ಹರಿಶ್ಚಂದ್ರರಂತಹ ಧರ್ಮವಂತರ ವಂಶಗಳೇ ಆಚಂದ್ರಾರ್ಕವಾಗಿ ಬಾಳಿಲ್ಲ. ಅಂದ ಮೇಲೆ ಪ್ರಜಾಪೀಡಕರಾದ ನಿಮ್ಮ ಕಾಲವು ಎಷ್ಟು ದಿನ ಬಾಳುವದೆಂಬುದನ್ನು ನೀನೆ ಲೆಕ್ಕಹಾಕಿ ತಿಳಿದುಕೋ!" ಎಂದು ಹಂಬೀರರಾಯನು ಗಂಭೀರತೆಯಿಂದ ನುಡಿದನು.

"ನಿನ್ನ ಪುರಾಣ ಕೇಳಲಿಕ್ಕೆ ನಾನು ಬಂದಿಲ್ಲ. ಇವನನ್ನು ಎಳೆದುಕೊಂಡು ನಡೆಯಿರೋ!" ಎಂದು ಧುಂಡಿರಾಜನು ದೂತರಿಗೆ ಗರ್ಜಿಸಿದನು.

"ಅಮ್ಮಾ! ನೀವು ವೀರಪತ್ನಿಯಿರುವಿರಿ; ವೀರಮಾತೆಯಿರುವಿರಿ. ಹೀಗಿದ್ದು ಈ ವಿಧವಾಗಿ ಎದೆಗುಂದಬಹುದೇ? ಈಗ ನಮಗೆ ಪ್ರತಿಕೂಲ ಕಾಲವಿದ್ದರೂ, ಬೇಗನೆ ಪರಮಾತ್ಮನು ಅನುಕೂಲ ಕಾಲವನ್ನು ಒದಗಿಸದಿರಲಾರನೆಂದು ದೃಢವಾಗಿ ನಂಬಿಕೊಳ್ಳಿರಿ. ದೇವರ ಅನುಗ್ರಹವಿದ್ದರೆ ನಾನು ನಾಳೆಗೇ

ನಿಮ್ಮನ್ನು ಕಾಣುವೆನು. ಚಿಂತೆ ಮಾಡಬೇಡಿರಿ." ಎಂದು ಹಂಬೀರರಾಯನು ತಾಯಿಯನ್ನು ಸಂತೈಸಿದನು.

ತರುವಾಯ ಜಮಾದಾರನೂ ದೂತರೂ ಹಂಬೀರರಾಯನನ್ನು ಬಂಧಿಸಿ ಶಿರಕ್ತೆ ಮಠಕ್ಕೆ ತಂದರು. ಆಗ ರಾತ್ರಿಯಾದುದರಿಂದ ಅವನನ್ನು ಒಂದು ಕತ್ತಲೆಯ ಕೋಣೆಯಲ್ಲಿ ಹಾಕಲಾಯಿತು. ಮಾರನೆಯ ದಿನ ಮುಂಜಾನೆ ಅಪರಾಧಿಯ ವಿಚಾರಣೆ ನಡೆಯತಕ್ಕದ್ದೆಂದು ಘನಗಿರಿಮಹಂತನು ಹೇಳಿದನು. ಘುಂಡಿರಾಜನು ಜಮಾದಾರನ ಕೈಯಲ್ಲಿ ಹಣದ ಸಣ್ಣ ಚೀಲ ಒಂದನ್ನು ಕೊಟ್ಟನು. ಜಮಾದಾರನು ಸಂಭ್ರಮಗೊಂಡು ನಕ್ಕನು.

ಘುಂಡಿರಾಜನೂ ಜಮಾದಾರನೂ ಕೃತಕೃತ್ಯರಾದೆವೆಂದು ಬಗೆದು ಊಟ-ಉಪಹಾರಕ್ಕಾಗಿ ಅಲ್ಲಿಂದ ತೆರಳಿದರು. ಮಹಂತನು ತನ್ನ ಶಯನಾಗಾರವನ್ನು ಪ್ರವೇಶಿಸಿ ಅಪರಾಧಿಯ ನ್ಯಾಯವಿಚಾರಣೆ ಮಾಡುವ ಬಗೆ ಹೇಗೆ, ಅವನಿಗೆ ಶಿಕ್ಷೆ ವಿಧಿಸುವ ಬಗೆ ಹೇಗೆ, ಶಿಕ್ಷೆ ವಿಧಿಸಿದರೆ ಊರ ನಾಗರಿಕರು ಕ್ಷೋಭೆಗೊಳ್ಳುವರೊ ಏನೋ, ಅದಕ್ಕೆ ಯಾವ ಉಪಾಯವಮಾಡಬೇಕು? ಮೊದಲಾದ ಆಲೋಚನೆಯಲ್ಲಿ ಮುಳುಗಿದನು.

---

# ೩ ಜೀವದ ಮೇಲಿನ ಪ್ರಸಂಗ

ಹಂಬೀರರಾಯನು ದೇವಗಾಂವಿಯ ಹೆಸರುವಾಸಿ ನಾಗರಿಕನೂ, ಮಾನವಂತನೂ, ಜನಪ್ರಿಯನೂ ಆಗಿದ್ದರೂ ಘುಂಡಿರಾಜನ ಹಾಗು ಜಮಾದಾರನ ಕುತ್ಸಿತತನಕ್ಕಾಗಿ ಸಾಮಾನ್ಯ ಸೆರೆಯಾಳುಗಳಂತೆ ಕತ್ತಲೆಯ ಕೋಣೆಯಲ್ಲಿ ಇರಬೇಕಾಯಿತು. ತನ್ನ ಅಪರಾಧದ ಬಗ್ಗೆ ಮಹಂತನು ಶಾಸನ ವಿಧಿಸುವನೆಂಬ ಭೀತಿಯು ಅವನಿಗೆ ತಿಲಾಂಶವಾದರೂ ಇದ್ದಿಲ್ಲ. ಮಹಂತನಿಗಾಗಲಿ, ಅವನ ಶಾಸನಕ್ಕಾಗಲಿ ಅವನು ಮಹತ್ವ ಕೊಟ್ಟಿರಲಿಲ್ಲ. ಇಲ್ಲಿಂದ ಹೇಗಾದರೂ ಪಾರಾಗಿ ಹೋಗಿ, ದಾಸ್ಯಪಂಕದಲ್ಲಿ ಸಿಲುಕಿದ್ದ ಭಾರತವನ್ನು ಸ್ವರಾಜ್ಯಸೋಪಾನವನ್ನೇರಿಸತೊಡಗಿದ ಶಿವಪ್ರಭುವಿನ ಮಹಾಕಾರ್ಯದಲ್ಲಿ ಸೇರಬೇಕೆಂಬ ಕುತೂಹಲವು ಅವನಲ್ಲಿ ಉಂಟಾಗಿತ್ತು. ಇಂದಿನ ರಾತ್ರಿಯನ್ನು ಹೇಗಾದರೂ ಕಳೆದು ಸ್ಥಳ ಬಿಡಬೇಕೆಂದು ಅವನು ಸಂಕಲ್ಪಿಸಿಕೊಂಡನು.

ಬೆಳಗಾದ ಕೂಡಲೆ ದೂತರು ಸೆರೆಮನೆಗೆ ಬಂದು, ಹಂಬೀರರಾಯನನ್ನು ನ್ಯಾಯಸಭೆಗೆ ಕರೆದೊಯ್ದರು. ಮಹಂತನು ಉಚ್ಚಾಸನದಲ್ಲಿ ಮುಂಡಿ

ನಿದ್ದನು. ಜನಸಾಧಾರಣನೂ ಧುಂಡಿರಾಜನೂ ಅವನ ಬಳಿಯಲ್ಲಿದ್ದ ಆಸನಗಳಲ್ಲಿ ಕುಳಿತಿದ್ದರು. ಎದುರಿಗೆ ಕೆಲವು ಸಶಸ್ತ್ರ ದೂತರ ರಕ್ಷಣೆಯಲ್ಲಿ ಹಂಬೀರರಾಯನು ನಿಂತಿದ್ದನು. ಹಂಬೀರರಾಯನ ಬಂದ ಕೂಡಲೆ ಮಹಂತನು ಅಧಿಕಾರ ಯುಕ್ತವಾಣಿಯಿಂದ:-"ಧುಂಡಿರಾಜ, ಈ ತರುಣನ ಮೇಲೆ ಯಾವ ಆರೋಪವಿದೆ?" ಎಂದು ಕೇಳಿದನು.

"ಮಹಾರಾಜ!" ಧುಂಡಿರಾಜನು ಎದ್ದು ನಿಂತು, ಕೈ ಜೋಡಿಸಿ, ವಿನಯವನ್ನು ಆವಿರ್ಭವಿಸುತ್ತ:—"ವಿರಕ್ತಮಠ ಸಂಸ್ಥಾನಕ್ಕೆ ಬರತಕ್ಕ ಹಣದ ಬಗ್ಗೆ ಈ ಹಂಬೀರರಾಯನನ್ನು ವಿಚಾರಿಸಿದೆನು. ಇವನು ಅನೇಕ ಆಕ್ಷೇಪಣೆಗಳನ್ನೆತ್ತಿದನು. ಆಗ ಸುಭೆದಾರ ನಾಯಕರಿಂದ ಆಜ್ಞಾಪತ್ರವು ಕಳಿಸಲ್ಪಟ್ಟಿತು. ಇವನು ಆಜ್ಞಾಪತ್ರ ಒಯ್ದ ಸರಕಾರೀ ದೂತನನ್ನು ಅವಮಾನಗೊಳಿಸಿದ್ದಲ್ಲದೆ, ಸರಕಾರೀ ಕಾಗದ-ಪತ್ರಗಳನ್ನು ಕಸಿದು ಬಿಸುಟಿಬಿಟ್ಟನು. ಸರಕಾರೀ ದೂತನ ಅಪಮಾನವೆಂದರೆ ರಾಜದ್ರೋಹವೇ ಸರಿ. ಪ್ರತಿಷ್ಠಿತರೆನಿಸಿಕೊಳ್ಳುವವರ ವರ್ತನವು ಈ ರೀತಿ ವಿಚಿತ್ರವಾಗತೊಡಗಿದ್ದನ್ನು ನೋಡಿ ಖೇದವೆನಿಸುವದು. ಶಿವಾಜಿಯ ಕ್ರಾಂತಿಯ ಗಾಳಿಯು ಎಲ್ಲೆಡೆಯಲ್ಲಿ ಬೀಸತೊಡಗಿದ್ದರಿಂದ ಈಗಿನ ಉದ್ಧಟ ತರುಣರು ಸರಕಾರದೊಡನೆ ಹೀಗೆ ಉದ್ಧಾಮರಾಗಿ ವರ್ತಿಸತೊಡಗಿದ್ದಾರೆ. ಇಂಥವರನ್ನು ನಾವು ಉಪೇಕ್ಷಿಸಿದರೆ ನ್ಯಾಯವಂತ ಆದಿಲಶಾಹೀ ಸರಕಾರದ ದ್ರೋಹವೆನಿಸಿದಂತಾಗುವದು."

"ಹಂಬೀರರಾಯಾ, ಧುಂಡಿರಾಜರು ಹೇಳಿದ ಮೇರೆಗೆ ನಿನ್ನಿಂದ ಅಪರಾಧ ಘಟಿಸಿದ ಬಗ್ಗೆ ನಿನ್ನ ಅಭಿಪ್ರಾಯವೇನು?" ಎಂದು ಮಹಂತನು ಹಂಬೀರರಾಯನನ್ನು ವಿಚಾರಿಸಿದನು.

"ನನ್ನಿಂದ ಏನೂ ಅಪರಾಧ ಘಟಿಸಿಲ್ಲ. ನನ್ನ ಮನೆಗೆ ಬಂದ ಯವನ ದೂತನು ಪ್ರಥಮ ಕ್ಷಣದಲ್ಲಿಯೆ ನನಗೆ ಉಪಮರ್ದಕ ಭಾಷಣಗಳನ್ನಾಡಲು ಪ್ರಾರಂಭಿಸಿದನು. ನನ್ನ ಮೇಲೆ ಬೆತ್ತವನ್ನು ಕೂಡ ಎತ್ತಿದನು. ಆದ್ದರಿಂದ ಅವನಿಗೆ ತಕ್ಕ ಪ್ರಾಯಶ್ಚಿತ್ತ ವಿಧಿಸಬೇಕಾಯಿತು. ಸರಕಾರೀ ದೂತನಾದರೆ ಬೇಕಾದ ಹಾಗೆ ನಡೆಯಲು ಸ್ವಾತಂತ್ರ್ಯವುಂಟೆ?" ಎಂದು ಹಂಬೀರರಾಯನು ನುಡಿದು ತ್ವೇಷದಿಂದ:—"ಈ ಧುಂಡಿರಾಜನು ನನ್ನ ಮೇಲೆ ಹೊರಿಸಿದ ಇನ್ನೊಂದು ಅಪರಾಧದ ಬಗ್ಗೆ ಇಲ್ಲಿ ಮಾತಾಡುವದು ಅವಾಸ್ತವವು. ಯಾಕಂದರೆ ಸರಕಾರೀ ದೂತನ ಅಪಮಾನದ ಬಗ್ಗೆ ಸದ್ಯದ ಪ್ರಕರಣವಿದೆ. ಹೀಗಿದ್ದು

ಅವರು ಅಪ್ರಾಸಂಗಿಕವಾಗಿ ಮಾತುಗಳನ್ನೆತ್ತಿದ್ದರಿಂದ ಆ ಮಾತಿನ ಸಲುವಾಗಿ ಯಾದರೂ ನಾನು ಉತ್ತರ ಕೊಡಲೇಬೇಕು. ಶಿವಪ್ರಭುವು ಹಿಂದುಗಳ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರುವನು. ಭಾರತ ಭೂಮಿಯನ್ನು ದಾಸ್ಯದಿಂದ ಮುಕ್ತಗೊಳಿಸುವದೇ ಅವನ ಗುರಿಯು. ಯವನರ ಅನ್ಯಾಯ-ಅತ್ಯಾಚಾರಗಳಿಂದ ಜರ್ಜರಿತವಾಗಿ ರಸಾತಳಕ್ಕಿಳಿದ ಭಾರತಕ್ಕೆ ಸ್ವರಾಜ್ಯಸೋಪಾನವೇರ ಹಚ್ಚಿದ ಆ ಪ್ರಭುವು ನಮ್ಮೆಲ್ಲರಿಗೆ ದೇವಸ್ವರೂಪನು. ಜಡಸ್ವಾರ್ಥಕ್ಕೋಸ್ಕರಗಾಗಿ ಯವನರಿಂದ ಪುರಸ್ಕಾರವಾಗಿ ದೊರೆಯುತ್ತಿರುವ ತುಣುಕು ರೊಟ್ಟಿಗಾಗಿ ಸ್ವಜನರ ಗೋಣು ಮುರಿಯುವ ನಿಮ್ಮಂಥ ಆಳರಸರ ಪಾರುಪತ್ಯವೂ ಆಗುವದು. ನೀವೂ ಆ ಪ್ರಭುವಿಗೆ ಯವನರಷ್ಟೇ ವೈರಿಗಳು. ನೀವು ನಮ್ಮ ಪರಂಪರವಾದ ಜಹಾಗೀರಿಯನ್ನು ನಷ್ಟಪಡಿಸಲಿಕ್ಕೆ ಕಾರಣೀಭೂತರಾಗಿರುವಿರೆಂಬದನ್ನು ನಾನು ಬಲ್ಲೆನು. ಸ್ವತಂತ್ರ ಭಾರತದ ನ್ಯಾಯಾಸನವೆದುರಿನಲ್ಲಿ ನೀವು ಅಪರಾಧಿಗಳಾಗಿ ನಿಲ್ಲುವವರಲ್ಲಿ ಯಾವ ಅನುಮಾನವೂ ಇಲ್ಲ. ಶಿವಪ್ರಭುವು ಹಿಂದುಗಳ ತಾರಕನಿರುವನು. ಅಂಥವನ ಕಾರ್ಯಕ್ಕಾಗಿ ಪ್ರತಿಯೊಬ್ಬ ಹಿಂದುವು ಕೈಗೂಡಲೇಬೇಕು. ಹಾಗೆ ಮಾಡದೆ ಹೋದರೆ 'ರಾಷ್ಟ್ರದ್ರೋಹ ಮಾಡಿದಂತಾಗುವದೆಂದು ನನ್ನ ಭಾವನೆ. ಆದ್ದರಿಂದಲೆ ನಾನು ಶಿವಪ್ರಭುವಿನ ಸ್ವರಾಜ್ಯಸೇವಾ ಪಥಕದಲ್ಲಿ ಸೇರಲು ಸಿದ್ಧನಾಗಿರುವೆನು."

"ಎರಡನೇಯ ರಾಜದ್ರೋಹದ ವಿಚಾರವು ಹಿಂದಿನಿಂದ ನಡೆಯುವದು. ಸದ್ಯಕ್ಕೆ ಸರಕಾರೀ ದೂತನ ಅಪಮಾನದ ಬಗ್ಗೆ ನಿರ್ಣಯವಾಗಬೇಕಾಗಿದೆ. ದೂತನು ನಿನ್ನ ಅಪಮಾನ ಮಾಡಿದ ಬಗ್ಗೆ ಹಾಗು ನಿನ್ನ ಮೇಲೆ ಬೆತ್ತವೆತ್ತಿದ ಬಗ್ಗೆ ಸಾಕ್ಷಿಗಳುಂಟೊ?"

"ಓಹೋ! ಸಾಕ್ಷಿಗಳಿರವೇನು? ಅಂದು ನನ್ನ ಆಳುಗಳು ಅಲ್ಲಿಯೇ ಇದ್ದರು. ನನ್ನ ತಾಯಿಯವರಿಗೆ ಈ ಸಂಗತಿ ಗೊತ್ತಿದೆ."

"ಅವರೆಲ್ಲ ನಿನ್ನ ಜನರು. ನಿನ್ನ ಜನರ ಸಾಕ್ಷಿಗಳು ಪ್ರಯೋಜನವಿಲ್ಲ. ನೀನು ಅಪರಾಧ ಮಾಡಿದ ಬಗ್ಗೆ ಸಾಕ್ಷಿಗಳಿವೆ. ಆದ್ದರಿಂದ ನೀನು ಅಪರಾಧಿಯಾದೆ. ಆದರೂ ನನ್ನ ಹಾಗು ನಿನ್ನ ಹಿರಿಯರ ಬಹಳ ದಿನಗಳ ಸ್ನೇಹದ ಕಡೆಗೆ ಲಕ್ಷ್ಯಗೊಟ್ಟು ನಿನ್ನ ಮೇಲೆ ಕೆಲಮಟ್ಟಿಗಾದರೂ ದಯೆ ತೋರಿಸಬೇಕೆಂದು ನನ್ನ ಮನಸ್ಸಿದೆ. ಒಂದು ಕಟ್ಟಳೆಯ ಮೇಲೆ ದಯಾದಾನ ಮಾಡುವೆನು. ನೀನು ಯಾವ ಸರಕಾರೀ ದೂತನ ಅಪಮಾನ ಮಾಡಿದೆಯೋ

ಅವನಲ್ಲಿ ಕ್ಷಮಾಯಾಚನೆ ಮಾಡು. ಅಂದರೆ ಶಿಕ್ಷೆಯು ಸ್ವಲ್ಪಮಟ್ಟಿಗಾದರೂ ಸೌಮ್ಯವಾಗುವದು."

"ನಾನು ಅಪರಾಧಿಯಲ್ಲ. ಮಹಂತರೆ, ನ್ಯಾಯವಾಗಿ ವಿಚಾರಿಸಿದರೆ ನಿಮ್ಮ ದೂತನೇ ಅಪರಾಧಿಯಿರುವನು. ಯಃಕಶ್ಚಿತ ದೂತನಲ್ಲಿ ನಾನು ಕ್ಷಮಾಯಾಚನೆ ಮಾಡಲಾ? ಒಬ್ಬ ಪರಮೇಶ್ವರನ ಹೊರತು ನಾನು ಯಾರಲ್ಲಿಯೂ ಕ್ಷಮೆ ಬೇಡುವದಿಲ್ಲ. ನಿಮ್ಮ ದೂತನು ಅಪರಾಧಿಯಿರುವದರಿಂದ ನೀವು ಅವನಿಗೇ ಶಿಕ್ಷೆ ವಿಧಿಸಿರಿ. ನಾನು ಅವನನ್ನು ಜೀವಂತ ಬಿಟ್ಟದ್ದೇ ದೊಡ್ಡ ಮಾತು. ನನ್ನ ದಯೆಗಾಗಿ ನಿಮ್ಮ ದೂತನು ನನ್ನ ಉಪಕಾರವನ್ನು ಸ್ಮರಿಸಬೇಕು. ಆ ಉದ್ದಾಮ ದೂತನಿಗೆ ಶಿಕ್ಷೆ ವಿಧಿಸಿ ಅನಂತರ ನನ್ನ ಅಪರಾಧದ ಬಗ್ಗೆ ವಿಚಾರ ಮಾಡಿರಿ."

"ನನಗೆ ಆಜ್ಞೆವಿಧಿಸುವ ಅಧಿಕಾರ ನಿನ್ನದಲ್ಲ. ಪ್ರತಿಯೊಬ್ಬನು ಇದೇ ರೀತಿ ರಾಜಶಾಸನಗಳನ್ನು ಪ್ರಚಾರದಲ್ಲಿ ತರಹೋದರೆ ರಾಜ್ಯವ್ಯವಸ್ಥೆಯು ನಡೆಯಲಿಕ್ಕಿಲ್ಲ. ಯಾವನು ಅಪರಾಧಿಯೋ ಅವನೇ ನ್ಯಾಯಾಧೀಶನಾದರೆ ಹೇಗೆ ನಡೆಯುವದು?"

'ಮಹಂತರೆ!' ಹಂಬೀರರಾಯನು ಗಾಂಭೀರ್ಯದಿಂದ--"ನಮ್ಮ-ನಿಮ್ಮ ಕೊಡಕೊಳ್ಳುವ ವ್ಯವಹಾರದಲ್ಲಿ ನೀವು ವಾದಿಯಿರುವಿರಿ. ನಾನು ಪ್ರತಿವಾದಿಯಿರುವೆನು. ವಾದಿಯೇ ನ್ಯಾಯಾಧೀಶನಾಗಿ ನ್ಯಾಯ ನಿರ್ಣಯ ಮಾಡುವದು ಅಧಿಕಾರಬಾಹ್ಯವರ್ತನವಲ್ಲವೆ? ನಿಮಗೆ ನ್ಯಾಯ ನಿರ್ಣಯದ ಅಧಿಕಾರವೇ ಇಲ್ಲ. ನನ್ನನ್ನು ಸುರಕ್ಷಿತವಾಗಿ ಹೋಗಗೊಡಿರಿ."

ಹಂಬೀರರಾಯನ ಗರ್ಜನೆಯನ್ನು ಕೇಳಿ ಮಹಂತನೂ ಜಮಾದಾರನೂ ಚಕಿತರಾದರು. ದೂತರು ಬೆದರಿ ನಾಲ್ಕು ಹೆಜ್ಜೆ ಹಿಂದೆ ಸರಿದರು. ಆಗ ಧುಂಡಿರಾಜನು ಜಮಾದಾರನನ್ನು ಕುರಿತು:—"ಜಮಾದಾರಸಾಹೇಬರೆ, ಈ ಅಪರಾಧಿಯನ್ನು ಚನ್ನಾಗಿ ಕಾಯುವದಕ್ಕೆ ದೂತರಿಗೆ ಆಜ್ಞಾಪಿಸಿರಿ. ಅವನು ಜಾರಿ ಹೋದರೆ ಮತ್ತೆ ಹಿಡಿಯುವದು ಕಠಿಣವಾದೀತು."

ಜಮಾದಾರನು ದೂತರಿಗೆ ಕಟ್ಟಾಜ್ಞೆವಿಧಿಸಿದ ಮೇಲೆ ಧುಂಡಿರಾಜನು ಮಹಂತನನ್ನು ಕುರಿತು:—"ಮಹಂತಮಹಾರಾಜ, ನೀವು ಹಂಬೀರರಾಯನ ಪ್ರಶ್ನೆಗಾಗಿ ನಿರುತ್ತರಹೊಂದುವ ಕಾರಣವಿಲ್ಲ. ಈಗ ನಡೆದ ಪ್ರಕರ್ಣವು ಸಂಸ್ಥಾನದ ಸಾಲದ ವಿಷಯಕ್ಕೆ ಸಂಬಂಧಿಸಿದ್ದಲ್ಲ; ಸರಕಾರೀ ದೂತನ ಅಪಮಾನ

ಮಾಡಿದ ಬಗ್ಗೆ ಸದ್ಯದ ವಿಚಾರಣೆಯುಂಟು. ನ್ಯಾಯಸಭೆಯಲ್ಲಿ ಮನಬಂದಂತೆ ಮಾತಾಡಿ ನ್ಯಾಯಾಧೀಶರ ಮಾನ ಖಂಡನೆ ಮಾಡಿ ಇವನು ಮತ್ತೊಂದು ಅಪರಾಧ ಮಾಡಿದ್ದಾನೆ. ಇದರ ಬಗ್ಗೆಯೂ ವಿಚಾರಣೆಯಾಗಿ ಕಠಿಣ ಶಾಸನವು ವಿಧಿಸಲ್ಪಡಬೇಕು. ಶಿವಾಜಿಯ ರಾಜದ್ರೋಹದ ಕಾರಸ್ಥಾನದಲ್ಲಿ ಭಾಗವಹಿಸುವೆನೆಂದು ಅವನು ನ್ಯಾಯಸಭೆಯಲ್ಲಿ ಒಪ್ಪಿಗೆಯಿತ್ತಿದ್ದಾನೆ. ಈ ಮೂರನೆಯ ಅಪರಾಧದ ವಿಚಾರಣೆಯನ್ನೂ ಅವಶ್ಯವಾಗಿ ಮಾಡಿ ತಕ್ಕ ಶಾಸನ ವಿಧಿಸಬೇಕು. ಒಟ್ಟಿನ ಮೇಲೆ ಇವನಿಗೆ ತಕ್ಕ ದಂಡನೆ ವಿಧಿಸದೆ ಹೋದರೆ ಶಾಹೀ ಸಿಂಹಾಸನದ ದ್ರೋಹ ಮಾಡಿದಂತಾಗುವದು.”

ಧುಂಡಿರಾಜನ ಆವೇಶಯುಕ್ತ ಭಾಷಣದಿಂದ ಮಹಂತನಲ್ಲಿ ಸ್ವಲ್ಪ ಮಟ್ಟಿಗೆ ಧೈರ್ಯವುಂಟಾಯಿತು. ಆಗ ಅವನು ಗಂಭೀರವಾಣಿಯಿಂದ: —
“ಹಂಬೀರರಾಯಾ, ನೀನು ಉಚ್ಚಕುಲದಲ್ಲಿ ಹುಟ್ಟಿದವನು, ಸನ್ಮಾನನೀಯ ನಾಗರಿಕನು. ದುರ್ದೈವದಿಂದ ನೀನು ಜಹಾಗೀರಿಯನ್ನು ಅನುಭವಿಸುತ್ತಿರದಿದ್ದರೂ ಜಹಗೀರದಾರನ ಮಗನೆಂಬುದು ಸುಳ್ಳಲ್ಲ. ಜನರು ನಿನ್ನ ಮನೆತನದ ವಿಷಯವಾಗಿ ಆದರಭಾವವುಳ್ಳವರಾಗಿದ್ದಾರೆ. ನಾಲ್ಕು ಜನರಿಗೆ ಬುದ್ಧಿಹೇಳ ತಕ್ಕವನು ನೀನಿರುವೆಯೆಂಬುದು ನನಗೆ ತಿಳಿದಿದೆ. ನೀನು ಚಿಕ್ಕವನಿದ್ದರೂ ಒಳ್ಳೇ ತೇಜಸ್ವಿಯಿರುವೆ. ನಿನ್ನಂಥ ತೇಜಸ್ವೀ ತರುಣರು ರಾಜನಿಷ್ಠೆಯಿಂದ ನಡೆದುದಾದರೆ ಅದಕ್ಕೆ ಪ್ರತಿಫಲ ಕೊಡಲು ನಮ್ಮ ಆದಿಲಶಾಹೀ ಸರಕಾರ ಪ್ರಸಿದ್ಧವಿದೆ; ಆದರೆ ಏನು ಮಾಡುವದು? ನಮ್ಮ ರಾಷ್ಟ್ರದ ದುರ್ದೈವ! ನಿಮ್ಮಂಥ ತರುಣರ ಮನಸ್ಸು ವಿಪರೀತ ಅವಸ್ಥೆಗೆ ಮಾರ್ಪಡುವದಕ್ಕೆ ಆ ಶಿವಾಜಿಯೇ ಕಾರಣನಾಗಿದ್ದಾನೆ. ಅವನು ನಮ್ಮ ದೇಶದ ತರುಣ ಜನರ ಆಯುಷ್ಯವನ್ನೇ ಹಾಳು ಮಾಡತೊಡಗಿದ್ದಾನೆ. ಸುಜ್ಞರು ಅವನ ಲಹರಿಗೊಳಪಡಬಾರದೆಂದು ನನ್ನ ಸೂಚನೆಯಿದೆ. ಇದು ನಿನಗೆ ಸ್ವಕೀಯತನದ ಉಪದೇಶವೆಂದು ತಿಳಿ. ಇನ್ನು ನ್ಯಾಯಾಧೀಶನಾಗಿ ಕುಳಿತ ಮೇಲೆ ಯೋಗ್ಯ ತೀರ್ಪುಕೊಡಲೇಬೇಕು. ನಿನ್ನ ಬೇರೆ ಅಪರಾಧಗಳ ವಿಚಾರಣೆಯು ಸುಭೇದಾರರ ನ್ಯಾಯಾಸನದ ಮುಂದೆ ನಡೆಯುವದು. ಮೊದಲನೆಯದಾದ ದೂತನ ಅಪಮಾನದ ಸಲುವಾಗಿ ನಿನಗೆ ಒಂದು ತಿಂಗಳ ಸಶ್ರಮಶಿಕ್ಷೆ ವಿಧಿಸಿರುವೆನು. ಇದಕ್ಕೂ ಹೆಚ್ಚಿನ ಶಿಕ್ಷೆ ವಿಧಿಸಬೇಕಾಗಿತ್ತು. ನಿನ್ನ ತರುಣ ವಯಸ್ಸು, ವಯಕ್ಕನುಗುಣವಾದ ಅಜ್ಞಾನತನ, ಹಾಗು ನಿನ್ನ ಮನೆತನದ ಪ್ರತಿಷ್ಠೆ ಮೊದಲಾದವುಗಳ ಕಡೆಗೆ

ಲಕ್ಷ್ಯಗೊಟ್ಟು ಸಣ್ಣ ದಂಡನೆ ವಿಧಿಸಿರುವೆನು. ಇನ್ನು ಮೇಲಾದರೂ ಪರಮಾತ್ಮನು ನಿನ್ನಲ್ಲಿ ಸದ್ಬುದ್ಧಿಯನ್ನು ಪ್ರೇರೇಪಿಸಲೆಂದು ನನ್ನ ಇಚ್ಛೆಯಿದೆ."

ಮಹಂತನ ತೀರ್ಪಿನಿಂದ ಹಂಬೀರರಾಯನು ರುಷ್ಟನಾದನು. ಆಗ ಅವನು ಕ್ರೋಧ ವಾಣಿಯಿಂದ—"ಮಹಂತರೆ, ನಿಮ್ಮ ತೀರ್ಪನ್ನು ನಾನು ಮನ್ನಿಸುವದಿಲ್ಲ. ನಾನು ಶಿವಪ್ರಭುವಿನ ಸೇವಕನಿರುವೆನು. ನನಗೆ ಇತರರ ಅಧಿಕಾರದ ಪರಿವೆಯಿಲ್ಲ. ನೀವು ಯಾರು, ನಿಮ್ಮ ಸುಭೇದಾರರು ಯಾರು, ನಿಮ್ಮ ಆದಿಲಶಾಹಿಯ ಸಿಂಹಾಸನವಾವುದು ಮೊದಲಾದವುಗಳನ್ನು ನಾನು ಎಷ್ಟೂ ಗುರುತಿಸುವದಿಲ್ಲ."

"ರಾಜದ್ರೋಹದ ಪರಮಾವಧಿಯಾಯಿತು. ಸುಭೇದಾರರ ನ್ಯಾಯಾಸನವಾಗದ್ದರೆ ಇಂಥ ಅಪರಾಧಿಗೆ ದೇಹಾಂತ ಪ್ರಾಯಶ್ಚಿತ್ತವನ್ನು ವಿಧಿಸುತ್ತಿದ್ದರು. ವಿರಕ್ತಮಠ ಸಂಸ್ಥಾನದ ಹಾಗು ಸರಕಾರದ ಗೌರವವು ಉಳಿಯಬೇಕಾಗಿದ್ದರೆ ಇವನಿಗೆ ದೇಹಾಂತ ಶಾಸನವೇ ಯೋಗ್ಯವಾಗಿದೆ." ಎಂದು ಧುಂಡಿರಾಜನು ಕ್ರೋಧದಿಂದ ನುಡಿದನು.

ಧುಂಡಿರಾಜನ ಈ ಅಧಿಕಪ್ರಸಂಗತನವನ್ನು ನೋಡಿ ಮಹಂತನಿಗೆ ಸಿಟ್ಟು ಬಂತು. ಆಗ ಅವನು ತಿರಸ್ಕಾರದಿಂದ:—"ಸಾಕುಮಾಡಿರಿ. ಧುಂಡಿರಾಜ! ನಿಮ್ಮ ಸಲಹೆಯ ಆವಶ್ಯಕತೆ ನನಗಿಲ್ಲ. ನಾನು ನನ್ನ ಅಧಿಕಾರದ ಕಲ್ಪನೆಯುಳ್ಳವನಿರುವೆನು. ಮಠದ ಹಾಗು ಸರಕಾರದ ಗೌರವವನ್ನು ಕಾಯುವದು ಹೇಗೆಂಬದರ ವಿಚಾರವೂ ನನಗಿದೆ. ಈ ತರುಣನ ಮನಃಸ್ಥಿತಿಯು ಈಗ ಹೇಗಾಗಿದೆ; ಅವನ ಶಬ್ದಗಳಿಗೆ ಎಷ್ಟು ಬೆಲೆಯುಂಟು ಮೊದಲಾದವುಗಳ ಬಗ್ಗೆ ನಾನು ವಿಚಾರ ಮಾಡಲೇ ಬೇಕು. ಅದಕ್ಕಾಗಿ ನಾನು ಅಲ್ಪ ಶಿಕ್ಷೆ ವಿಧಿಸಿದ್ದೇನೆ. ಈ ಪ್ರಕರ್ಣವು ಪೂರೈಸಿತು. ಜಮಾದಾರಸಾಹೇಬ, ಇವನನ್ನು ಸೆರೆಮನೆಗೆ ಕಳುಹಿಸಿರಿ."

ಮಹಂತನ ಆಜ್ಞೆಯ ಮೇರೆಗೆ ಜಮಾದಾರನು ತನ್ನ ದೂತರನ್ನು ಕುರಿತು:—"ಈ ಉನ್ಮತ್ತ ಅಪರಾಧಿಯನ್ನು ಕತ್ತಲೆ ಕೋಣೆಯಲ್ಲಿ ಹಾಕಿ ಬಿಗಿಯಾಗಿ ಕಾಯತಕ್ಕದ್ದು. ಕಾವಲಿನ ಕೆಲಸದಲ್ಲಿ ಸ್ವಲ್ಪವಾದರೂ ದುರ್ಲಕ್ಷ್ಯವುಂಟಾಗಕೂಡದು. ಇವನಿಗೆ ಬಲವಾದ ಶೃಂಖಲೆಗಳನ್ನು ತೊಡಿಸಿರಿ."

ಜಮಾದಾರನು ಹೀಗೆ ನುಡಿದ ಕೂಡಲೆ ಸಶಸ್ತ್ರ ದೂತರು ಹಂಬೀರರಾಯನ ಮೇಲೆ ಮುಗಿಬಿದ್ದರು. ಕೂಡಲೆ ಹಂಬೀರರಾಯನು ಒಬ್ಬ ದೂತನ

ಕೈಯೊಳಗಿನ ಖಡ್ಗವನ್ನು ಕಸಿದುಕೊಂಡು:—"ಸುಮ್ಮನೆ ಹಿಂದೆ ಸರಿಯಿರಿ. ಮುಂದೆ ಹೆಜ್ಜೆಯಿಟ್ಟರೆ ಜೀವವನ್ನು ಕಳೆದುಕೊಂಡೀರಿ!"

ಹಂಬೀರರಾಯನ ಗರ್ಜನೆಯಿಂದ ದೂತರು ಹಿಂದೆ ಸರಿದರು. ಆಗ ಧುಂಡಿರಾಜನ ಸಂತಾಪವು ಅತಿರೇಕವಾಯಿತು. ಅವನು ಸಂತಪ್ತವಾಣಿಯಿಂದ ದೂತರನ್ನು ಕುರಿತು:—ಕತ್ತೆಗಳೇ, ಹಿಂದೆ ಸರಿಯಲಿಕ್ಕೆ ನಾಚಿಕೆ ಬರುವದಿಲ್ಲವೆ? ಇಷ್ಟು ಸಶಸ್ತ್ರ ದೂತರಿದ್ದು ಒಂಟಿಗನಾದ ಈ ಉದ್ಧಾಮನನ್ನು ಹಿಡಿಯುವದಾಗುವದಿಲ್ಲವೆ? ಮಠದ ಹಾಗು ಸರಕಾರೀ ಅನ್ನವನ್ನು ಉಂಡು ಸೊಕ್ಕುವದಷ್ಟೇ ನಿಮ್ಮ ಕರ್ತವ್ಯವೆಂಬಂತೆ ತೋರುವದು. ಹೇಡಿಗಳೇ, ಏಕೆ ನಿಂತಿರುವಿರಿ? ಶಸ್ತ್ರವನ್ನು ಹಿಡಿಯಿರಿ! ಇವನನ್ನು ಹಿಡಿದು ನಿಃಶಸ್ತ್ರಗೊಳಿಸಿರಿ; ಕೈವಶವಾಗದಿದ್ದರೆ ಕೊಲೆ ಮಾಡಿಬಿಡಿರಿ! ಈ ನನ್ನ ಆಜ್ಞೆಯಂತೆ ನಡೆಯದಿದ್ದರೆ, ನಿಮಗೆ ಕಠಿಣ ದಂಡನೆಯು ವಿಧಿಸಲ್ಪಡುವದು" ಎಂದು ನುಡಿದು ಜಮಾದಾರನನ್ನು ಕುರಿತು:—"ಜಮಾದಾರಸಾಹೇಬರೇ, ನೀವು ನಿಮ್ಮ ದೂತರಿಗೆ ಎಚ್ಚರ ಕೊಡಿರಿ."

"ಇವನನ್ನು ಸೆರೆಹಿಡಿಯಲೇ ಬೇಕು. ಇವನು ಸಾಮಾನ್ಯ ವ್ಯಕ್ತಿಯೆಂದು ನನ್ನ ಭಾವನೆಯಿತ್ತು. ಇಂಥ ಪ್ರಳಯಕಾರಿಯನ್ನು ಬಿಡುವದುಂಟೆ? ಈ ತರುಣನು ಮಹಾ ಮೂರ್ಖನು. ಅಪ್ರತಿಮಯೋಧನೂ ತೇಜಸ್ವಿಯೂ ಆದ ಇವನು ಏಕನಿಷ್ಠೆಯಿಂದ ಬಾದಶಾಹೀ ಸೇವೆಯಲ್ಲಿದ್ದರೆ ದೊಡ್ಡ ಜಹಾಗೀರಿಯನ್ನು ಪಡೆಯುತ್ತಿದ್ದನು. ಜನ್ಮದ ಸಾರ್ಥಕತೆ ಮಾಡಿ ಕೊಳ್ಳುವ ಗುಟ್ಟು ಇವನಿಗೆ ಗೊತ್ತಿಲ್ಲ. ಒಬ್ಬ ಪುಂಡುಗಾರನ ಬೆನ್ನು ಹತ್ತಿ ತನ್ನ ಆಯುಷ್ಯವನ್ನೇ ವ್ಯರ್ಥಮಾಡಿಕೊಳ್ಳತೊಡಗಿರುವನು" ಎಂದು ಜಮಾದಾರನು ಧುಂಡಿರಾಜನಿಗೆ" ಹೇಳಿ ತನ್ನ ದೂತರನ್ನು ಕುರಿತು:—"ಎಲ್ಲರೂ ಸುತ್ತುಗಟ್ಟಿ ಹಂಬೀರರಾಯನನ್ನು ಸೆರೆಹಿಡಿಯಿರಿ!"

ದೂತರು ಶಸ್ತ್ರಪಾಣಿಗಳಾಗಿ ಬಂದಕೂಡಲೆ ಹಂಬೀರರಾಯನು ಪವಿತ್ರದ ಮೇಲೆ ನಿಂತು ಖಡ್ಗವನ್ನು ತಿರುವತೊಡಗಿದನು. ಯಾವ ದೂತನಿಗೂ ಮುಂದೆ ಬರಲು ಸಾಧ್ಯವಾಗಲಿಲ್ಲ. ಒಬ್ಬಬ್ಬರು ಹಿಂದೆ ಹೋಗಿ ಚನ್ನಾಗಿ ಕಡತತಿಂದು ಹಿಂದೆ ಸರಿದರು. ಈ ದೃಶ್ಯವನ್ನು ನೋಡಿ ಮಹಂತನು ಗಾಬರಿಗೊಂಡನು. ಪವಿತ್ರಸ್ಥಳದಲ್ಲಿ ರಕ್ತಪಾತವಾದುದರಿಂದ ಅವನ ಮನಸ್ಸು ಕ್ಲೇಶಗೊಂಡಿತು. ಆಗ ಅವನು ಖಿನ್ನವಾಣಿಯಿಂದ "ಶಿವಶಿವ! ಮಠದಲ್ಲಿ ರಕ್ತಪಾತ!

ಪವಿತ್ರಸ್ಥಳವು ಅಪವಿತ್ರವಾಯಿತು. ಘೋರಪಾತಕ ಘಟಿಸಿತು. ಧುಂಡಿರಾಜ, ನಾನು ಸ್ನಾನಕ್ಕೆ ಹೋಗುತ್ತೇನೆ. ಇಲ್ಲಿ ನನ್ನ ಕೆಲಸವಿಲ್ಲ. ನಿಮ್ಮ ಮನಸ್ಸಿಗೆ ಸರಿತೋರಿದಂತೆ ವ್ಯವಸ್ಥೆ ಮಾಡಬಹುದು. ನನ್ನಿಂದ ಇಲ್ಲಿ ನಿಲ್ಲುವದಾಗದು."

ಮಹಂತ ಧನಗಿರಿಯು ಅಲ್ಲಿಂದ ಹೊರಟ. ಹೋದ ಕೂಡಲೆ ಧುಂಡಿರಾಜನು ಒಬ್ಬ ಧನುರ್ಧಾರಿ ಸೇವಕನನ್ನು ಕುರಿತು—"ನೀನು ಈ ಉನ್ಮತ್ತ ಹಂಬೀರರಾಯನ ಮೇಲೆ ಬಾಣಬಿಡು."

ಧುಂಡಿರಾಜನ ಆಜ್ಞೆಯಾದ ಕೂಡಲೆ ಸೇವಕನು ಬಿಲ್ಲಿಗೆ ಬಾಣವನ್ನು ಹೂಡಿದನು. ಅದನ್ನು ನೋಡಿ ಹಂಬೀರರಾಯನು.—"ಇದೇ ಏನು ನಿಮ್ಮಲ್ಲಿಯ ಧರ್ಮಯುದ್ಧವು? ಖಡ್ಗಪಾಣಿಯ ಎದುರಿನಲ್ಲಿ ಖಡ್ಗಹಿಡಿದು ಕಾದುವ ಪೌರುಷವು ನಿಮ್ಮಲ್ಲಿ ಯಾರಲ್ಲಿಯೂ ಇಲ್ಲವೆ? ಧುಂಡಿರಾಜರೇ! ನಿಮ್ಮ ಹೇಡಿತನಕ್ಕೆ ಧಿಕ್ಕಾರ!"

ಹಂಬೀರರಾಯನು ಹೀಗೆ ಉದ್ಗಾರ ತೆಗೆದ ಕೂಡಲೆ ಅವನ ಪಕ್ಷಪಾತಿಯಾಗಿದ್ದ ಶಂಭುವೆಂಬವನು ಮುಂದೆ ಬಂದು ಧನುರ್ಧಾರಿ ಸೈನಿಕನನ್ನು ಕುರಿತು:—"ಹಾ! ಜೋಕೆ! ಇಂಥ ಪ್ರತಾಪಶಾಲಿಯ ಮೇಲೆ ಬಾಣ ಹೊಡೆದರೆ ನಿನ್ನ ಪ್ರಾಣವನ್ನೇ ಹೀರುವೆನು. ಎಲ್ಲರೂ ಕೈಯಲ್ಲಿ ಬಳೆಯಿಟ್ಟಿರುವಿರೋ? ಖಡ್ಗ ಹಿಡಿದು ಮುಂದೆ ಬಂದು ನಿಮ್ಮ ಪೌರುಷವನ್ನು ತೋರಿಸಿರಿ."

ಧನುರ್ಧಾರಿ ಸೇವಕನು ಶಂಭುವಿನ ಗರ್ಜನೆಯಿಂದ ಬೆತ್ತಗಾದನು. ಅವನು ಒಮ್ಮೆ ಶಂಭುವನ್ನು ಒಮ್ಮೆ ಧುಂಡಿರಾಜನನ್ನು ಮತ್ತೊಮ್ಮೆ ಹಂಬೀರರಾಯನನ್ನು ನೋಡುತ್ತ ಸುಮ್ಮನೆ ನಿಂತುಕೊಂಡನು. ಆಗ ಧುಂಡಿರಾಜನು: "ಶಂಭೂ! ನೀನು ಸರಕಾರೀ ಕೆಲಸಕ್ಕೆ ವಿಘ್ನವನ್ನುಂಟು ಮಾಡಿದ್ದರಿಂದ ನೀನು ಅಪರಾಧಿಯಾದೆ. ನೀನು ಮಠದ ಆಳಾಗಿರದಿದ್ದರೂ ಬಾದಶಹನ ಪ್ರಜೆಯಿರುವೆ. ಮಠದ ಭೂಮಿಗಳ ಸಾಗುವಳಿಕಾರನಿರುವೆ. ನಿನ್ನ ವರ್ತನದ ಬಗ್ಗೆ ನಿನಗೆ ಘೋರ ಶಾಸನವಿಧಿಸಲ್ಪಡುವದಲ್ಲದೆ, ಭೂಮಿಗಳಿಗೆ ಎರವಾಗುವೆ."

"ದಿವಾಣಸಾಹೇಬರೇ!" ಶಂಭುವು ಕರ್ಕಶವಾಣಿಯಿಂದ :—"ನಿಮ್ಮ ಗರ್ಜನೆಗೆ ಬೆದರುವವನು ನಾನಲ್ಲ. ಹಂಬೀರರಾಯನ ಕೊಲೆ ಮಾಡಲು ನಿಮಗೆ ಬಾದಶಹನ ಆಜ್ಞೆಯಿರುವದೆ? ಖಡ್ಗಪಾಣಿಯಾದವನ ಮೇಲೆ ಬಾಣ ಹೂಡುವದು ಧರ್ಮವೆ? ನಿಮ್ಮಲ್ಲಿ ಖಡ್ಗಗಳಿಲ್ಲವೆ? ಅವಧಿಯು ತೀರುವ

ವರೆಗೆ ಭೂಮಿಯನ್ನು ಕಸಿದುಕೊಳ್ಳಲು ಯಾವ ಮೂಸೆ ಹೊತ್ತ ಗಂಡಸು ಬರುವನೋ ನೋಡುವೆನು. ನಮಗೇನು ನೀವು ಹೊಲಗಳನ್ನು ದಾನವಾಗಿ ಕೊಟ್ಟಿರುವಿರಾ? ಹೊಲದ ರೊಕ್ಕವನ್ನು ವರ್ಷವರ್ಷವೂ ಕೊಡುತ್ತಿರುವಾಗ ಅವಧಿ ಮುಗಿಯುವದರೊಳಗೆ ಭೂಮಿಗಳನ್ನು ಬಿಡಿಸಿಕೊಳ್ಳುವಿರಾ? ಇದೇ ನಿಮ್ಮ ಬಾದಶಾಹೀ ಓಲಗದ ಪದ್ಧತಿಯೆಂಬಂತೆ ತೋರುವದು. ಯಾವನು ಹೊಲದಲ್ಲಿ ಹೆಜ್ಜೆಯಿಡುವನೋ ನೋಡುವೆನು."

ಶಂಭುವಿನ ಮಾತುಗಳನ್ನು ಕೇಳಿ ಹಂಬೀರರಾಯನಿಗೆ ಅತ್ಯಾನಂದವಾಯಿತು. ಆಗ ಅವನು-"ಶಾಬಾಸ್! ಶಂಭೂ, ನಿನ್ನ ಸತ್ಪಕ್ಷಪಾತಿತನವನ್ನು ನೋಡಿ ಮೆಚ್ಚಿದೆನು. ನಿನ್ನಂಥ ತೇಜಸ್ವಿಯೂ ಸ್ವಾಭಿಮಾನಿಯೂ ಆದ ಸಂಗಡಿಗನಿದ್ದರೆ ಇಂಥ ಪತ್ತು ಘುಂಡಿರಾಜರಿಗೂ ನಾನು ಸೊಪ್ಪು ಹಾಕುವದಿಲ್ಲ."

"ಸರದಾರರೆ!" ಶಂಭುವು ಹಂಬೀರರಾಯನನ್ನು ಕುರಿತು—"ನಾನು ಇಂದು ನಿಮ್ಮ ಕರ್ತವ್ಯಪ್ರಭಾವವನ್ನೂ ಸಾಹಸವನ್ನೂ ಕೆಚ್ಚೆದೆಯನ್ನೂ ಪ್ರತ್ಯಕ್ಷ ನೋಡಿದೆನು. ನಾನು ಇಂದಿನಿಂದ ನಿಮ್ಮ ಸೇವಕನಾದೆನು. ನನ್ನ ದೇಹದಲ್ಲಿ ಪ್ರಾಣಸಂಚಾರವಿರುವವರೆಗೆ ನಿಮ್ಮ ಕೂದಲು ಕೊಂಕಿಸುವ ಯೋಗ್ಯತೆಯು ಯಾವನಲ್ಲಿರುವದೋ ನೋಡುವೆನು!"

ಘುಂಡಿರಾಜನ ಸಂತಾಪವು ಅನಿವಾರ್ಯವಾಯಿತು. ಜಮಾದಾರನಂತು ಹುಚ್ಚನಾಗಿ ಕುಳಿತುಬಿಟ್ಟಿದ್ದನು. ಅವನು ಮುಂದಿನ ವ್ಯವಸ್ಥೆಯ ಭಾರವನ್ನು ಘುಂಡಿರಾಜನ ಮೇಲೆಯೇ ಹಾಕಿದನು. ಆಗ ಘುಂಡಿರಾಜನು ಧನುರ್ಧಾರಿ ಸೇವಕನನ್ನು ಕುರಿತು —"ಏನು ನೋಡುವೆಯೋ? ಇಬ್ಬರ ಮೇಲೆಯೂ ಬಾಣ ಬಿಡು!"

ಧನುರ್ಧಾರಿ ಸೇವಕನು ಘುಂಡಿರಾಜನ ಆಜ್ಞೆಯನ್ನು ಕೇಳಿ ಸಿಟ್ಟಿಗೆದ್ದನು. ಆಗ ಅವನು ಧೈರ್ಯದಿಂದ—"ಧನೀಸಾಹೇಬ, ನಾನು ಅವಿಚಾರದಿಂದ ಬಿಲ್ಲು ಹಿಡಿದೆನು. ಶಂಭುವು ನನ್ನ ಕಿವಿ ಹಿಂಡಿ ಚನ್ನಾಗಿ ಎಚ್ಚರಿಸಿದನು. ಖಡ್ಗಪಾಣಿಯಾದವರ ಮೇಲೆ ಖಡ್ಗವನ್ನು ತೆಗೆದುಕೊಂಡೇ ಹೋಗಲಿಕ್ಕೆ ಬೇಕು. ಹೇಡಿಗಳಂತೆ ಶರಪ್ರಯೋಗ ಮಾಡಬಹುದೆ? ಧರ್ಮಯುದ್ಧದ ರೀತಿಯ ವಿರುದ್ಧ ನಡೆದು ಪಾಪಸಂಚಯ ಮಾಡಲಾರೆನು. ಖಡ್ಗವನ್ನು ಕೊಡಿರಿ. ಯುದ್ಧ ಮಾಡಿ ಹೊಡೆಯುವೆನು; ಇಲ್ಲವೆ ಮಡಿಯುವೆನು. ನಾನು

ನಿಮ್ಮ ಸೇವಕನಿರುವೆನು ನಿಜ; ಆದರೆ ಅಧರ್ಮಾಚರಣೆಯ ಸೇವೆ ಸಲ್ಲಿಸಲು ನಾನು ಬದ್ಧನಿಲ್ಲ, ತಿಳಿಯಿತೆ?"

"ಸ್ವಾಮಿದ್ರೋಹಿ! ಕೃತಘ್ನಾ! ಈ ವೇಳೆಯಲ್ಲಿ ನೀನು ವಿಶ್ವಾಸಘಾತ ಮಾಡಲೆತ್ನಿಸುವೆಯಾ ನಿನ್ನನ್ನು ಇಂದಿನಿಂದ ನಾನು ಕೆಲಸದಿಂದ ತೆಗೆದುಹಾಕುವೆನು."

"ಇಂಥ ನೀತಿಭ್ರಷ್ಟರ ಸೇವೆ ಮಾಡುವದಕ್ಕಿಂತ ಉಪವಾಸ ಸಾಯುವದು ಮೇಲು!" ಎಂದು ಆ ಸೇವಕನು ನುಡಿದನು.

ಧನುರ್ಧಾರಿ ಸೇವಕನ ನೀತಿಪರಿಪ್ಲುತವಾದ ವಿಚಾರಗಳನ್ನು ಕೇಳಿ, ಹಂಬೀರರಾಯನಿಗೆ ಸಂತೋಷವಾಯಿತು. ಆಗ ಅವನು ಆ ಸೇವಕನನ್ನು ಕುರಿತು:—"ನೀನು ಯೋಚಿಸ ಬೇಡ. ನಾನು ಕೆಲಸಕ್ಕೆ ತೆಗೆದುಕೊಳ್ಳುವೆನು. ನಾವೆಲ್ಲರೂ ಶಿವಪ್ರಭುವಿನೊಡನೆ ರಾಷ್ಟ್ರಸೇವೆ ಮಾಡೋಣ. ದಾಸ್ಯಗರ್ತದಲ್ಲಿ ತೊಳಲುವ ಭರತವರ್ಷವನ್ನು ಸ್ವಾತಂತ್ರ್ಯದ ಅತ್ಯುಚ್ಚ ಶಿಖರಕ್ಕೇರಿಸಲು ನಿಮ್ಮಂಥ ನೀತಿವಂತ ತರುಣರು ಸೋಪಾನದಂತೆ ಉಪಯೋಗವಾಗಬೇಕಾಗಿದ್ದಾರೆ. ನಿಮ್ಮಂತಹರ ಕೃತಿಗಳೇ ಭಾರತದ ಸ್ವಾತಂತ್ರ್ಯ ಸೋಪಾನಗಳಾಗುವವು.

ಹಂಬೀರರಾಯನು ಹೀಗೆ ನುಡಿಯುತ್ತಿರುವಾಗ ಸಭಾಮಂದಿರದ ಹೊರಗೆ ಕುದುರೆಗಳ ಖುರಪುಟ ಧ್ವನಿಯು ಕೇಳತೊಡಗಿತು. ಕೂಡಲೆ ಎಲ್ಲರೂ ಹೊರಗೆ ಕುತೂಹಲಪೂರ್ವಕವಾಗಿ ನೋಡತೊಡಗಿದರು. ಧುಂಡಿರಾಜನು ಹೊರಗೆ ನೋಡಿದನು. ಶಿವಾಜಿ ಮಹಾರಾಜನ ಸರದಾರನಾದ ಪಾಕಡೆ ಮಾನಾಜಿರಾಯನು ಅಶ್ವಾರೋಹಿಯಾಗಿ ಬಂದದ್ದು ನೋಡಿ ಭಯಚಕಿತನಾದನು. ಕೂಡಲೆ ಅವನು ಜಮಾದಾರನನ್ನು ಕುರಿತು:—"ಜಮಾದಾರಸಾಹೇಬರೆ, ಕೆಲಸವು ಕೆಟ್ಟಿತು. ಶಿವಾಜಿಯ ಸರದಾರನಾದ ಮಾನಾಜಿರಾಯನು ಬಂದನು. ನೀವು ಇಲ್ಲಿಯೇ ಇರ್ರಿ. ನಾನು ಅವರಿಗೆ ಭೆಟ್ಟಿಯಾಗುವೆನು."

ಧುಂಡಿರಾಜನು ಬರುವಷ್ಟರಲ್ಲಿ ಮಾನಾಜಿರಾಯನು ಕುದುರೆಯಿಂದಿಳಿದಿದ್ದನು. ಧನಗಿರಿ ಮಹಂತನು ಸ್ನಾನ ತೀರಿಸಿಕೊಂಡು ಹೊರಗೆ ಬಂದನು. ಆಗ ಮಾನಾಜಿರಾಯನು ಮಹಂತನಿಗೆ ನಮಿಸಿ:—"ಮಹಂತರೇ! ನನ್ನ ಬರುವಿಕೆಯಿಂದ ನಿಮ್ಮ ಪುರಾಣ-ಪ್ರವಚನಗಳಿಗೆ ಅಡ್ಡಿಯಾಗಲಿಲ್ಲವಷ್ಟೆ?

ಘುಂಡಿರಾಜರೆ, ನಿಮ್ಮ ರಾಜಕಾರಣಕ್ಕೇನಾದರೂ ನನ್ನಿಂದ ತೊಂದರೆಯಾಗು ವಂತಿರುವದೆ?"

"ಛೀ! ಇದೇನು ಹೇಳುವಿರಿ?" ಮಹಂತನು ದೊಡ್ಡಿಸ್ತಿಕೆ ತೋರಿಸುತ್ತ: "ಹಾಗೇನೂ ಇಲ್ಲ ಸರದಾರಸಾಹೇಬರೆ, ಕೆಲಸಗಳೇನೋ ಎಂದಿನಂತೆ ಯಾವಾಗಲೂ ಇದ್ದೇ ಇರುವವು. ನಿಮ್ಮಂಥವರು ಅತ್ತ ಲಕ್ಷ್ಯಗೊಡುವ ಕಾರಣವಿಲ್ಲ. ನಿಮ್ಮ ಆಗಮನವೇ ನಮಗೆ ಅಪರೂಪ. ದೊಡ್ಡ ಮನುಷ್ಯರ ಆಗಮನದಂತಹ ಅಮೌಲ್ಯ ಸಂಧಿಯು ಯಾವಾಗಲೂ ದೊರೆಯುತ್ತಿರುವದಿಲ್ಲ. ನಡೆಯಿರಿ. ಸಭಾಮಂದಿರಕ್ಕೆ ಹೋಗೋಣ. ಇಂದು ನಮ್ಮಲ್ಲಿಯೇ ಇದ್ದು ನಮ್ಮ ಅತ್ಯಲ್ಪವಾದ ಆತಿಥ್ಯ ಸ್ವೀಕರಿಸಬೇಕೆಂದು ನನ್ನ ಆಗ್ರಹದ ವಿನಂತಿಯದೆ."

"ಕ್ಷಮಿಸಿರಿ. ಆತಿಥ್ಯ ಸ್ವೀಕರಿಸುತ್ತ ಕಾಲಕ್ಷೇಪ ಮಾಡಲು ನನಗೆ ಅವಕಾಶವಿಲ್ಲ. ಹಂಬೀರರಾಯನ ಕಡೆಗೆ ಮಹಾರಾಜರ ಮಹತ್ವದ ಕಾರ್ಯವಿವೆ. ಆದ್ದರಿಂದ ಅವನ ಮನೆಗೆ ಹೋಗಬೇಕಾಗಿದೆ. ದಾರಿಯಲ್ಲಿ ನಿಮ್ಮ ಮಠವು ಹತ್ತಿದ್ದರಿಂದ ನಿಮಗೆ ಭೆಟ್ಟಿಯಾಗದೆ ಹೋಗುವದು ನನ್ನಿಂದಾಗಲಿಲ್ಲ. ನನಗೆ ಅಪ್ಪಣೆ ಕೊಡಿರಿ.'

ಹಂಬೀರರಾಯನ ಪ್ರಸ್ತಾಪ ಹೊರಟ ಕೂಡಲೆ ಮಹಂತನ ಮುಖವು ಕಪ್ಪಿಟ್ಟಿತು. ಆಗ ಅವನು ತಡವರಿಸುತ್ತ:—"ಹಂಬೀರರಾಯನು ನ್ಯಾಯ ಸಭೆಯಲ್ಲಿಯೆ ಇರುವನು. ಸರಕಾರೀ ದೂತನನ್ನು ಅಪಮಾನ ಗೊಳಿಸಿದ್ದರಿಂದ ಅವನ ಅಪರಾಧದ ವಿಚಾರಣೆ ನಡೆದಿತ್ತು. ಹುಡುಗ, ಇನ್ನೂ ಅಪ್ರಬುದ್ಧ. ನೀವು ಅವನ ತಂದೆಯ ಸ್ನೇಹಿಗಳಿರುವದರಿಂದ ಹೇಳುತ್ತೇನೆ. ಅವನಿಗೆ ಚನ್ನಾಗಿ ಬುದ್ಧೀ ಹೇಳಿ ಹಾದಿಗೆ ಹಚ್ಚಿರಿ. ಹುಡುಗರು ಈಗಿನಿಂದಲೆ ಅಡ್ಡ ದಾರಿ ತುಳಿಯತೊಡಗಿದರೆ ಮುಂದೆ ಅವರಿಗೇ ಅನಿಷ್ಟವು."

ಮಹಂತನ ಮಾತುಗಳನ್ನು ಕೇಳಿ ಮಾನಾಜಿರಾಯನು ಸಂತಪ್ತನಾದನು. ಆಗ ಅವನು ಗಂಭೀರವಾಣಿಯಿಂದ:—ಮಹಂತರೇ, ಹಂಬೀರರಾಯನ ಸ್ವಭಾವವನ್ನು ನಾನು ಚಿಕ್ಕಂದಿನಿಂದಲೇ ಬಲ್ಲೆನು. ಅವನು ಎಂದೂ ದುರ್ನಡತೆಯಿಂದ ನಡೆಯಲಾರನು. ಏನೋ ಒಂದು ದುಷ್ಟ ಕಾರಸ್ಥಾನದಿಂದ ಹಂಬೀರರಾಯನನ್ನು ಅಪರಾಧಿಯೆಂದು ಬೈಲಿಗೆಳೆದಿರಬಹುದು. ಮಹಂತಮಹಾರಾಜರೇ, ನೀವೂಸಹ ಕಾರಸ್ಥಾನೀ ಜನರ ಕುಟಿಲತನದಲ್ಲಿ ಸಹಕಾರಿಗಳಾಗಿರುವದನ್ನು ನೋಡಿ ವಿಷಾದವೆನಿಸುವದು. ಮುಂದೆ ನೀವು

ಅವನ ಹೆಸರು ತೆಗೆಯುವೆ ಇರುವದೇ ನಿಮಗೆ ಹಿತವೆಂದು ಸೂಚಿಸಿರುತ್ತೇನೆ. ನೀವು ನಡೆಯಿಸಿದ ಅನ್ಯಾಯಗಳ ಪಟ್ಟಿ ಶಿವಪ್ರಭುವಿನಲ್ಲಿರುವದು. ಮುಂದೆ ನಿಮ್ಮ ದುಷ್ಕೃತ್ಯಗಳ ಬಗ್ಗೆ ಪಶ್ಚಾತ್ತಾಪಪಡುವ ಪ್ರಸಂಗವೊದಗಬಹುದು. ಇನ್ನು ಮೇಲಾದರೂ ಜಾಗ್ರತೆಯಿಂದಿದ್ದರೆ ಎಷ್ಟೋ ಉತ್ತಮ."

ಮಾನಾಜಿರಾಯನು ಹೀಗೆ ಎಚ್ಚರಿಕೆ ಕೊಟ್ಟು ಸಭಾಮಂದಿರಕ್ಕೆ ಹೋಗಿ ಹಂಬೀರರಾಯನನ್ನು ಕುರಿತು:—"ಹಂಬೀರರಾಯಾ, ನಡೆ, ಮನೆಗೆ ಹೋಗೋಣ. ನಿನ್ನ ಕಡೆಗೆ ಶಿವಾಜಿ ಮಹಾರಾಜರದೊಂದು ಅವಸರದ ಕಾರ್ಯವಿದೆ."

ಹಂಬೀರರಾಯನು ಮಾನಾಜಿರಾಯನಿಗೆ ನಮಸ್ಕರಿಸಿ:—"ಕಾಕಾಸಾಹೇಬರೆ, ಮಹಾರಾಜರ ಕೆಲಸವು ನನ್ನ ಕಡೆಗಿರುವದೆ? ನಾನು ಮಹಾರಾಜರ ಸೇವೆಗಾಗಿ ಧಾವಿಸುವವನಿದ್ದೆನು. ನೀವು ಬಂದದ್ದು ಒಳಿತಾಯಿತು. ಈ ಅಧಮರು ನನಗೆ ಬಹಳವಾಗಿ ತೊಂದರೆ ಕೊಡತೊಡಗಿದ್ದರು. ಈ ವೇಳೆಯಲ್ಲಿ ನೀವು ಬರದಿದ್ದರೆ ಎಂಥ ಅನರ್ಥವಾಗುತ್ತಿತ್ತೋ ಏನೋ!"

"ಒಳ್ಳೇದು. ಈ ಘಟನೆಯ ಬಗ್ಗೆ ಹಿಂದಿನಿಂದ ವಿಚಾರ ಮಾಡೋಣ. ಇನ್ನು ಮುಂದೆ ನಿನಗೆ ಈ ಜನರಿಂದ ಎಂದೂ ತೊಂದರೆಯಾಗುವದಿಲ್ಲ. ನಡೆ, ಮನೆಗೆ ಹೋಗೋಣ."

ಹಂಬೀರರಾಯನು ಮಾನಾಜಿಯ ಮಾತುಗಳನ್ನು ಕೇಳಿ, ಸಂಭ್ರಮಗೊಂಡು, ಹೊಸದಾಗಿ ತನ್ನಲ್ಲಿ ವಿಶ್ವಾಸವಿಟ್ಟಿದ್ದ ಹಾಗು ತನ್ನ ಪ್ರಾಣವನ್ನು ಉಳಿಸಿದ ತಂಭುವನ್ನೂ ಬಿಲ್ಲಾಳನ್ನೂ ಕರೆದುಕೊಂಡು ಮಾನಾಜಿರಾಯನೊಡನೆ ತನ್ನ ಮನೆಗೆ ಬಂದನು. ಮಾನಾಜಿರಾಯನಿಂದ ತನ್ನ ಮಗನ ಜೀವದ ಮೇಲಿನ ಗಂಡಾಂತರವು ದೂರವಾದುದಕ್ಕಾಗಿ ಅವನನ್ನು ಮನಸ್ವಿಯಾಗಿ ಕೊಂಡಾಡಿದಳು.

ಆಗ ಮಹಂತ, ಧುಂಡಿರಾಜ, ಜಮಾದಾರ ಮೊದಲಾದವರ ಅವಸ್ಥೆ ಹೇಗಾಗಿರಬಹುದು?

---

## ೭ ಉತ್ಕರ್ಷೆಯ ಆಶಾಂಕುರ

ಮಾನಾಜಿರಾಯನ ಆಗಮನದಿಂದ ಜಯಾಬಾಯಿಗೆ ಅತ್ಯಂತ ಸಂಭ್ರಮವಾಗಿತ್ತು. ಅವಳು ಆದರದಿಂದ ಅವನಿಗೆ ಊಟ-ಉಪಚಾರ ಮಾಡಿಸಿದಳು. ಅನಂತರ ಹಂಬೀರರಾಯನೂ ಮಾನಾಜಿರಾಯನೂ ದಿವಾಣಖಾನೆ

ಯಲ್ಲಿ ಕುಳಿತುಕೊಂಡು ಯೋಗಕ್ಷೇಮದ ಬಗ್ಗೆ ಮಾತಾಡುತ್ತಿದ್ದರು. ಅಷ್ಟರಲ್ಲಿ ಜಯಾಬಾಯಿಯೂ ಊಟ ತೀರಿಸಿಕೊಂಡು ಬಂದಳು. ಅವಳು ಬಂದ ಕೂಡಲೆ ಮಾನಾಜಿರಾಯನು:—'ಅತ್ತಿಗೆಯವರೇ, ಎಲ್ಲವೂ ಸುಖರೂಪವೇ? ಎಂದು ವಿಚಾರಿಸಿದನು.

"ಮಾನಾಜಿರಾಯರೇ, ಸುಖರೂಪವೆಂದೇ ಹೇಳಬೇಕು. ಅವರು ಹೋದ ಮೇಲೆ ನಿಮಗೆ ಬಡವರಾದ ನಮ್ಮ ನೆನಪಾಗಲಿಲ್ಲ. ಯಾಕೋ ಈಗ ನೆನಪಾಗಿ ಬಂದಿರಿ. ನೀವು ನಮ್ಮನ್ನು ಪೂರಾ ಮರೆತಿರುವಿರೆಂದು ಗ್ರಹಿಸಿದ್ದೆನು. ಬಹಳ ದಿವಸಗಳ ಮೇಲಾದರೂ ನಮ್ಮ ನೆನಪಾದುದಕ್ಕಾಗಿ ಆನಂದವಾಗಿದೆ."

"ನಾನು ನಿಮ್ಮನ್ನು ಮರೆತವನೆಂದು ತಿಳಿಯಬೇಡಿರಿ. ದಿನಕ್ಕೊಮ್ಮೆಯಾದರೂ ನಾನು ನಿಮ್ಮನ್ನು ನೆನೆಯುತ್ತೇನೆ. ಜೀವದ ಮಿತ್ರನ ಮನೆತನದವರನ್ನು ಮರೆಯುವೆನೆ? ಮಹಾರಾಜರ ದಂಡಯಾತ್ರೆಯ ಗೊಂದಲದಲ್ಲಿ ಇಲ್ಲಿಗೆ ಬರಲಿಕ್ಕೆ ನನಗೆ ಅನುಕೂಲವಾಗಲಿಲ್ಲ. ನೀವು ಬಡವರೆ? ಈ ಅಮೌಲ್ಯವಾದ ಪುತ್ರರತ್ನವು ನಿಮ್ಮಲ್ಲಿರುವಾಗ ನೀವು ಬಡವರು ಹೇಗೆ?" ಎಂದು ನುಡಿದು, ಮಾನಾಜಿರಾಯನು ಹಂಬೀರರಾಯನ ಬೆನ್ನು ತಟ್ಟಿದನು.

"ರತ್ನವೇನೋ ನಿಜವು. ಒಂದು ಮೂಲೆಯಲ್ಲಿ ಹುಡಿ ತಿನ್ನುತ್ತ ಬಿದ್ದರೆ ಆ ರತ್ನದ ಬೆಲೆಯೇನು? ನಿಮ್ಮಂತಹ ಕುಶಲ ಕೈಗಾರಿಕೆಯವರ ಕೈಯಲ್ಲಿದ್ದರೆ ರತ್ನವು ಪ್ರಕಾಶಮಾನವಾಗುವದು. ನಮ್ಮ ಹಂಬೀರನು ಇಲ್ಲಿರುವದು ತುಂಬಾ ಘಾತುಕವಿರುವದು. ಮಠದ ಮಹಂತ ಧನಗಿರಿಯೂ ಅವನ ದಿವಾಣನಾದ ಘುಂಡಿರಾಜನೂ ನಮ್ಮ ಮತ್ತ ಕೈತೊಳೆದುಕೊಂಡು ಬೆನ್ನ ಹತ್ತಿರುವರು" ಎಂದು ಹೇಳಿ, ಜಯಾಬಾಯಿಯು ಅವರ ಕಾರಸ್ಥಾನವನ್ನೂ ಹಂಬೀರರಾಯನ ಮೇಲೆ ಬಂದ ಸಂಕಟವನ್ನೂ ನಿವೇದಿಸಿದಳು.

"ನೀಚ ಮನೋವೃತ್ತಿಯ ಜನರಿಗೆ ತಕ್ಕ ಪ್ರಾಯಶ್ಚಿತ್ತವು ದೊರೆತೇ ದೊರೆಯುವದು." ಎಂದು ಮಾನಾಜಿರಾಯನು ನುಡಿದು;—"ಅತ್ತಿಗೆಯವರೇ ನೀವು ಇನ್ನು ಮೇಲೆ ನಿಶ್ಚಿಂತರಾಗಿರಿ. ಹಂಬೀರರಾಯನು ಈಗ ದೊಡ್ಡವನಾಗಿರುವನು. ನಾನು ಶಿವಾಜಿ ಮಹಾರಾಜರ ಕಿವಿಯ ಮೇಲೆ ಇವನ ವಿಷಯವನ್ನು ಹಾಕಿರುವೆನು. ತೇಜಸ್ವಿ ತರುಣನಾದ ಹಂಬೀರರಾಯನನ್ನು ಕೈಯಲ್ಲಿ ತೆಗೆದುಕೊಂಡು ಚನ್ನಾಗಿ ನುರಿಸಬೇಕೆಂದು ಅವರು ನನಗೆ ಆಜ್ಞಾ

ಪಿಸಿರುವರು. ನೀವು ಇವನನ್ನು ನನ್ನೊಡನೆ ದಂಡಯಾತ್ರೆಗಾಗಿ ಕಳುಹಿಸಲು ಸಿದ್ಧರಿರುವಿರಷ್ಟೆ?''

ಶಿವಪ್ರಭುವಿನ ಕಿವಿಯವರೆಗೆ ತನ್ನ ಹೆಸರು ಹೋದದ್ದನ್ನು ಕೇಳಿ ಹಂಬೀರರಾಯನು ಹಿಗ್ಗಿದನು. ಜಯಾಬಾಯಿಯಾದರೂ ಸಂತುಷ್ಟಳಾದಳು. ಅವಳು:-"ಮಹಾರಾಜರೇ, ವೈದ್ಯ ಹೇಳಿದ್ದೂ ಅದೇ, ರೋಗಿ ಬಯಸಿದ್ದೂ ಅದೇ; ನಾನು ಇಷ್ಟು ದಿನಗಳ ವರೆಗೆ ಯಾವುದಕ್ಕಾಗಿ ಹಂಬಲಿಸುತ್ತಿದ್ದೆನೋ, ಆ ಸಂಧಿಯು ತಾನಾಗಿ ನಡೆದು ಬಂದಾಗ ಯಾರು ಬೇಡವೆನ್ನುವರು? ನೀವು ಇವನಿಗೆ ಹಿರಿಯರ ಸ್ಥಾನದಲ್ಲಿರುವಿರಿ. ಇವನಿಗೆ ಒಳ್ಳೇ ಶಿಕ್ಷಣ ಕೊಟ್ಟು ಮುಂದೆ ತರುವ ಭಾರವು ನಿಮ್ಮನ್ನೇ ಕೂಡಿದೆ. ನಾನು ಇಂದೇ ಇವನನ್ನು ನಿಮ್ಮ ವಶಕ್ಕೆ ಕೊಡುವೆನು. ಇವನು ನನ್ನ ಮಗನಲ್ಲ; ನಿಮ್ಮ ಮಗನು."

"ಅತ್ತಿಗೆಯವರೆ, ನಿಮ್ಮ ಮಗನು ಪ್ರಭಾವಶಾಲಿಯಿರುವನು. ಪ್ರತಿಭಾಸಂಪನ್ನರಾದ ತರುಣರು ಮುಂದೆ ಬರಲಿಕ್ಕೆ ಮಹಾರಾಜರು ಚನ್ನಾಗಿ ಸಂಧಿಯನ್ನು ಕಲ್ಪಿಸಿ ಕೊಟ್ಟಿರುವರು. ಸಂಧಿ ದೊರೆಯದಾಗ ಎಂಥ ತೇಜಸ್ವಿಗಳಿದ್ದರೂ ಏನೂ ಕೆಲಸವಾಗುವದಿಲ್ಲ. ಅತ್ಯಾಚಾರಿಗಳಾದ ಯವನ ಸಾಮ್ರಾಜ್ಯವನ್ನು ನಷ್ಟಪಡಿಸಿ ಹಿಂದುಪದಪಾತಶಾಹಿಯನ್ನು ಸ್ಥಾಪಿಸಬೇಕೆನ್ನುವದೇ ಮಹಾರಾಜರ ಹೆಗ್ಗುರಿಯಾಗಿದೆ. ಈಗ ಹಿಂದು ಜನತೆಯು ಸ್ವರಾಜ್ಯಸೋಪಾನವನ್ನು ಮೆಲ್ಲಮೆಲ್ಲಗೆ ಏರತೊಡಗಿದೆ. ಇಂಥ ಕಾಲದಲ್ಲಿ ಹಂಬೀರರಾಯನಂಥ ರಾಷ್ಟ್ರಾಭಿಮಾನಿಗಳೂ ಸಾಹಸಿಗಳೂ ಸ್ವಾರ್ಥತ್ಯಾಗಿಗಳೂ ಆದ ತರುಣರು ಪ್ರಭುವಿಗೆ ಬಹಳವಾಗಿ ಬೇಕಾಗಿದ್ದಾರೆ. ಯವನರು ನಮಗೆ ಹೇಗೆ ವೈರಿಗಳೋ, ಹಾಗೆಯೆ ಅವರ ಕೈಯೊಳಗಿನ ಹಿಂದು ಅಧಿಕಾರಿಗಳೂ ನಮಗೆ ವೈರಿಗಳೇ ಆಗಿರುವರು. ಮಹಂತ ಘುಂಡಿರಾಜರಂಥವರು ಸ್ವಜನರ ಕುತ್ತಿಗೆ ಕೊಯ್ಯುವ ಕೆಲಸ ಮಾಡುತ್ತಿರುವದರಿಂದ ಅವರು ಯವನರಿಗಿಂತ ಹೆಚ್ಚಿನ ವೈರಿಗಳು. ಇಂಥ ಜನರ ಪಾರುಪತ್ಯ ಮಾಡುವದೂ ಆವ್ಯಕರ್ತವ್ಯವೆಂದು ಮಹಾರಾಜರು ತಿಳಿದುಕೊಂಡಿದ್ದಾರೆ. ಅವರು ಕೊಂಕಣದ ದಂಡಯಾತ್ರೆಯನ್ನು ಮುಗಿಸಿಕೊಂಡು ರಾಜಗಡದಲ್ಲಿ ವಸತಿಮಾಡಿದ್ದಾರೆ. ಈ ಪ್ರಾಂತದಲ್ಲಿಯ ಯವನ ಸುಭೇದಾರರೂ ಇತರ ಅಧಿಕಾರಿಗಳೂ ಹಿಂದುಗಳ ಮೇಲೆ ಅತ್ಯಾಚಾರ ನಡೆಯಿಸಿರುವರೆಂಬ ಸುದ್ದಿಯು ಮಹಾರಾಜರ ಕಿವಿಯ ಮೇಲೆ ಬಂದಿದೆ. ಆದ್ದರಿಂದ ಈ ಪ್ರಾಂತದಲ್ಲಿ ತಿರುಗಾಡಿ ಸೂಕ್ಷ್ಮವಿಚಾರಣೆ ಮಾಡಿಕೊಂಡು,

ವಸ್ತುಸ್ಥಿತಿಯನ್ನು ತಿಳಿದುಕೊಂಡು ಬರಲಿಕ್ಕೆ ಅವರು ನನಗೆ ಆಜ್ಞೆವಿಧಿಸಿರುವರು. ಈ ಪ್ರಾಂತದಲ್ಲಿ ತಿರುಗಾಡುವಾಗ ನನ್ನ ಕಿವಿಗೆ ಅನೇಕ ದೂರುಗಳು ಬಂದಿವೆ. ದೇವ-ಮಂದಿರಗಳ ಹಾಗು ಆಕಳುಗಳ ನಾಶವು ಇಲ್ಲಿ ಮಿತಿಮೀರಿದೆ. ಕುಲೀನ ತರುಣಿಯರ ಶೀಲಮಾನಗಳನ್ನು ಜತನ ಮಾಡುವದು ದಿನದಿನಕ್ಕೆ ಕಠಿಣವಾಗತೊಡಗಿದೆ. ವಿತ್ತ-ಸ್ವತ್ತುಗಳ ಶಾಶ್ವತಿಯು ಇಲ್ಲದಂತಾಗಿದೆ. ಅಡವಿಗೆ ಹೋದ ದನಗಳು ತಿರುಗಿ ಊರು ಕಾಣುವವೆಂಬ ಭರವಸೆಯು ಉಳಿದಿರುವದಿಲ್ಲ. ಸಿದ್ಧವಾದ ಬೆಳೆಯು ಮನೆಯನ್ನು ಸೇರುವದೆಂಬ ನಂಬಿಕೆಯು ಇರುವದಿಲ್ಲ. ಇಲ್ಲಿಯ ಎಲ್ಲ ಸಂಗತಿಗಳನ್ನು ನಾನು ಮಹಾರಾಜರಿಗೆ ಬೇಗನೆ ತಿಳಿಸಬೇಕಾಗಿದೆ. ಈ ಭಾಗದಲ್ಲಿರುವ ಅತುಲಗಡ ಕೋಟೆಯನ್ನು ಸ್ವಾಧೀನ ಪಡಿಸಿಕೊಂಡು ಯವನರನ್ನು ಈ ಪ್ರಾಂತದಿಂದ ಓಡಿಸಬೇಕೆಂದು ಮಹಾರಾಜರ ಯೋಜನೆಯಿದೆ. ಒಮ್ಮೆ ಅವರನ್ನು ಇತ್ತ ಕಡೆಗೆ ಕರೆದುಕೊಂಡು ಬರಬೇಕೆಂದು ನಾನು ವಿಚಾರ ಮಾಡಿರುವೆನು. ಅವರು ಇತ್ತ ಬಂದರೆ ನಿಮ್ಮ ಮನೆಯಲ್ಲಿ ಒಂದು ದಿನ ವಸತಿ ಮಾಡಿಸಬೇಕೆಂದು ನನ್ನ ಇಚ್ಛೆಯಿದೆ.''

ಮಾನಾಜಿರಾಯನ ಮಾತುಗಳನ್ನು ಕೇಳಿ ಜಯಾಬಾಯಿಯು ಸ್ವಾನಂದ ಸಾಮ್ರಾಜ್ಯದಲ್ಲಿ ಮುಳುಗಿದಳು. ಇನ್ನು ತನ್ನ ದುರ್ದಿನಗಳು ಮುಗಿದವೆಂದೇ ಅವಳ ಭಾವನೆಯಾಯಿತು. ಅವಳು ಉತ್ಕಂಠೆಯಿಂದ:—"ಮಾನಾಜಿರಾಯರೆ, ಮಹಾರಾಜರನ್ನು ನಮ್ಮ ಮನೆಗೆ ಕರೆದುಕೊಂಡು ಬರುವದು ನಿಜವೆ? ಅಂಥ ದೊಡ್ಡ ಮನುಷ್ಯರು ಬಡವರಾದ ನಮ್ಮ ಮನೆಗೆ ಬರಲು ಒಪ್ಪಬಹುದೆ? ಅವರ ಪಾದಧೂಳಿಯಿಂದ ನಮ್ಮ ಮನೆಯು ಪವಿತ್ರವಾಗಬಹುದೇ? ಅವರ ದರ್ಶನದಿಂದ ನನ್ನ ನೇತ್ರಗಳು ಸಾಫಲ್ಯತೆ ಹೊಂದಬಹುದೆ? ಮಹಾರಾಜರಂಥವರ ಆತಿಥ್ಯಮಾಡುವ ಸಂಧಿಯೊದಗಿದರೆ ನಮ್ಮಂಥ ಭಾಗ್ಯಶಾಲಿಗಳು ಯಾರೂ ಇಲ್ಲವೆಂದು ನಾನು ತಿಳಿಯುವೆನು."

"ಮಹಾರಾಜರು ಗುಣಗ್ರಾಹಿಗಳಿರುವರು. ರಾಷ್ಟ್ರಪ್ರೇಮಿ ಜನರನ್ನು ಕಂಡರೆ ಅವರಿಗೆ ತುಂಬ ಆದರ. ಅಂಥ ಜನರನ್ನು ಅವರು ಸಮಾನಸ್ಕಂಧರೆಂದು ಭಾವಿಸುವರು. ನೀವು ಅವರನ್ನು ನೋಡಿದರೆ ನನ್ನ ಮಾತಿನ ನಂಬಿಗೆಯಾಗುವದು" ಎಂದು ಮಾನಾಜಿರಾಯನು ನುಡಿದು, ಹಂಬೀರರಾಯನ ಕಡೆಗೆ ನೋಡಿ:—"ಹಂಬೀರರಾಯಾ, ನೀನು ಮಹಾರಾಜರ ಹಾಗು ಅವರ ಅನುಯಾಯಿಗಳ ಆತಿಥ್ಯದ ವ್ಯವಸ್ಥೆಯನ್ನು ಮಾಡುವೆಯಾ?"

"ಕಾಕಾಸಾಹೇಬ, ಅವರ ಬರುವಿಕೆಯಿಂದರೆ ಮಹದ್ಭಾಗ್ಯವೇ ಸರಿ. ಅಂಥ ಜನರು ಬಂದರೆ ಆತಿಥ್ಯ ಮಾಡದೆ ಇರುವೆನೆ? ಮಹಾರಾಜರು ತಮ್ಮ ತಮ್ಮ ಪಥಕದೊಂದಿಗೆ ಬಂದರೆ ಬಡವನಾದ ನನ್ನಿಂದ ಅವರಿಗೆ ಯೋಗ್ಯವಾದ ರೀತಿಯಿಂದ ಸತ್ಕಾರ ಮಾಡಲು ಸಾಧ್ಯವಾಗುವದೋ ಇಲ್ಲವೋ" ಎಂದು ಹಂಬೀರರಾಯನು ಸಾಶಂಕನಾಗಿ ನುಡಿದನು.

"ನಿನ್ನ ಮಾತಿನಲ್ಲಿ ತಥ್ಯಾಂಶವಿದೆ, ಆದರೆ ಮಹಾರಾಜರು ತೀರ ಸಾಧಾರಣಪ್ರತಿಯವರಿರುವರು. ಅವರು ನಮ್ಮ-ನಿಮ್ಮಲ್ಲಿ ಕೂಡಿಕೊಂಡು ಹೋಗುವಂಥವರು. ಪಲ್ಲೆ-ರೊಟ್ಟಿಗಳನ್ನೇ ಪಂಚಪಕ್ವಾನ್ನವೆಂದು ಭಾವಿಸುವರು. ಅವರು ತಮ್ಮ ಎಲ್ಲ ದಳಗಳನ್ನು ಇಲ್ಲಿಗೆ ತರುವದಿಲ್ಲ. ನಾಲ್ಕೆಂಟು ಜನರೊಂದಿಗೆ ಬರುತ್ತಾರೆ. ಅಲ್ಲದೆ ಅವರ ವ್ಯವಸ್ಥೆಯು ಸರಕಾರೀ ವೆಚ್ಚದಿಂದ ನಡೆಯುವದು. ಕೇವಲ ನಿನ್ನ ಅಭ್ಯುದಯದ ಸಲುವಾಗಿಯೇ ಮಹಾರಾಜರನ್ನು ಇಲ್ಲಿಗೆ ಕರೆತರುವ ಯೋಚನೆ ಮಾಡಿದ್ದೇನೆ."

"ಮಾನಾಜಿರಾಯರೆ, ಮಹಾರಾಜರಂಥ ಜನರು ಬಂದರ ಅವರಿಗೆ ನನ್ನ ಮನೆಯಲ್ಲಿದ್ದ ಪಲ್ಲೆ-ರೊಟ್ಟಿ ಕೊಡಲಿಕ್ಕಾಗುವದಿಲ್ಲವೆ? ಸರಕಾರೀ ವೆಚ್ಚದಿಂದ ವಸತಿ ಮಾಡುವವರಾದರೆ ನನ್ನ ಮನೆಯಲ್ಲಿ ಯಾಕೆ ಕರೆತರಬೇಕು? ಮಹಾರಾಜರಂಥ ಪುಣ್ಯಶ್ಲೋಕರ ಆತಿಥ್ಯ ಮಾಡುವ ಭಾಗ್ಯವು ಸುಮ್ಮನೆ ಬರುವದೆ? ಮನೆ-ಮಾರುಗಳನ್ನು ಮಾರುವೆವು; ಜೀವವನ್ನು ಅಡವು ಇಡುವೆವು. ಮಹಾರಾಜರ ಆತಿಥ್ಯವನ್ನು ಅವರ ಮರ್ಯಾದೆಗೆ ಸರಿಯಾಗಿ ಮಾಡುವೆವು." ಎಂದು ಜಯಾಬಾಯಿಯು ತನ್ನ ಮನೋನಿಶ್ಚಯವನ್ನು ಪ್ರದರ್ಶಿಸಿದಳು.

"ನಿಮ್ಮ ಇಚ್ಛೆಯಿದ್ದಂತೆ ಮಾಡಬಹುದು. ನಿಮ್ಮ ಭಕ್ತಿ-ಭಾವಗಳಿಗೆ ನನ್ನ ವಿರೋಧವಿಲ್ಲ" ಎಂದು ಮಾನಾಜಿರಾಯನು ಜಯಾಬಾಯಿಗೆ ಹೇಳಿ, ಹಂಬೀರರಾಯನನ್ನು ಕುರಿತು:—"ಹಂಬೀರರಾಯಾ, ವಿರಕ್ತಮಠದ ಸ್ವಾಮಿಯಾದ ಧನಗಿರಿ ಮಹಂತನು ಸರ್ವಸಂಗ ಪರಿತ್ಯಾಗಿಯ ವೇಷದಲ್ಲಿದ್ದರೂ ಹೆಚ್ಚಿನ ಲೋಭಿಯೂ ದೌರ್ಜನ್ಯವುಳ್ಳವನೂ ಇದ್ದಂತೆ ತೋರುವದು. ಧುಂಡಿರಾಜನಂತೂ ನರರಾಕ್ಷಸನೆಂದೇ ನನಗೆ ತೋರುವದು."

"ಕಾಕಾಸಾಹೇಬ, ಮಹಂತನು ಮೊದಲು ಈ ಪರಿಯಾಗಿ ನೀಚ ಮನೋವೃತ್ತಿಯವನಿರಲಿಲ್ಲ. ಧುಂಡಿರಾಜನ ಸಹವಾಸದಿಂದ ಅವನ ಮನೋವೃತ್ತಿಯು ವಿಪರೀತವಾಗುತ್ತ ನಡೆದಿದೆ. ನಮ್ಮ ಜಹಾಗೀರಿಯು ನಷ್ಟವಾಗ

ಲಿಕ್ಕೆ ಧುಂಡಿರಾಜನೂ ಮಹಂತನೂ ಹೇಗೆ ಕಾರಣೀಭೂತರಾದರೆಂಬುದನ್ನು ನೀವು ಬಲ್ಲಿರಿ. ಇವರಿಗೆ ವಿಜಾಪುರದ ಯವನ ಸುಭೇದಾರರ ಬೆಂಬಲವಿದೆ. ಆ ಬಲದಿಂದ ಇವರು ಎಂಥ ಅತ್ಯಾಚಾರಗಳನ್ನಾದರೂ ಮಾಡಲು ಸಿದ್ಧರಾಗಿದ್ದಾರೆ. ಮಠದ ವೈಭವವನ್ನು ಚಿಕೆಯಿಸಿದರೆ ತನ್ನ ವೈಭವವಾದರೂ ಹೆಚ್ಚುವದೆಂಬ ವಿಶ್ವಾಸವು ಧುಂಡಿರಾಜನಿಗಿದ್ದುದರಿಂದ ಅವನು ಬೇಕಾದಂಥ ಅನ್ಯಾಯಗಳನ್ನು ಮಾಡಲು ಸಿದ್ಧನಾಗಿದ್ದಾನೆ. ಹೆಚ್ಚಿನ ರಾಕ್ಷಸೀ ಕೃತ್ಯಗಳಲ್ಲಿ ತಾನು ಮುಂದಾಗುವನು. ಅಂಥ-ಇಂಥ ಕಿರುಕುಳ ಕೆಲಸಗಳಲ್ಲಿ ಮಹಂತನನ್ನು ಮುಂದೆ ಮಾಡುವನು. ತನ್ನ ಅನ್ಯಾಯಗಳನ್ನು ಮುಚ್ಚಿಕೊಳ್ಳುವದಕ್ಕಾಗಿ ಮಹಂತನು ಧುಂಡಿರಾಜನ ಮುಖಾಂತರ ಲಂಚವನ್ನು ಸುಭೇದಾರನಿಗೆ ಕೊಡುವನು. ಈ ನಾಡಿನಲ್ಲಿರುವ ಸುಲಿಗೆಗಾರರಲ್ಲಿ ಬಹು ಜನರು ಧುಂಡಿರಾಜನ ಹಸ್ತಕರಿರುವರು. ಅವರ ಸುಲಿಗೆಯೊಳಗಿನ ಕೆಲ ಭಾಗವು ಮಠಕ್ಕೆ ತಲುಪುವದು. ಬಡ್ಡಿಯ ವ್ಯವಸಾಯವಂತು ವಿಚಿತ್ರವಿರುವದು. ಯಾವನಾದರೂ ಒಮ್ಮೆ ಹಣ ಒಯ್ದರೆ ಅವನ ಮನೆತನವು ಉಳಿಯುವದೇ ಕಷ್ಟ. ಇವರು ಎಲ್ಲ ವ್ಯಾಪಾರ-ಉದ್ಯಮಗಳಲ್ಲಿ ಕೈಹಾಕಿ ಬಡ ವರ್ತಕರ ಹೊಟ್ಟೆಯ ಮೇಲೆ ಕಾಲುಕೊಟ್ಟಿರುವರು. ದೇವಗಾವಿಯ ಜಹಾಗೀರಿಯನ್ನು ಪಡೆಯುವ ಬಗ್ಗೆ ಮಹಂತನು ಬಹಳ ಪ್ರಯತ್ನ ನಡೆಯಿಸಿರುವನು. ಅವನು ಊರು ಸುಲಿಯುವದಲ್ಲದೆ, ಅಡವಿಯೊಳಗಿನ ಪಾಂಥಸ್ಥರನ್ನೂ ಬಹಳವಾಗಿ ಸುಲಿಸುವನೆಂಬ ಸುದ್ದಿಯಿದೆ. ಧುಂಡಜಿಯೆಂಬ ಪುಂಡ ಮರಾಠಿಗನನ್ನು ಇವನು ಅಡವಿಯ ಸುಲಿಗೆಗಾರರ ತಂಡದ ನಾಯಕನನ್ನು ಮಾಡಿರುವನು. ಧುಂಡಜಿಯು ಸುಲಿಗೆಯೊಳಗಿನ ಕೆಲವಂಶವನ್ನು ಮಠಕ್ಕೆ ಸಲ್ಲಿಸುವನು. ಆ ಹಣದೊಳಗಿನ ಕೆಲವು ಭಾಗವು ಸುಭೇದಾರನಿಗೆ ಸಲ್ಲುವದು. ಹೀಗಾಗಿ ಧುಂಡಜಿಯ ಪಾರುಪತ್ಯ ಮಾಡುವವರೇ ಇಲ್ಲದಂತಾಗಿದೆ. ಪ್ರವಾಸಿಗಳ ಗೋಳನ್ನು ಶಿವಪ್ರಭುವೇ ಕೇಳಬೇಕಲ್ಲದೆ ಅನ್ಯರಿಂದ ಸಾಧ್ಯವಿಲ್ಲ."

ಹಂಬೀರರಾಯನು ಅನೇಕ ಹೊಸ ಸಂಗತಿಗಳನ್ನು ತಿಳಿಸಿದ್ದರಿಂದ ಮಾನಾಜಿರಾಯನಿಗೆ ಆ ಪ್ರಾಂತದ ಎಲ್ಲ ವಿಷಯಗಳು ಗೊತ್ತಾದವು. ಆ ಪ್ರಾಂತವನ್ನು ಸ್ವರಾಜ್ಯದಲ್ಲಿ ಕೂಡಿಸಿಕೊಳ್ಳದಿದ್ದರೆ ಅಲ್ಲಿಯ ಜನತೆಯ ಪಾಡು ಒಳಿತಾಗಲಾರದೆಂದು ಅವನು ಬಗೆದನು. ಆಗ ಅವನು—"ಹಂಬೀರರಾಯಾ, ನೀನು ಕೆಲ ದಿನ ನನ್ನೊಡನೆ ಕೆಲಸ ಮಾಡುತ್ತಿರು. ಪ್ರತ್ಯಕ್ಷ ಯುದ್ಧ ಮಾಡದೆ

ಅವರ ಅನುಭವವಾಗದು. ನೀನು ಎಷ್ಟೇ ಶೂರನೂ ಸಾಹಸಿಯೂ ಎದೆಗಾರನೂ ಇದ್ದರೂ ನಿನಗೆ ಕೆಲವು ಅನುಭವದ ಆವಶ್ಯಕತೆಯುಂಟು. ಕೆಲವು ದಿನ ನನ್ನ ಸಂಗಡ, ದಂಡಯಾತ್ರೆಯಲ್ಲಿದ್ದರೆ ನಿನಗೆ ಯುದ್ಧದ ಅನುಭವವಾಗುವದು. ಅನಂತರದಲ್ಲಿ ಈ ಪ್ರಾಂತದ ವ್ಯವಸ್ಥೆಯನ್ನು ನಿನ್ನ ಕಡೆಗೆ ಒಪ್ಪಿಸುವ ಸಂದರ್ಭವು ಉಂಟಾಗಬಹುದು. ಯಾಕೆಂದರೆ ನೀನು ಇಲ್ಲಿಯ ಎಲ್ಲ ಸ್ಥಳಗಳ ಪೂರ್ಣ ಪರಿಚಯವುಳ್ಳವನಿರುವಿ. ಮಹಾರಾಜರಿಗೆ ಹೇಳಿ ನಿನ್ನನ್ನು ಇಲ್ಲಿಯ ವ್ಯವಸ್ಥೆಗಾಗಿ ನಿಯಮಿಸುವಂತೆ ಮಾಡಬೇಕೆಂಬ ವಿಚಾರ ಮಾಡಿದ್ದೇನೆ."

ಮಾನಾಜಿರಾಯನ ಭಾಷಣವು ಹಂಬೀರರಾಯನಿಗೆ ಸ್ಫೂರ್ತಿಯನ್ನುಂಟು ಮಾಡಿತು. ಪುತಳಾಬಾಯಿಯೂ ಆನಂದಭರಿತಳಾದಳು. ಅವಳು:-
"ಮಾನಾಜಿರಾಯರೆ, ಹಂಬೀರರಾಯನ ವಿಷಯವಾಗಿ ನನ್ನಲ್ಲಿದ್ದ ಚಿಂತೆಯು ತೊಲಗಿತು. ಅವನ ಯೋಗಕ್ಷೇಮದ ಭಾರವು ಅನಾಥಳಾದ ನನ್ನ ಮೇಲಿದ್ದದರಿಂದ ಬಹಳೇ ಚಿಂತನೆಗೊಳಗಾಗಿದ್ದೆನು. ಇಂದು ನನ್ನ ಮೇಲಿನ ದೊಡ್ಡ ಭಾರವು ಇಳಿದಂತಾಯಿತು. ನನ್ನ ಹಂಬೀರನು ಪ್ರತಾಪಶಾಲಿಯಿದ್ದುದರಿಂದ ಗತವೈಭವವನ್ನು ದೊರಕಿಸಬಹುದು. ಶಿವಪ್ರಭುವಿನ ಸ್ವರಾಜ್ಯಮಂದಿರ ಪ್ರವೇಶಕ್ಕೆ ಸೋಪಾನದಂತೆ ಅನುಕೂಲಿಸಬಹುದು."

"ಅತ್ತಿಗೆಯವರೆ, ಸ್ವಲ್ಪ ದಿನಗಳಲ್ಲಿಯೆ ಹಂಬೀರರಾಯನು ದೊಡ್ಡಸ್ತಿಕೆ ಹೊಂದಿದ್ದನ್ನು ಕಣ್ಣಾರೆ ಕಾಣುವಿರಿ. ಮಹಾರಾಜರು ಗುಣಗ್ರಾಹಿಗಳಿರುವದರಿಂದ ಹಂಬೀರರಾಯನಂಥ ತೇಜಸ್ವಿಗಳಾದ ತರುಣರು ಪ್ರಗತಿಪಥವನ್ನು ಹೊಂದಲಿಕ್ಕೆ ಸಂಧಿ ದೊರೆಯುವದು. ಒಂದು ವಾರದೊಳಗಾಗಿ ಮಹಾರಾಜರನ್ನು ಇಲ್ಲಿಗೆ ಕರೆತರುವೆನು. ಅವರನ್ನು ಕಂಡ ಮೇಲೆ ನಿಮಗೆ ನನ್ನ ಮಾತುಗಳು ಪ್ರತ್ಯಯಕ್ಕೆ ಬರುವವು."

ಕಾಕಾಸಾಹೇಬರೆ, ನಿಮ್ಮ ಭೆಟ್ಟಿಯು ನಮಗೆ ಅಮೃತೋಪಮವಾಯಿತು. ದೂರದ ಪ್ರವಾಸ ಮಾಡಿದ್ದರಿಂದ ದಣಿದಿರುವಿರಿ. ವಿಶ್ರಾಂತಿ ತೆಗೆದುಕೊಳ್ಳಿರಿ. ನಾಳೆ ಮತ್ತೆ ಮಾತಾಡೋಣ." ಎಂದು ಹಂಬೀರರಾಯನು ನುಡಿದು ಅಲ್ಲಿಂದ ಎದ್ದನು.

"ನಾಳೆ ಬೆಳಿಗ್ಗೆ ನಾನು ಇಲ್ಲಿಂದ ಹೊರಡಲೇಬೇಕು. ನಾನು ಬೇಗನೆ ಮಹಾರಾಜರನ್ನು ಕಾಣಬೇಕಾಗಿದೆ. ನಿಷ್ಕಾರಣವಾಗಿ ಒಂದು ದಿನವನ್ನಾದರೂ ಕಳೆಯಲು ಬರುವಂತಿಲ್ಲ. ಸ್ವರಾಜ್ಯ ಪ್ರತಿಷ್ಠಾಪನೆಯಾಗುವವರೆಗೆ

ವಿಶ್ರಾಂತಿಯನ್ನು ಹೊಂದತಕ್ಕದ್ದಲ್ಲವೆಂಬೇ ಮಹಾರಾಜರ ಆದೇಶವಿದೆ."

"ನಿಮ್ಮ ಇಚ್ಛೆಯಿದ್ದಂತಾಗಲಿ." ಎಂದು ಹಂಬೀರರಾಯನು ಹೇ.. ಮಾನಾಜಿರಾಯನಿಗೆ ಮಲಗುವ ವ್ಯವಸ್ಥೆ ಮಾಡಿಸಿದನು. ಅನಂತರ ಜಯಾಬಾಯಿಯೂ ಹಂಬೀರರಾಯನೂ ಅಲ್ಲಿಂದ ಹೊರಟರು.

ಮಾರನೆಯ ದಿನ ಉಷಃಕಾಲಕ್ಕೆದ್ದು, ಮಾನಾಜಿರಾಯನು ಹಂಬೀರರಾಯನ ಹಾಗು ಜಯಾಬಾಯಿಯ ನಿರೋಪ ತೆಗೆದುಕೊಂಡು ತನ್ನ ಜನರೊಡನೆ ಹೊರಟನು.

---

## ೫ ರತ್ನಖಚಿತ ಕಠಾರಿ

ಜಹಾಗೀರಿಯು ಹೋದಾಗಿನಿಂದ ಜಯಾಬಾಯಿಯ ಸಾಂಪತ್ತಿಕ ಸ್ಥಿತಿಯು ಬಹಳೇ ನಿಕೃಷ್ಟವಾಗಿತ್ತು. ಅವಳಿಗೆ ತನ್ನ ಹಾಗು ತನ್ನ ಮಗನ ಚರಿತಾರ್ಥವನ್ನು ಸಾಗಿಸಬೇಕಾದರೆ ಸಾಕುಸಾಕಾಗಿ ಹೋಗುತ್ತಿತ್ತು: ಮನೆಯಲ್ಲಿ ಧನಕನಕವೇನೂ ಇದ್ದಿಲ್ಲ; ಅವಳ ಸದ್ಯದ ಪರಿಸ್ಥಿತಿಯನ್ನು ನೋಡಿ ಯಾವ ಸಾವಕಾರರೂ ಸಾಲಕೊಡುತ್ತಿದ್ದಿಲ್ಲ. ಮಠದ ಮಹಂತನಲ್ಲಿಗೆ ಹೋದರೆ ಬಡ್ಡಿಗೆ ಬಡ್ಡಿ ಹಚ್ಚಿ ಎಲ್ಲ ಭೂಮಿಗಳನ್ನು ನುಂಗುವನಲ್ಲಿಯೋ ಎಂಬ ಭಯ. ಹೀಗಾಗಿ ಹೊರಗಿನಿಂದ ಹಣಮೊರೆಯುವ ಮಾರ್ಗವು ಅವಳಿಗೆ ತೀರ ಕಟ್ಟಾಗಿ ಹೋಗಿತ್ತು. ಇಂಥ ಸ್ಥಿತಿಯಲ್ಲಿ ಶಿವಾಜಿಮಹಾರಾಜನ ಆತಿಥ್ಯದ ದೊಡ್ಡ ಭಾರವು ಬಿದ್ದುದರಿಂದ ಅವಳು ಯೋಚನೆಗೊಳಗಾಗಿದ್ದಳು. ತಾಯಿಯ ಅವಸ್ಥೆಯನ್ನು ನೋಡಿ ಹಂಬೀರರಾಯನೂ ಚಿಂತೆಗೊಳಗಾದನು. ದಾರಿದ್ರ್ಯದಂಥ ವೈರಿಯೇ ಇಲ್ಲವೆಂಬ ಅನುಭವವು ಆಗ ಅವರಿಗಾಯಿತು. ಮುಂದೆ ಹೇಗೆ ಮಾಡಬೇಕೆಂಬುದೇ ಅವರಿಗೆ ತೋಚದಾಯಿತು. ಆಗ ಹಂಬೀರರಾಯನು ವಿಷಣ್ಣವಾಣಿಯಿಂದ:—"ಕಾಕಾಸಾಹೇಬರು ಸರಕಾರೀ ವೆಚ್ಚದಿಂದ ಮಹಾರಾಜರ ಊಟ-ಉಪಹಾರಗಳ ವ್ಯವಸ್ಥೆ ಮಾಡಿಸುತ್ತಿದ್ದರು. ಅವರ ಮಾತಿಗೆ ನೀವು ಒಪ್ಪಲಿಲ್ಲ."

"ಹಂಬೀರ!' ಜಯಾಬಾಯಿಯು ಖೇದದಿಂದ:—"ನಾವು ಎಂಥ ಕೀಳು ಅವಸ್ಥೆಗೆ ಗುರಿಯಾಗಿದ್ದರೂ ಮಹಾರಾಜರಂಥವರ ಆತಿಥ್ಯಕ್ಕಾಗಿ ಅಸಮರ್ಥರಿರುವೆವೆಂಬದನ್ನು ಇತರರಿಗೆ ತೋರಗೊಡಬಾರದು. ಏನು ನಮ್ಮ ಪುಣ್ಯವೋ! ಮಹಾರಾಜರ ಆತಿಥ್ಯ ಮಾಡುವ ಸುಯೋಗವೊದಗಿದೆ. ಇಂಥ ಸಂಧಿಯನ್ನು

ಹೋಗಗೊಡಬಹುದೆ? ಮಹಂತರ ಬಳಿಗೆ ಹೋಗಿ ನೂರು ರೂಪಾಯಿ ಸಾಲ ತೆಗೆದುಕೊಂಡು ಬಾ."

ಮಹಂತನ ಹೆಸರೆತ್ತಿದೊಡನೆಯೇ ಹಂಬೀರರಾಯನಿಗೆ ಸಿಟ್ಟು ಬಂತು. ಆಗ ಅವನು:—"ಅವ್ವಾ, ಇನ್ನೊಮ್ಮೆ ಆ ಸ್ವಾರ್ಥಿಯಾದ ಮಹಂತನ ಹೆಸರೆತ್ತಬಾರದು. ಧುಂಡಿರಾಜನಂತು ನರರಾಕ್ಷಸನಿರುವನು. ಎಂಥ ಪ್ರಸಂಗ ಒದಗಿದರೂ ನಾನು ಅವರಲ್ಲಿಗೆ ಹೋಗಿ "ದೇಹಿ" ಎಂದೆನ್ನಲಿಕ್ಕಿಲ್ಲ, ಅವರ ಮುಖಾವಲೋಕನವು ಕೂಡ ನನಗೆ ಹೇಸಿಕೆಯೆನಿಸುವದು. ಆ ನೀಚರು ನಮ್ಮ ಜಹಾಗೀರಿಯನ್ನು ಹಾಳು ಮಾಡಿದರು. ಇದ್ದ-ಎಲ್ಲ ಭೂಮಿಗಳನ್ನು ಕಸಿದುಕೊಂಡು ನಮ್ಮನ್ನು ಭಿಕ್ಷಾಪಾತ್ರೆಗೆ ಗುರಿಮಾಡಬೇಕೆಂದು ಹೊಂಚು ಹಾಕಿದ್ದರು; ಅಲ್ಲದೆ ನನ್ನನ್ನು ಸೆರೆಮನೆಯ ಜೊತೆಗಾರನನ್ನಾಗಿ ಮಾಡಿ ಯವನರ ವಶಮಾಡಬೇಕೆಂದು ಅವರ ದುಷ್ಟ ಮನೀಷೆಯಿದ್ದಿತು. ಮಾನಾಜಿರಾಯರು ಹೊತ್ತಿಗೆ ಬಂದದ್ದರಿಂದ ನಮ್ಮ ಸಂಕಷ್ಟಗಳೆಲ್ಲವೂ ಪರಿಹಾರವಾದವು. ಧುಂಡಿರಾಜ-ಮಹಂತರಂಥ ದುರ್ಜನರ ಬಳಿಗೆ ಹೋಗಿ ನಾನು ಎಂದೂ ಯಾಚನೆ ಮಾಡಲಾರೆನು. ಮತ್ತೇನಾದರೂ ಪ್ರಯತ್ನವಿದ್ದರೆ ಹೇಳಿರಿ. ನಮ್ಮ ಭೂಮಿಗಳಲ್ಲೊಂದನ್ನು ಯಾವ ಸಾವುಕಾರರಿಗಾದರೂ ಬರೆದು ಕೊಟ್ಟು ಹಣವನ್ನು ತರಬೇಕೋ ಹೇಗೆ?"

"ಬಡ್ಡಿಯಲ್ಲಿ ಭೂಮಿಗಳನ್ನು ಸಾವುಕಾರರಿಗೆ ಹಾಕಿದರೆ ನಮ್ಮ ಉಪಜೀವನ ನಡೆಯುವದು ಕಷ್ಟವಾಗುವದು." ಎಂದು ಜಯಾಬಾಯಿಯು ನುಡಿಯುವಷ್ಟರಲ್ಲಿ ಶಂಭುವು ಅಲ್ಲಿಗೆ ಬಂದು; ಹಂಬೀರರಾಯನನ್ನು ಕುರಿತು:-"ಧನೀಸಾಹೇಬ, ಸರದಾರ ಸಾಹೇಬರು ಹೋದರೇನು?" ಎಂದು ಆತುರದಿಂದ ಕೇಳಿದನು.

"ಹೋದರು. ಯಾಕೆ ಶಂಭೂ! ಒಳ್ಳೆಯ ಗಾಬರಿಗೊಂಡು ಬಂದಿರುವೆ? ಮತ್ತೇನು ವಿಶೇಷ ಸಂಗತಿ ಜರುಗಿದೆ?" ಎಂದು ಹಂಬೀರರಾಯನು ಉತ್ಕಂಠೆಯಿಂದ ಕೇಳಿದನು.

"ಧನೀಸಾಹೇಬರೆ, ಮಠದ ದಿವಾಣರು ನಿನ್ನಿನ ನನ್ನ ಕೃತ್ಯಕ್ಕಾಗಿ ಬಹಳೇ ಸಂತಾಪಗೊಂಡಿರುವರು. ನಾವೇನೊ ಭೂಮಿಗಳ ಮೇಲೆ ದುರ್ಲಕ್ಷ್ಯ ಮಾಡಿ ಅವುಗಳನ್ನು ಕೆಡಿಸಿರುವೆವಂತೆ. ಅದಕ್ಕಾಗಿ ಈ ವರ್ಷ ಯಾವ ಹೊಲಗಳನ್ನೂ ಕೊಡುವದಿಲ್ಲೆಂದು ಸ್ಪಷ್ಟವಾಗಿ ಹೇಳಿದರು. ನಿಮ್ಮ ಮೇಲೆ ಬಾಣ ಹೊಡೆಯುವದಕ್ಕೆ ಒಪ್ಪದ್ದಕ್ಕಾಗಿ ಬಿಲ್ಲುಗಾರ ಕಾಳೂನ ಉಂಬಳಿಯ ಭೂಮಿ

ಯನ್ನೂ ಕಸಿದುಕೊಂಡರು. ಮುಂದೆ ಏನು ಹಂಚಿಕೆ ಮಾಡಬೇಕು?''

ಶಂಭುವು ಹೀಗೆ ನುಡಿದ ಮೇಲೆ ಹಂಬೀರರಾಯನು ಸ್ವಲ್ಪ ಹೊತ್ತು ಯೋಚಿಸಿದನು. ಅನಂತರದಲ್ಲಿ ಅವನು:—"ಶಂಭೂ! ನಿನ್ನ ಇಚ್ಛೆಯೇನಿರುವದು? ನಿನ್ನ ಭೂಮಿಗಳನ್ನು ನಿಯಮದ ಮೇರೆಗೆ ಈಗಲೆ ಬಿಡಿಸಿಕೊಳ್ಳಲಿಕ್ಕೆ ಬರುವದಿಲ್ಲ. ದಿವಾಣನು ಮುಂಗೈ ಕಸುವಿನಿಂದ ಅವುಗಳನ್ನು ಬಿಡಿಸಿಕೊಳ್ಳಲೆತ್ನಿಸಿದರೆ ತಕ್ಕ ವ್ಯವಸ್ಥೆ ಮಾಡಲಿಕ್ಕೆ ಒರುವನು. ಹೊಲದಲ್ಲಿ ಹೆಜ್ಜೆಯಿಟ್ಟರೆ ಜೀವಕ್ಕೆ ಹೊರತಾಗಬೇಕಾಗುವದೆಂದು ನೀನು ಅವನಿಗೆ ಗುಡುಗು ಹಾಕು. ಬಲುಮೆಯಿಂದ ಕಸಿದುಕೊಂಡದ್ದೇ ಆದರೆ ಅವರಿಗೆ ತಕ್ಕ ಪ್ರಾಯಶ್ಚಿತ್ತ ಕೊಡುವೆನು. ನೀನು ಧೈರ್ಯದಿಂದಿರು. ಬಿಲ್ಲುಗಾರ ಕಾಳೂನಿಗೆ ಭೂಮಿಯನ್ನು ಅವರು ಉಂಬಳಿ ಹಾಕಿ ಕೊಟ್ಟದ್ದರಿಂದ ಅದನ್ನು ತಿರುಗಿ ಸ್ವಾಧೀನ ಪಡಿಸಿಕೊಳ್ಳಲಿಕ್ಕೆ ಬರುವಂತಿದೆ. ಕಾಳೂನಾದರೂ ನನ್ನ ಗರಡಿಯಲ್ಲಿ ಯುದ್ಧ ಶಿಕ್ಷಣ ಚೆನ್ನಾಗಿ ಕಲಿಯಲಿ. ಕಾಳೂನ ನಿಷ್ಠೆಯು ಅವರ್ಣನೀಯವಿರುವದೆಂಬದನ್ನು ನಾನು ಬಲ್ಲೆನು. ಅವನು ತನ್ನ ಕರ್ತೃತ್ವಪ್ರಭಾವದಿಂದ ಬೇಕಾದಷ್ಟು ಆಸ್ತಿ ಸಂಪಾದಿಸುವದಕ್ಕೆ ಈಗ ಸಂಧಿಯಿರುವದು. ಶಿವಾಜಿ ಮಹಾರಾಜರೂ ಮಾನಾಜಿರಾಯರೂ ಇದೇ ವಾರದಲ್ಲಿ ಇತ್ತ ಬರುವವರಿದ್ದಾರೆ. ದೈವಾನುಕೂಲವಿದ್ದರೆ ನಾವೆಲ್ಲರೂ ಪ್ರಗತಿಪಥವನ್ನು ಹೊಂದುವೆವು."

ಹಂಬೀರರಾಯನ ಮಾತುಗಳಿಂದ ಶಂಭೂನಲ್ಲಿ ಆಶಾಂಕುರವು ಉತ್ಪನ್ನವಾಯಿತು; ಅತ್ಯಾಚಾರಿಗಳೂ ಅನ್ಯಾಯಿಗಳೂ ಆದ ಜನರನ್ನು ಹುಚ್ಚಿಸುವದಕ್ಕೆ ಪ್ರಯತ್ನಿಸಿ ಫಲವಿಲ್ಲೆಂದೂ, ನ್ಯಾಯವಂತನೂ ಗುಣಗ್ರಾಹಿಯೂ ಆದ ಶಿವಪ್ರಭುವಿನ ಸೇವೆಯನ್ನು ಮಾಡಿ ಮೆಚ್ಚುಗೆಯನ್ನು ಸಂಪಾದಿಸುವದು ಉಚಿತವೆಂತಲೂ ಅವನು ಬಗೆದನು. ಆಗ ಅವನು ಹಂಬೀರರಾಯನನ್ನು ಕುರಿತು:—"ಧನೀಸಾಹೇಬರೇ, ನಾನು ನಿಮ್ಮ ಪಾದಸೇವೆಯಲ್ಲಿ ಆಯುಷ್ಯವನ್ನು ಕಳೆಯಬೇಕೆಂದು ಸತ್ಯಸಂಕಲ್ಪ ಮಾಡಿರುವೆನು. ನೀವು ಉರಿಯಲ್ಲಿ ದುಮುಕಲಿಕ್ಕೆ ಹೇಳಿದರೂ ಅದಕ್ಕೆ ನನ್ನ ಸಿದ್ಧತೆಯಿದೆ."

"ಶಂಭೂನು ಅಂಥ ಏಕನಿಷ್ಠ ಸೇವಕನಿರುವನು." ಎಂದು ಜಯಾಬಾಯಿಯು ನುಡಿದು, ಶಂಭೂನನ್ನು ಕುರಿತ:—"ಶಂಭೂ, ನೀನು ಏನೂ ಯೋಚನೆಗೊಳಗಾಗಬೇಡ. ನಮ್ಮ ಹಂಬೀರನ ಉತ್ಕರ್ಷೆಯೊಡನೆ ನಿನ್ನ ಉತ್ಕರ್ಷೆಯೂ ನಿಶ್ಚಯವಾಗಿ ಆಗುವದು."

"ಅಪ್ಪನವರೆ, ಧನೀಸಾಹೇಬರ ಯೋಗ್ಯತೆಯನ್ನರಿತೇ ನಾನು ಅವರ ಸೇವೆ ಕೈಕೊಂಡಿರುವೆನು." ಎಂದು ಶಂಭುವು ನುಡಿದು:—"ಬಿಲ್ಲುಗಾರ ಕಾಳೂ ನನ್ನು ನಿಮ್ಮ ಸೇವೆಯಲ್ಲಿ ತೆಗೆದುಕೊಳ್ಳಿರಿ. ಅವನು ಈಗ ನಿರಾಧಾರಿಯಾಗಿ ರುವನು."

"ಅವನನ್ನು ನನ್ನ ಸೇವೆಯಲ್ಲಿ ತೆಗೆದುಕೊಳ್ಳುವ ಬಗ್ಗೆ ನಿನ್ನೆಯೆ ಅಪ್ಪ ನಿಗೆ ಅಭಿವಚನ ಕೊಟ್ಟಿದ್ದೇನೆ. ನನಗೆ ಭೆಟ್ಟಿಯಾಗಬೇಕೆಂದು ನೀನು ಅವನಿಗೆ ತಿಳಿಸು."

ಹಂಬೀರರಾಯನು ಹೀಗೆ ಆಜ್ಞಾಪಿಸಿದ ಮೇಲೆ ಶಂಭುವು ಅವನಿಗೆ "ರಾಮರಾಮ" ಮಾಡಿ ಅಲ್ಲಿಂದ ಹೊರಟು ಹೋದನು. ಅನಂತರದಲ್ಲಿ ಜಯಾ ಬಾಯಿಯು—"ಹಂಬೀರ, ಮಹಾರಾಜರ ಆತಿಥ್ಯದ ವೆಚ್ಚದ ಬಗ್ಗೆ ಏನು ವ್ಯವಸ್ಥೆ ಮಾಡಬೇಕೆಂದಿರುವೆ?"

"ನೀವು ಆಜ್ಞಾಪಿಸಿದಂತೆ ವ್ಯವಸ್ಥೆ ಮಾಡಲು ನಾನು ಸಿದ್ಧನಿರುವೆನು; ಆದರೆ ಮಹಂತನ ಹಾಗು ಧುಂಡಿರಾಜನ ಕಡೆಗೆ ಹೋಗಲಿಕ್ಕೆ ನನಗೆ ಆಜ್ಞೆ ವಿಧಿಸಬೇಡಿರಿ."

ಜಯಾಬಾಯಿಯು ಸ್ವಲ್ಪ ವೇಳೆ ವಿಚಾರಿಸಿ, ಅನಂತರದಲ್ಲಿ, 'ಕುಮಾರಾ, ನನ್ನಲ್ಲಿ ಒಂದು ವಸ್ತುವಿದೆ. ಜಹಾಗೀರಿಯ ವೈಭವದ ಅವಶೇಷವೆಂದರೆ ಅದೊಂದೇ ಒಡವೆಯು. ಎಂಥ ಪ್ರಸಂಗದಲ್ಲಿಯೂ ನಿನ್ನನ್ನು ಹಡೆದವರು ಅದನ್ನು ಮಾರಲಿಲ್ಲ.''

"ಅವ್ವಾ, ಯಾವ ಒಡವೆಯದು?" ಎಂದು ಉತ್ಕಂಠೆಯಿಂದ ಹಂಬೀರ ರಾಯನು ಕೇಳಿದನು.

ಜಯಾಬಾಯಿಯು ಒಳಗೆ ಹೋಗಿ, ಬಂಗಾರದ ಹಿಡಿಕೆಯ ರತ್ನ ಖಚಿತ ಕಠಾರಿಯನ್ನು ತಂದು, ಹಂಬೀರರಾಯನ ಕೈಯಲ್ಲಿ ಕೊಟ್ಟು:—"ಇದನ್ನು ನಿನ್ನನ್ನು ಹಡೆದವರಿಗೆ ಅವರ ಹಿರಿಯರು ಪಾರಿತೋಷಕವಾಗಿ ಕೊಟ್ಟಿದ್ದರು. ನೀನು ಪರಾಕ್ರಮವನ್ನು ತೋರಿಸಿದಾಗ ಪಿತ್ರಾರ್ಜಿತ ಸ್ಮೃತಿ ಚಿಹ್ನವೆಂದು ಇದನ್ನು ನಿನಗೆ ಕೊಡಬೇಕೆಂದು ನಿನ್ನನ್ನು ಹಡೆದವರ ಆಜ್ಞೆ ಯಿದೆ. ನಮ್ಮ ಆಪತ್ಕಾಲದಲ್ಲಿ ಇತರ ಒಡವೆಗಳು ಹೋದಂತೆ ಇದೂ ಹೋಗಬಹುದೆಂಬ ಭೀತಿ ನನಗಿದ್ದುದರಿಂದ ಇದನ್ನು ಭದ್ರವಾಗಿರಿಸಿದ್ದೆನು; ಹಾಗು ಎಂಥ ಸಂಕಟ ಕಾಲದಲ್ಲಿಯೂ ಇದನ್ನು ಮಾರಬಾರದೆಂದು ಸಂಕಲ್ಪ

ಮಾಡಿಕೊಂಡಿರುವೆನು. ನಾನು ಇದನ್ನು ನೆಲದಲ್ಲಿ ಹೂಳಿಟ್ಟಿದ್ದರಿಂದ ನಿನಗೆ ತೋರಿಸಲಿಕ್ಕೆ ಆಗಿರಲಿಲ್ಲ. ಇಂದು ಪ್ರಸಂಗವೊದಗಿದ್ದರಿಂದ ಬೈಲಿಗೆ ತರಬೇಕಾಯಿತು. ಇದನ್ನು ಮಾರದಿದ್ದರೂ ಸಾವುಕಾರರಲ್ಲಿ ಅಡವು ಇಡಲಿಕ್ಕೆ ಏನೂ ಅಡ್ಡಿಯಿಲ್ಲ. ನಿನ್ನ ಹಿರಿಯರು ಒಂದು ಪ್ರಸಂಗದಲ್ಲಿ ಅಡವು ಇಟ್ಟಿದ್ದರು. ಈಗ ಅಡವು ಇಟ್ಟರೂ ನಾಳಿನ ಸುಗ್ಗಿಯ ಸಮಯಕ್ಕೆ ಇದನ್ನು ಮೊದಲು ಬಿಡಿಸಿಕೊಂಡು ತರಲಿಕ್ಕೇ ಬೇಕು. ನೀನು ಇದನ್ನು ಕಸಬೆಯಲ್ಲಿಯ ಯಾವನೊಬ್ಬ ಸಾವುಕಾರನಲ್ಲಿ ಅಡವು ಇಟ್ಟು ನೂರಾರು ರೂಪಾಯಿ ತೆಗೆದುಕೊಂಡು ಬಾ. ಅಂದರೆ ಮಹಾರಾಜರ ಆತಿಥ್ಯಕ್ಕೆ ಅನುಕೂಲವಾಗುವದು. ಇದನ್ನು ಅಡವು ಇಟ್ಟ ಮೇಲೆ ಒಂದು ನಿಯಮವನ್ನು ಪಾಲಿಸಬೇಕಾಗುವದು. ಏನೆಂದರೆ, ಕಠಾರಿಯು ಮನೆಗೆ ಬರುವವರೆಗೆ ಹಬ್ಬ-ಹುಣ್ಣಿವೆಗಳನ್ನು ಮಾಡಲಾಗದು; ಹಾಗು ಯಾವ ಬಗೆಯ ಸಮಾರಂಭದ ಕೆಲಸಗಳನ್ನೂ ಜರುಗಿಸಬಾರದು."

ಹಂಬೀರರಾಯನು ರತ್ನಖಚಿತವಾದ ಕಠಾರಿಯನ್ನು ನೋಡಿ:— "ಅವ್ವಾ, ಇದು ಬಹಳೇ ಬೆಲೆಯುಳ್ಳದ್ದೆಂಬಂತೆ ತೋರುವದು. ಇದರೊಳಗಿನ ಒಂದೊಂದು ಹರಳುಗಳ ಬೆಲೆ ನೂರು ರೂಪಾಯಿಯಾಗಬಹುದು. ನೂರು ರೂಪಾಯಿಗಳಿಗಾಗಿ ಸಾವಿರಾರು ರೂಪಾಯಿ ಬೆಲೆ ಬಾಳುವ ಇಂಥ ಒಡವೆಯನ್ನು ಇಡಬಹುದೆ?"

"ಮಗೂ, ಇದರ ಹೊರತು ಬೇರೆ ಒಡವೆಗಳೇ ಇಲ್ಲದಿರುವಾಗ ಮಾಡುವದೇನು? ಇದನ್ನು ಅಡವು ಇಟ್ಟ ಬಗ್ಗೆ ಸಾವುಕಾರನಿಂದ ಚೀಟಿಯನ್ನು ಪಡೆದುಕೊಳ್ಳಲಿಕ್ಕೆ ಮರೆಯಬೇಡ." ಎಂದು ಜಯಾಬಾಯಿಯು ಮಗುವಿಗೆ ಎಚ್ಚರಿಗೆ ಕೊಟ್ಟಳು.

ಹಂಬೀರರಾಯನು ತನ್ನ ಆಳಿನೊಡನೆ ಶಂಭುವನ್ನು ಕರೆಯಿಸಿ ಎಲ್ಲ ಸಂಗತಿಯನ್ನು ಹೇಳಿದನು. ಕಸಬೆಗೆ ಹೋಗುವ ದಾರಿಯು ಕಟ್ಟಡವಿಯದಿದ್ದುದರಿಂದಲೂ ಅಲ್ಲಿ ಸುಲಿಗೆಗಾರರ ಉಪಟಳವಿದ್ದುದರಿಂದಲೂ ಸಂಗಡ ಬರುವದಕ್ಕೆ ತಿಳಿಸಿದನು.

ಶಂಭುವು ಒಪ್ಪಿ ಅಶ್ವಶಾಲೆಗೆ ಹೋಗಿ ಕುದುರೆಗಳನ್ನು ಸಿದ್ಧಪಡಿಸಿದನು. ಹಂಬೀರರಾಯನು ತನ್ನ "ಕೇಸರಿ" ಎಂಬ ಕುದುರೆಯನ್ನೇರಿದನು. ಶಂಭುವು ತನ್ನ 'ರಣಸಿಂಹ' ಎಂಬ ಕುದುರೆಯನ್ನೇರಿದನು. ಇಬ್ಬರೂ ವೇಗದಿಂದ ಮಾರ್ಗ

ಕ್ರಮಣ ಮಾಡತೊಡಗಿದರು. ಸ್ವಲ್ಪ ದೂರ ಹೋದ ಮೇಲೆ ಅವರಿಗೆ ಅಶ್ವಾರೋಹಿ ಸೈನಿಕರಿಬ್ಬರು ಕೂಡಿದರು. ಹಂಬೀರರಾಯನು ಅವರನ್ನು ಕುರಿತು:—"ನೀವು ಯಾರು?" ಎಂದು ಪ್ರಶ್ನೆ ಮಾಡಿದನು.

ಆಗ ಸ್ವಾರರಲ್ಲೊಬ್ಬನು:—"ನಾವು ಸರಕಾರೀ ಸೈನಿಕರು. ಈ ಅಡವಿಯಲ್ಲಿ ಸುಲಿಗೆಗಾರರ ಉಪದ್ರವ ಬಹಳ. ನಾವು ಇಲ್ಲಿ ಗಸ್ತೀ ಕೆಲಸ ಮಾಡುತ್ತಿರುತ್ತೇವೆ. ನೀವು ಎಚ್ಚರದಿಂದ ಹೋಗಿರಿ. ಧುಂಡಜಿ ಎಂಬ ಸುಲಿಗೆಗಾರನು ಮಹಾ ಚಾಣಾಕ್ಷನಿರುವನು. ಅವನು ನಿನ್ನೆ ಒಬ್ಬ ಮಾರವಾಡಿಯನ್ನು ಸುಲಿದನು. ಧುಂಡಜಿಯ ಹೆಂಡತಿಯು ಮಾರವಾಡಿಯನ್ನು ದಾರೀ ತಪ್ಪಿಸಿ, ಕಟ್ಟಡವಿಯಲ್ಲೊಯ್ದು ತನ್ನ ಪತಿಯ ಸ್ವಾಧೀನ ಪಡಿಸಿದಳಂತೆ."

"ಧುಂಡಜಿಯಂತೆ ಅವನ ಹೆಂಡತಿಯೂ ಚೌರ್ಯಕರ್ಮಕುಶಲಳಿರುವಳೆಂದಂತಾಯಿತು." ಎಂದು ಹಂಬೀರರಾಯನು ನುಡಿದನು:—"ನಿಮ್ಮ ಆಳರಸರು ಸುಲಿಗೆಗಾರರಿಗಿಂತಲೂ ಕುಶಲರಿರುವರು. ಒಂದು ಕಡೆಗೆ ಸುಲಿಗೆಗಾರರಿಗೆ ಪ್ರೋತ್ಸಾಹ ಕೊಡುತ್ತ ಅವರಿಂದ ಒಳಗಿಂದೊಳಗೆ ಹೇರಳವಾದ ಲಂಚವನ್ನೆತ್ತುವದು; ಇತ್ತ ತೋರಿಕೆಗಾಗಿ ಗಸ್ತೀ ಕೆಲಸ ಮಾಡಿಸಿ ಒಳ್ಳೆಯ ಆಡಳಿತಗಾರರೆಂಬ ಹೆಸರು ಪಡೆಯಲು ಸಾಹಸ ಪಡುವದು. ನಿಮ್ಮ ಸುಭೇದಾರರ ಪ್ರೋತ್ಸಾಹನೆಯಿಲ್ಲದಿದ್ದರೆ ಈ ಪರಿಯ ಹಗಲು ಸುಲಿಗೆಯ ಕೆಲಸಗಳು ವ್ಯಾಹತಿಯಿಲ್ಲದೆ ನಡೆಯುತ್ತಿದ್ದಿಲ್ಲ. ನೀವು ಸಹ ಆ ಸುಲಿಗೆಗಾರ ಆಶ್ರಯದಾತರೇ ಇರಲಿಕ್ಕೆಬೇಕು; ಯಾಕಂದರೆ, ನಿಮ್ಮ ಸುಭೇದಾರರಿಗೆ ಸುಲಿಗೆಯ ಸುದ್ದೀ ಹಚ್ಚಿ ಸುಲಿಗೆಗಾರರಿಂದ ಹಣ ಎತ್ತಿ ಸಲ್ಲಿಸಿದ ಮೇಲೆ ನಿಮಗೆ ಎರಡೂ ಕಡೆಯಿಂದ ಸಂಭಾವನೆಯು ಸಲ್ಲುತ್ತಿರಲಿಕ್ಕೆ ಬೇಕು. ನೀವು ಮಾಡುತ್ತಿರುವ ಗಸ್ತಿಯು ಇದೇ ಅಲ್ಲವೆ?"

"ಕಾಫರ!" ಸ್ವಾರನೊಬ್ಬನು ಗರ್ವೋದ್ಧತನದಿಂದ:—"ಇದು ಯಾವ ರಾಜ್ಯವೆಂದು ಬಾಯಿಬಿಡತೊಡಗಿರುವೆ? ಇದು ಶಾಹೀ ಸಾಮ್ರಾಜ್ಯವು. ಶಿವಾಜಿಯ ರಾಜ್ಯವಲ್ಲ! ಎಚ್ಚರದಿಂದ ಮಾತಾಡು!"

"ಇದು ಶಿವಶಾಹೀರಾಜ್ಯವಾಗುವ ಸುಯೋಗವು ಬೇಗನೆ ಒದಗುವದಕ್ಕೆ ನಿಮ್ಮ ಶಾಹೀ ಆಡಳಿತವೇ ಕಾರಣವಾಗಿದೆ. ಯವನ ಸೈನಿಕಾ! ಎಲ್ಲಿ ಜನರಂಜನೆಯ ಆಡಳಿತವಿಲ್ಲವೋ ಆ ರಾಜ್ಯವು ಬುಡಮೇಲಾಗುವದೆಂದು ನಮ್ಮ ಶಿವಶಾಹೀ ಸ್ವರಾಜ್ಯವು ಡಂಗುರ ಸಾರಿ ಹೇಳುವದಿದೆ. ನಿನ್ನಂಥ ಯಃಕಶ್ಚಿತ

ಸೈನಿಕನೊಡನೆ ತಾತ್ವಿಕ ವಿಚಾರ ಮಾಡಿ ನಿಷ್ಪ್ರಯೋಜಕವು. ಇನ್ನು ನಿನ್ನ ಮನಸ್ಸಿನ ವಿರೋಧವಾಗಿ ಮಾತಾಡಿದೆನೆಂದು ನಿನ್ನಲ್ಲಿ ಕ್ರೋಧವುಂಟಾಗಿದ್ದರೆ ಅಗತ್ಯವಾಗಿ ಶಸ್ತ್ರವನ್ನು ಹಿರಿ! ಒಮ್ಮೆ ಶಸ್ತ್ರ ಹಿರಿದ ಮೇಲೆ ಅದು ನಿನ್ನ ರುಧಿರ ಪ್ರಾಶನ ಮಾಡಿ, ಪ್ರಸಂಗವೊದಗಿದರೆ ನಿನ್ನ ಪ್ರಾಣವನ್ನು ಹೀರಿ ಒರೆಗಾಣುವದೆಂದ ನಿನಗೆ ಮೊದಲೇ ತಿಳಿಸಿರುವೆನು."

ಹಂಬೀರರಾಯನ ಗರ್ಜನೆಯಿಂದ ಆ ಸೈನಿಕರು ಬೆದರಿದರು. ಇಂಥವನೊಡನೆ ಹೆಚ್ಚು ಮಾತು ಬೆಳೆಯಿಸಿ ಪ್ರಯೋಜನವಿಲ್ಲೆಂದು ತಿಳಿದು ಅವರು ಹಂಬೀರ ರಾಯನೊಡನೆ ಎರಡು ಮೆತ್ತಗೆ ಮಾತಾಡಿ ತಮ್ಮ ದಾರೀ ಹಿಡಿದು ನಡೆದರು.

'ಸರಿದರೆ ಒತ್ತಣ್ಣ, ಒತ್ತಿದರೆ ಸರಿಯಣ್ಣ' ಎಂಬ ಯವನ ಮನೋವೃತ್ತಿಯನ್ನು ಕುರಿತು ಟೀಕಿಸುತ್ತ ಹಂಬೀರರಾಯನೂ ಶಂಭುವೂ ಮಾರ್ಗವನ್ನು ಕ್ರಮಿಸತೊಡಗಿದರು.

## ೬ ಸುಲಿಗೆಗಾರ ಧುಂಡಜಿ.

ಹಂಬೀರರಾಯನೂ ಶಂಭುವೂ ದ್ರುತಗತಿಯಿಂದ ಮಾರ್ಗಕ್ರಮಣ ಮಾಡತೊಡಗಿದ್ದರು. ಅವರಿಬ್ಬರೂ ವಿಚಾರದಲ್ಲಿ ತೊಡಗಿದ್ದುದರಿಂದ ಪರಸ್ಪರರಲ್ಲಿ ಭಾಷಣ ಕಟ್ಟಾಗಿತ್ತು. ಆದಷ್ಟು ಬೇಗನೆ ವನಪ್ರದೇಶವನ್ನು ದಾಟಿ ಬೈಲು ಸೀಮೆಯನ್ನು ಪ್ರವೇಶಿಸಬೇಕೆಂದು ಶಂಭುವಿನ ಇಚ್ಛೆಯಿತ್ತು. ದಾರಿಯಲ್ಲಿ ಸುಲಿಗೆಗಾರರು ಭೆಟ್ಟಿಯಾದರೆ, ಅವರ ಪಾರುಪತ್ಯ ಮಾಡಿಯೇ ಮುಂದೆ ಸಾಗಬೇಕೆಂದು ಹಂಬೀರರಾಯನ ಯೋಚನೆಯಿತ್ತು. ಪ್ರಸಿದ್ಧ ಸುಲ್ಲಿಗೆಗಾರನಾದ ಧುಂಡಜಿಯನ್ನು ನಷ್ಟಗೊಳಿಸಿದರೆ ಆ ಭಾಗದಲ್ಲಿಯ ಜನರು ಸುರಕ್ಷಿತವಾಗಿ ಪ್ರವಾಸ ಮಾಡಲಿಕ್ಕೆ ಮಾರ್ಗ ಮಾಡಿಕೊಟ್ಟಂತಾಗುವವೆಂದು ಅವನು ಎಣಿಕೆ ಹಾಕಿದ್ದನು. ಇಬ್ಬರೂ ಸ್ವಲ್ಪ ದೂರ ಹೋಗುವಷ್ಟರಲ್ಲಿ ಸ್ತ್ರೀಯ ಆರ್ತಧ್ವನಿಯು ಕೇಳತೊಡಗಿತು. ಕೂಡಲೆ ಹಂಬೀರರಾಯನ ಮನಸ್ಸಿನಲ್ಲಿ ಒಂದು ವಿಧವಾದ ವಿಚಾರವು ಬಂತು. ಯಾರೋ ಪ್ರವಾಸಿಗಳು ಸುಲಿಗೆಗಾರರ ಕೈಯಲ್ಲಿ ಸಿಲುಕಿರುವರೆಂದು ಅವನು ಬಗೆದು, ಶಂಭುವನ್ನು ನಿಲ್ಲಿಸಿ:—"ಈ ಅಡವಿಯಲ್ಲಿ ಯಾರೋ ಪ್ರವಾಸಿಗಳು ಸುಲಿಗೆಗಾರರ ಕೈಯಲ್ಲಿ ಸಿಲುಕಿದಂತೆ ತೋರುವದು. ಧ್ವನಿಯು ಕೇಳಬರುವ ನಿಟ್ಟಿಗೆ ಕುದುರೆಯನ್ನು ಸಾಗಿಸು." ಎಂದು ಆಜ್ಞಾಪಿಸಿದನು.

"ಘಸೀಸಾಹೇಬರೆ, ಇಲ್ಲದ ಸಂಕಟಗಳನ್ನು ಮೈಮೇಲೆ ತೆಗೆದುಕೊಳ್ಳುವ ದೇಕೆ? ಅಲ್ಲದೆ ನಾವು ಸುಲಿಗೆಗಾರರೊಡನೆ ಬಡಿದಾಟಕ್ಕೆ ನಿಂತರೆ ತಡವಾಗು ವದು. ಇಂದ ನಮ್ಮ ಕೆಲಸವೂ ಪೂರೈಸಲಿಕ್ಕಿಲ್ಲ, ಆದ್ದರಿಂದ ಆ ಹವ್ಯಾಸ ಬಿಟ್ಟು ಮುಂದೆ ಸಾಗುವದೇ ಒಳಿತೆಂದು ನನಗೆ ತೋರುವದು. ಸುಲಿಗೆಗಾರರು ಒಬ್ಬಿಬ್ಬರು ಇದ್ದರೆ ಅವರ ಪಾರುಪತ್ಯ ಮಾಡಬಹುದು; ಅವರು ಅಸಂಖ್ಯಾಕ ರಿದ್ದರೆ ನಮ್ಮ ಪಾರುಪತ್ಯವೇ ಆದೀತು. ಹಾದೀ ಹಿಡಿದು ಹೋಗುವ ದೆವ್ವ ನನ್ನ ಮನೆಯಲ್ಲಿ ಹೊಗಿಸಿಕೊಂಡಂತಾಗುವದು." ಎಂದು ಶಂಭುವು ಭಯ ವನ್ನು ವ್ಯಕ್ತಪಡಿಸಿದನು.

"ಶಂಭೂ, ನಿಜವಾದ ಮರಾಟಿಗನು ಇಂಥ ಸುಲಿಗೆಗಾರರಿಗೆ ಸೊಪ್ಪು ಹಾಕಬೇಕೆ? ಪ್ರಾಣವು ಪ್ರಿಯವೆಂಬದು ನಿಜ; ಆದರೆ ಕ್ಷಾತ್ರಧರ್ಮವನ್ನು ವ್ಯಕ್ತಪಡಿಸುವ ಪ್ರಸಂಗವೊದಗಿದರೆ, ಅದೊಂದು ಕೀರ್ತಿಪ್ರದ ಪ್ರಸಂಗವೆಂದು ತಿಳಿದು ಪ್ರಾಣವನ್ನು ತೃಣಸಮಾನ ಬಗೆಯಲೇ ಬೇಕು. ಒಂದು ವೇಳೆ ನಮ್ಮಿಂದ ಧುಂಡಜಿಯ ಪಾರುಪತ್ಯವಾದರೆ ಎಷ್ಟು ಜನರ ಕಲ್ಯಾಣವಾಗು ವದು ನೋಡು? ಶಿವಪ್ರಭುವಿನ ಸಾನಿಧ್ಯವನ್ನು ಹೊಂದಿದ ಮೇಲೆ ಮಹಾ ರಾಜರ ಹಿಂದು ಸ್ವರಾಜ್ಯದಲ್ಲಿ ಕೆಲಸಮಾಡತೊಡಗಿದೆವೆಂದರೆ ಪ್ರಾಣಪಣ್ಯ ದಿಂದ ಹೋರಾಡುವ ಅನೇಕ ಪ್ರಸಂಗಗಳು ಬರಬಹುದು. ಕ್ಷಾತ್ರವೀರರು ಪ್ರಾಣಕ್ಕೆ ಎಂದೂ ಮಹತ್ವಕೊಡದೆ ಕ್ಷಾತ್ರಶೀಲಕ್ಕೆ ಮಹತ್ವ ಕೊಡಬೇಕು."

ಹಂಬೀರರಾಯನ ಉಪದೇಶದಿಂದ ಶಂಭುವಿನಲ್ಲಿ ಧೈರ್ಯವು ಉತ್ಪನ್ನ ವಾಯಿತು; ವೀರಶ್ರೀ ಸಂಚಾರವಾಯಿತು. ಕೂಡಲೆ ಅವನು ಧ್ವನಿಕೇಳುವ ನಿಟ್ಟಿಗೆ ಕುದುರೆಯನ್ನು ತಿರುವಿದನು. ಹಂಬೀರರಾಯನು ತನ್ನ ಕೇಸರಿಗೆ ಒಂದು ಏಟು ಕೊಟ್ಟನು. ಕೂಡಲೆ ಅದು ವಿದ್ಯುಲ್ಲತೆಯಂತೆ ಮುಂದೆ ಸಾಗಿತು. ಅವರಿಬ್ಬರು ಕೆಲವು ದಾರೀ ನಡೆದು ಹೋಗುವಷ್ಟರಲ್ಲಿ ಒಂದು ಗಿಡದ ಕೆಳಗೆ ಒಬ್ಬ ಸ್ತ್ರೀಯು ರೋದಿಸುತ್ತ ಕುಳಿತಿದ್ದಳು. ಹಂಬೀರರಾಯನು ಅವಳನ್ನು ನೋಡಿದೊಡನೆಯೆ ಕುದುರೆಯಿಂದ ಕೆಳಗಿಳಿದನು. ಶಂಭುವೂ ಇಳಿದನು. ಇಬ್ಬರೂ ಅವರ ಬಳಿಗೆ ಹೋದ ಮೇಲೆ ಹಂಬೀರರಾಯನು ಅವಳನ್ನು ಕುರಿತು:—"ಅಮ್ಮಾ, ನೀನು ಯಾರು? ಇಂಥ ಕಟ್ಟಡವಿಯಲ್ಲಿ ಹೀಗೆ ಏಕಾಕಿಯಾಗಿ ಕುಳಿತು ಅಳುತ್ತಿರುವ ಕಾರಣವೇನು?"

"ಸರದಾರಸಾಹೇಬರೆ, ನಾನೂ ನನ್ನ ತಂದೆಯೂ ದಾರೀ ಹಿಡಿದು ಹೊರ

ಟಿದ್ದೆವು. ದಾರಿಯಲ್ಲಿ ನನಗೆ ಬಹಳೇ ನೀರಡಿಕೆಯಾಯಿತು. ನನ್ನ ತಂದೆಯು ನೀರು ಹುಡುಕಿ ಬೇಸತ್ತನು. ಅಷ್ಟರಲ್ಲಿ ಒಬ್ಬ ಸ್ತ್ರೀಯು ನನ್ನ ಬಳಿಗೆ ಬಂದು, ನೀರು ತೋರಿಸುವೆನೆಂದು ಹೇಳಿದಳು. ನಾವಿಬ್ಬರೂ ಅವಳ ಬೆನ್ನು ಹತ್ತಿ ನಡೆದೆವು. ಅವಳು ದಾರೀ ಬಿಟ್ಟು, ಅಡವೀ ಬಿದ್ದು ನಡೆಯುತೊಡಗಿದಳು. ನನ್ನಿಂದ ಮುಂದೆ ಹೆಜ್ಜೆಯಿಡುವದಾಗಲಿಲ್ಲ. ಆಗ ನನ್ನ ತಂದೆಯು ನನ್ನನ್ನು ಇಲ್ಲಿಯೇ ಕುಳಿತುಕೊಳ್ಳಹೇಳಿದನು. ಆ ಸ್ತ್ರೀಯಾದರೂ ಅದರಂತೆ ನುಡಿದಳು. ನೀರು ಇನ್ನು ಬಹಳ ದೂರದಲ್ಲಿರುವದಿಲ್ಲವೆಂದೂ ಬೇಗನೆ ತಿರುಗಿ ಬರುವೆನೆಂದೂ ಅವಳು ಹೇಳಿ ನನ್ನ ತಂದೆಯನ್ನು ಕರೆದುಕೊಂಡು ಹೋದಳು. ಮುಂದೆ ಒಂದುಗಳಿಗೆಯೊಳಗೆ ನನ್ನ ತಂದೆಯ ಚೀತ್ಕಾರ ಧ್ವನಿಯು ಕೇಳಿತು. ಆ ಸ್ತ್ರೀಯು ಧುಂಡಜಿ ಸುಲಿಗೆಗಾರನ ಹೆಂಡತಿಯೆಂದೂ, ಅವಳು ನನ್ನ ತಂದೆಯನ್ನು ತನ್ನ ಗಂಡನ ಸ್ವಾಧೀನ ಮಾಡಿರುವಳೆಂದೂ ನನಗೆ ಭಾಸವಾಗುವದು. ನನ್ನ ತಂದೆಯು ದೊಡ್ಡ ವ್ಯಾಪಾರಸ್ಥನಿದ್ದು, ಅವನು ನಡಕ್ಕೆ ಸಾವಿರ ರೂಪಾಯಿಗಳ ಹಮ್ಮಿಣಿಯನ್ನು ಕಟ್ಟಿದ್ದನು. ಆ ದುಷ್ಟ ಧುಂಡಜಿಯು ನನ್ನ ತಂದೆಯನ್ನು ಕೊಲೆಮಾಡಿರುವನೋ ಏನೋ ಎಂಬ ಅಂಜಿಕೆಯುಂಟಾಗಿದೆ. ಹಣ ಹೋದರೂ ಹೋಗಲಿ ನನ್ನ ತಂದೆ ಬದುಕಿದ್ದರೆ ಸಾಕು. ನೀವು ದಯ ಮಾಡಿ ನನ್ನ ತಂದೆಯ ಶೋಧ ಮಾಡಿದರೆ ನಿಮಗೆ ತುಂಬಾ ಉಪಕೃತಳಾಗುವೆನು. ತಂದೆಯನ್ನು ಕಳಕೊಂಡ ನಾನು ನಿರಾಧಾರಿಯಾಗಿರುವೆನು."

ಆ ಸ್ತ್ರೀಯು ಹೀಗೆ ನುಡಿದು, ಮುಖವನ್ನು ಸೆರೆಗಿನಿಂದ ಮುಚ್ಚಿಕೊಂಡು ಬೋರಾಡಿ ಅಳತೊಡಗಿದಳು. ಅವಳ ದೈನ್ಯಾವಸ್ಥೆಯನ್ನು ನೋಡಿ ಹಂಬೀರರಾಯನಲ್ಲಿ ಅಂತಃಕರಣವು ಹುಟ್ಟಿತು. ಆಗ ಅವನು ಆ ಸ್ತ್ರೀಯನ್ನು ಕುರಿತು:- -"ಅಮ್ಮಾ, ನೀವು ಚಿಂತಿಸಬೇಡಿರಿ. ಸುಲಿಗೆಗಾರನು ಪ್ರಾಣವನ್ನು ಕಳೆಯುವದಿಲ್ಲವೆಂದೂ ಅವನು ಹಣವನ್ನು ಮಾತ್ರ ಸೆಳೆದುಕೊಳ್ಳುವನೆಂದೂ ಕೇಳುತ್ತೇನೆ. ನಾನು ನಿನ್ನ ತಂದೆಯನ್ನು ಶೋಧಿಸಿಕೊಂಡು ಬರುವೆನು."

"ನೀವು ದೇವರಂತೆ ಬಂದು ಭೆಟ್ಟಿಯಾದಿರಿ. ಪರಮಾತ್ಮನು ನಿಮಗೆ ಕಲ್ಯಾಣ ಮಾಡಲಿ."

ತರುಣಿಯು ಹೀಗೆ ನುಡಿದ ಕೂಡಲೆ ಹಂಬೀರರಾಯನು ಕುದುರೆಯ ಲಗಾಮನ್ನು ಶಂಭುವಿನ ಕೈಯಲ್ಲಿ ಕೊಟ್ಟು:—"ಇಲ್ಲಿ ಗಿಡಗಳು ಬಹಳ

ವಾಗಿರುವದರಿಂದ ಕುದುರೆಗಳು ಹೋಗಲಾರವು. ನೀನು ಇಲ್ಲಿಯೇ ಇವುಗಳನ್ನು ಕಾಯುತ್ತಿರು. ನಾನು ಸುಲಿಗೆಗಾರನನ್ನು ಗೊತ್ತು ಹಚ್ಚುವೆನು."

"ಧನೀಸಾಹೇಬರೇ, ಇಂಥ ಕಟ್ಟಡವಿಯಲ್ಲಿ ಒಬ್ಬರೇ ಹೋಗಕೂಡದು. ಧುಂಡಜಿಯು ಮಹಾ ಮೋಸಗಾರನಿರುವದರಿಂದ ನಿಮಗೆ ಅಪಾಯವನ್ನುಂಟು ಮಾಡಬಹುದು."

ಶಂಭುವು ಹೀಗೆ ನುಡಿದ ಕೂಡಲೆ ಆ ತರುಣಿಯು:—"ಸರದಾರರೇ, ಈ ಸೈನಿಕರು ಅಂದಂತೆ ಧುಂಡಜಿಯು ಮಹಾ ಕಪಟಿಯಿರುವನೆಂದು ಕೇಳಿದ್ದೇನೆ. ಅವನ ಹೆಂಡತಿ ಅವನಿಗಿಂತಲೂ ಚಾಣಾಕ್ಷಳು. ನೀವು ಇಬ್ಬರೂ ಕುದುರೆಗಳನ್ನು ತೆಗೆದುಕೊಂಡೇ ಹೋಗಿರಿ. ನಿಬಿಡವಾದ ಈ ಅರಣ್ಯದಲ್ಲಿ ಕುದುರೆಗಳು ಹೋಗದಂತಿದ್ದರೆ, ಇಲ್ಲಿಯೇ ಒಂದು ಗಿಡಕ್ಕೆ ಕಟ್ಟಿಹಾಕಿ ಹೋಗಿರಿ. ನೀವು ಬರುವವರೆಗೆ ನಾನು ಇವುಗಳನ್ನು ಕಾಯುತ್ತಿರುತ್ತೇನೆ."

"ಛೇ! ಕುದುರೆಗಳನ್ನು ಕಾಯುವದು ನಿನ್ನಿಂದಾಗದು. ನಿನ್ನ ಕಾವಲಿನಲ್ಲಿ ಇವುಗಳನ್ನು ಬಿಟ್ಟು ಹೋದರೆ ಸುಲಿಗೆಗಾರರು ದೋಚಿಕೊಂಡು ಹೋಗುವ ಸಂಭವವಿದೆ" ಎಂದು ಹಂಬೀರರಾಯನು ಆ ತರುಣಿಗೆ ಹೇಳಿ, ಶಂಭುವನ್ನು ಕುರಿತು:—"ನೀನು ಇಲ್ಲಿಯೇ ಇರು. ಅವಶ್ಯವೆನಿಸಿದರೆ ಕೊಂಬು ಊದುವೆನು, ಹೊರಟು ಬಾ."

ಹಂಬೀರರಾಯನು ಹೀಗೆ ನುಡಿದು ಅಡವಿಯಲ್ಲಿ ಹೊರಟು ಹೋದನು. ಆ ತರುಣಿಯು ಇನ್ನೂ ಅಳುತ್ತಲೆ ಇದ್ದಳು. ಶಂಭುವು ಕುದುರೆಗಳನ್ನು ಒಂದು ಗಿಡಕ್ಕೆ ಕಟ್ಟಿಹಾಕಿ ಅವಳ ಬಳಿಗೆ ಹೋಗಿ:—"ತಾಯಿ, ಅಳಬೇಡ. ನನ್ನ ಧನಿಯರು ನಿನ್ನ ತಂದೆಯನ್ನು ಕರೆದುಕೊಂಡು ಬರುವರು."

"ನನ್ನ ತಂದೆಯು ಬಹಳೇ ಪ್ರೇಮಳ ಸ್ವಭಾವದವನು. ಅವನ ಹೊರ್ತು ಈ ಜಗತ್ತಿನಲ್ಲಿ ನನಗೆ ಯಾರ ಆಸರವೂ ಇಲ್ಲ. ಪಾಪಿ ಧುಂಡಜಿಯು ಹಣದಾಶೆಗಾಗಿ ಅವನನ್ನು ಕೊಂದುಬಿಟ್ಟಿರುವನೋ ಏನೋ, ಎಂಬ ಭಯವು ಉಂಟಾಗಹತ್ತಿದೆ."

"ಧುಂಡಜಿಯು ಕೊಲೆಗೆಲಸ ಮಾಡುವದಿಲ್ಲವೆಂದು ನಾನೂ ಕೇಳಿದ್ದೇನೆ. ಹಣ ಹೋದರೂ ಪ್ರಾಣದ ಭಯವಿಲ್ಲ. ಸರದಾರ ಸಾಹೇಬರು ನಿನ್ನ ತಂದೆಯನ್ನು ಸುಲಿಗೆಗಾರರ ಕೈಯೊಳಗಿಂದ ಪಾರು ಮಾಡಿಕೊಂಡು ಬರುವರು; ನೀನು ತಿಲಾಂಶವಾದರೂ ಚಿಂತಿಸಬೇಡ."

ಶಂಭುವು ಹೀಗೆ ನುಡಿದ ಮೇಲೆ ಆ ತರುಣಿಯು ಎದ್ದು ನಿಂತು ತೀಕ್ಷ್ಣ ದೃಷ್ಟಿಯಿಂದ ಕುದುರೆಗಳ ಕಡೆಗೆ ನೋಡಿ, ಇಂಥ ಕುದುರೆಗಳನ್ನು ಪತ್ತೆಹಚ್ಚಿದ ನೀವೂ ನಿಮ್ಮ ಧನಿಯರೂ ಶೂರರಿರಲಿಕ್ಕೆ ಬೇಕು. ನಿಮ್ಮಂಥ ಶೂರರು ಗಂಟು ಬಿದ್ದರೆ ಧುಂಡಜಿಯು ಹೇಳಹೆಸರಿಲ್ಲದಂತಾಗುವದರಲ್ಲಿ ಸಂದೇಹವಿಲ್ಲ. ಏನು ಕುದುರೆಗಳಿವು!" ಎಂದು ನುಡಿದು, ಅವಳು ಆ ಕುದುರೆಗಳ ಬಳಿಗೆ ಹೋಗಿ ಅವುಗಳ ಮೈಮೇಲೆ ಕೈಯಾಡತೊಡಗಿದಳು. ಸುಳಿಗಳನ್ನು ನೋಡುವವರಂತೆ ಹಿಂದೆ-ಮುಂದೆ ತಿರುಗಾಡಿ, ಮೈಮೇಲೆ ಕೈಯಾಡಿಸುತ್ತ ತಿರುಗಾಡಿದಳು. ಅನಂತರ ಅವುಗಳನ್ನು ಬಿಟ್ಟು ಬದಿಗೆ ಸರಿದು ನೀತು:—"ಅಯ್ಯೋ! ಏನಿದು? ಗಿಡಗಳೇ ತಿರುಗುವಂತೆ ಭಾಸವಾಗುವದು! ಬೀಳುತ್ತೇನೆ ಹಿಡಿಯಿರಿ" ಎಂದು ಜೋಲೀ ಹೊಡೆಯತೊಡಗಿದಳು. ಶಂಭುವು ಶೀಘ್ರವಾಗಿ ಬಳಿಗೆ ಹೋಗಿ ಅವಳನ್ನು ಹಿಡಿದನು. ಆ ತರುಣಿಯು ಅವನ ಕೈಮೇಲೆ ಬಿದ್ದುಬಿಟ್ಟಳು. ಆಗ ಅವನು ಆ ತರುಣಿಯನ್ನು ಎತ್ತಿ ಗಿಡದ ನೆರಳಲ್ಲಿ ಹಾಕುವಷ್ಟರಲ್ಲಿ ಹಿಂದೆ ಏನೋ ಸಪ್ಪಳವಾದಂತೆ ಅವನಿಗೆ ಭಾಸವಾಯಿತು. ತಿರುಗಿ ನೋಡುತ್ತಾನೆ ದಷ್ಟಪುಷ್ಟ ದೇಹಗಾತ್ರವುಳ್ಳ ಒಬ್ಬ ಗಡ್ಡದ ತರುಣನು ಒಂದು ಬೊಣ್ಣೆಯನ್ನು ತನ್ನ ತಲೆಯ ಮೇಲೆ ಹೇರಲು ಸಿದ್ಧನಾಗಿ ನಿಂತಿದ್ದಾನೆ! ಶಂಭುವು ಆ ಮನುಷ್ಯನನ್ನು ನೋಡಿದ ಕೂಡಲೆ ಟಣ್ಣನೆ ಜಿಗಿದು ದೂರ ಸರಿದು ನಿಂತನು. ಅವನು ಇನ್ನೊಂದು ಕ್ಷಣ ಅಲ್ಲಿಯೇ ನಿಂತಿದ್ದರೆ ಅವನ ಆಯುಷ್ಯವೇ ಮುಗಿದು ಹೋಗುತ್ತಿತ್ತು. ಶಂಭುವಿನ ಈ ಜಾಗ್ರತೆಯನ್ನು ನೋಡಿ, ಬೊಣಪನು ಖತಿಗೊಂಡು ಬಡಿಗೆಯನ್ನೆತ್ತಿಕೊಂಡೇ ಮುಂದೆ ಸಾಗಿದನು. ಕೂಡಲೆ ಶಂಭುವು ಅವನ ಸಾಹಸವನ್ನು ಗುರುತಿಸಿ, ಒಮ್ಮೆಲೆ ಬದಿಗೆ ಸರಿದು ಆ ಬೊಣಪನಿಗೆ ತೆಕ್ಕೆಬಿದ್ದನು. ಬೊಣಪನು ಬಡಿಗೆಯನ್ನು ಬಿಸುಟಿ ಶಂಭುವನ್ನು ನೆಲಕ್ಕೆ ಕೆಡಹುವದಕ್ಕೆ ಸಾಹಸಪಡತೊಡಗಿದನು; ಆದರೆ ಅವನ ಪ್ರಯತ್ನವು ವ್ಯರ್ಥವಾಯಿತು. ಕೆಲವು ವೇಳೆಯಲ್ಲಿ ಶಂಭುವು ಪ್ರತಿಪಕ್ಷಿಯನ್ನು ನೆಲಕ್ಕೆ ಕೆಡಹಿ ಎದೆಯ ಮೇಲೆ ಕುಳಿತು ಕುತ್ತಿಗೆಯನ್ನು ಹಿಚುಕುತ್ತ—"ಎಲೋ, ನೀನು ಸುಲಿಗೆಗಾರ ಧುಂಡಜಿಯಲ್ಲವೆ?"

"ಹೌದು; ನಾನೇ ಧುಂಡಜಿಯು!" ಎಂದು ಆ ಬೊಣಪನು ಮುಸುಗುಡುತ್ತ ನುಡಿದನು.

"ನನ್ನ ಧನಿಯೆಲ್ಲಿ?"

"ನಾನು ನಿನ್ನ ಧನಿಯನ್ನು ಕಂಡಿಲ್ಲ."

"ನೀನು ಒಬ್ಬನನ್ನು ಮೋಸದಿಂದ ಕರೆದುಕೊಂಡು ಹೋಗಿದ್ದೆಯೆಂತೆ. ಅವನೆಲ್ಲಿರುವನು?"

"ನಾನು ಯಾರನ್ನೂ ಕರೆದೊಯ್ದಿಲ್ಲ."

"ನೀನು ಒಯ್ದಿಲ್ಲ; ನಿನ್ನ ಹೆಂಡತಿಯು ಅವನನ್ನು ಕರೆದೊಯ್ದು ನಿನ್ನ ಸ್ವಾಧೀನಪಡಿಸಿರುವದು ನಿಜವಷ್ಟೆ?"

"ಸುಳ್ಳು."

"ಇಲ್ಲಿ ಆ ಮನುಷ್ಯನ ಮಗಳು ಇದ್ದಾಳೆ. ಅವಳು ನನಗೆ ಎಲ್ಲವನ್ನೂ ಹೇಳಿದಳು." ಎಂದು ಶಂಭುವು ನುಡಿದು ಹೊರಳಿ ನೋಡಿ:—"ಅಮ್ಮಾ, ಎಲ್ಲಿರುವೆ?"

ಶಂಭುವು ಸುತ್ತಲೂ ನೋಡಿದನು. ಆ ತರುಣಿಯು ಎಲ್ಲಿಯೂ ಕಾಣಲಿಲ್ಲ. ದುಂಡಜಿಯು ಬಿದ್ದುಕೊಂಡ ಸ್ಥಳದಲ್ಲಿಯೆ ಗಹಗಹಿಸಿ ನಕ್ಕನು. ಆಗ ಶಂಭುವು ಅವನ ಗಂಟಲವನ್ನು ಮತ್ತಿಷ್ಟು ಹಿಚುಕಿ "ಅವಳೇ ನಿನ್ನ ಮೋಸಗಾರ್ತಿ ಹೆಂಡತಿಯಲ್ಲವೆ?"

ಧುಂಡಜಿಯು ಪಿಸಿಪಿಸಿ ನಕ್ಕನು ಮಾತ್ರ.

"ನೀಚಾ! ನೀನು ನನ್ನ ಧನಿಯರನ್ನು ಕಂಡಿರುವದಿಲ್ಲವೆ?"

"ಇಲ್ಲ; ನಾನು ನಿನ್ನ ಧನಿಯನ್ನು ನಿಜವಾಗಿಯೂ ನೋಡಿಲ್ಲ."

"ನೋಡಿಲ್ಲವೆ? ಹಾಗಿದ್ದರೆ ನನ್ನ ಧನಿಯು ಬರುವವರೆಗೆ ಹೀಗೆಯೇ ಬಿದ್ದುಕೊಂಡಿರು." ಎಂದು ಶಂಭುವು ಗರ್ಜಿಸಿದನು.

ಹಂಬೀರರಾಯನು ತರುಣಿಯ ತಂದೆಯನ್ನು ಹುಡುಕಲಿಕ್ಕೆ ಹೋದವನು. ಬಹುದೂರದ ವರೆಗೆ ತಿರುಗಾಡಿದನು. ಜಲಾಶಯವಿದ್ದಲ್ಲಿ ನೋಡಿದನು. ಎಲ್ಲಿಯೂ ಯಾರೂ ಕಣ್ಣಿಗೆ ಬೀಳಲಿಲ್ಲ. ಹುಡುಕಿ ಹುಡುಕಿ ದಣಿದು ಅವನು ಶಂಭುವಿದ್ದಲ್ಲಿಗೆ ಬಂದನು ಅಲ್ಲಿ ತರುಣಿಗೆ ಪ್ರತಿಯಾಗಿ ಒಬ್ಬ ಗಡ್ಡದ ತರುಣನು ನೆಲಕ್ಕೆ ಬಿದ್ದಿದ್ದನು: ಶಂಭುವು ಅವನ ಎದೆಯ ಮೇಲೆ ಕುಳಿತಿದ್ದನು. ಈ ದೃಶ್ಯವನ್ನು ನೋಡಿ ಹಂಬೀರರಾಯನು ವಿಸ್ಮಿತನಾದನು. ಅವನು ಶಂಭುವನ್ನು ಕುರಿತು:—"ಶಂಭೂ, ಆ ಅನಾಥ ತರುಣಿಯೆಲ್ಲಿ? ಈ ಗಡ್ಡದವನು ಯಾರು? ನೀನು ಇವನ ಎದೆಯ ಮೇಲೇಕೆ ಕುಳಿತಿರುವೆ?" ಎಂದು ಕೇಳಿದನು.

"ಧನೀಸಾಹೇಬ, ಮೊದಲು ಕುದುರೆಯ ಹಗ್ಗಗಳನ್ನು ಬಿಚ್ಚಿಕೊಳ್ಳಿರಿ. ಈ ನರಾಧಮನನ್ನು ಪಿಚಂಡಿ ಬಿಗಿದ ಮೇಲೆ ಮುಂದಿನ ವಿಚಾರ."

ಶಂಭುವು ಹೀಗೆ ನುಡಿವ ಕೂಡಲೆ ಹಂಬೀರರಾಯನು ಹಗ್ಗಗಳನ್ನು ಕೊಟ್ಟನು. ಶಂಭುವು ಅವನ ಕೈಕಾಲುಗಳನ್ನು ಚೆನ್ನಾಗಿ ಬಿಗಿದು ಕಟ್ಟಿ, "ಸರದಾರ ಸಾಹೇಬರೇ, ಇವನೇ ಸುಲಿಗೆಗಾರ ಧುಂಡಜಿಯು. ಆ ತರುಣಿಯೇ ಇವನ ಮೋಸಗಾತಿ ಹೆಂಡತಿಯು. ಇವನು ನನ್ನ ಹಿಂದೆ ಒಂದು ಬಡಿಗೆ ಯನ್ನೆತ್ತಿದನು. ಕೂಡಲೆ ನಾನು ಇವನನ್ನು ಹಿಡಿದು ನೆಲಕ್ಕೆ ಕೆಡಹಿದೆನು. ಆ ಮೋಸಗಾತಿಯು ಎತ್ತಲೋ ಓಡಿ ಹೋದಳು. ನೀವು ಈಶಕೃಪೆಯಿಂದಲೇ ಪಾರಾಗಿ ಬಂದಿರಿ. ಆ ಕಪಟಿಯು ಸುಳ್ಳೇ ಮೂರ್ಛೆಬಂದವರಂತೆ ಬೀಳತೊಡ ಗಿದಳು. ನಾನು ಕನಿಕರದಿಂದ ಅವಳನ್ನು ಹಿಡಿದು ಎತ್ತಿ, ನೆರಳಲ್ಲಿ ಹಾಕಿ ಉಪ ಚರಿಸಹತ್ತಿದೆನು. ಕೂಡಲೆ ಈ ಧುಂಡಜಿಯು ಹಿಂದೆ ಬಂದು ತನ್ನ ಬೊಣ್ಣೆ ಯನ್ನೆತ್ತಿದನು. ನಾನು ಜಾಗ್ರತೆಯಿಂದ ಇದ್ದಮೂಲಕ ಇವನ ಕೈಯೊಳ ಗಿಂದ ಪಾರಾದೆನು." ಎಂದು ನುಡಿದು, ಹಗ್ಗಗಳಿಂದ ಧುಂಡಜಿಯ ಕೈಕಾಲು ಬಂಧಿಸಿ ಮೇಲಕ್ಕೆದ್ದನು. ಹಂಬೀರರಾಯನು ತನ್ನ ಕುದುರೆಯನ್ನು ತರುವ ದಕ್ಕಾಗಿ ಗಿಡದ ಬಳಿಗೆ ಹೋದನು.

"ಎಲಾ! ಇದೇನು?" ಎಂದು ಹಂಬೀರರಾಯನು ಉದ್ಗಾರ ತೆಗೆದು: "ಶಂಭೂ, ನನ್ನ ಕುದುರೆಯ ಥಡಿಗೆ ಕಟ್ಟಿದ್ದ ರತ್ನಖಚಿತ ಕಠಾರಿಯೇ ಇಲ್ಲವಲ್ಲ?"

ಶಂಭುವು ಕುದುರೆಯ ಬಳಿಗೆ ಹೋದನು. ಕಠಾರಿಯ ಚೀಲ ವನ್ನು ಕಟ್ಟಿದ ಹಗ್ಗವು ಮಾತ್ರ ಹರಿದು ಜೋತಾಡತೊಡಗಿತ್ತು. ಅದನ್ನು ನೋಡಿ ಅವನು:—"ಧನೀಸಾಹೇಬರೆ, ಆ ಮಾಯಗಾತಿಯು ಕಾರಸ್ಥಾನ ವಿದ. ಅವಳು ಕುದುರೆಯನ್ನು ನೋಡುವ ನೆವದಿಂದ ಅದರ ಮೇಲೆ ಕೈ ಯಾಡಿಸತೊಡಗಿದ್ದಳು. ಅವಳು ಒಬ್ಬ ಅನಾಥ ತರುಣಿಯೆಂದು ನಾನು ಅವಳನ್ನು ಆಗ ಕಾಣುತ್ತಿದ್ದೆನಾದ್ದರಿಂದ ಅವಳ ವಿಷಯವಾಗಿ ಏನೂ ವಿಕಲ್ಪ ಉಂಟಾಗಲಿಲ್ಲ."

ಶಂಭುವು ಹೀಗೆ ಹೇಳಿದ ಕೂಡಲೆ ಹಂಬೀರರಾಯನು ಸಂತಪ್ತನಾದನು. ಅವನು ಧುಂಡಜಿಯ ಬಳಿಗೆ ಬಂದು ಕ್ರೋಧವಾಣಿಯಿಂದ:—"ಎಲೋ, ಸುಲಿಗೆಗಾರಾ! ನಿನ್ನ ಹೆಂಡತಿಯು ಎಲ್ಲಿರುವಳು ಹೇಳು. ನೀನು ಒಳ್ಳೆಯ ಮಾತಿನಿಂದ ನನ್ನ ಕಠಾರಿಯನ್ನು ಕೊಡದಿದ್ದರೆ ಪ್ರಾಣಕ್ಕೆ ಎರವಾಗುವೆ."

"ಸರದಾರರೆ! ನಿಮಗೆ ಆ ಕಠಾರಿಯ ಆವಶ್ಯಕತೆಯಿದ್ದರೆ ನನ್ನ ಜೀವಕ್ಕೆ

ಅಪಾಯ ಮಾಡುವದಿಲ್ಲನೆಂದು ವಚನ ಕೊಡಿರಿ. ಅಂದರೆ ನಿಮ್ಮ ಒಡವೆಯು ನಿಮ್ಮ ಕೈಸೇರುವಂತೆ ಮಾಡುವೆನು." ಎಂದು ಧುಂಡಜಿಯು ಹೇಳಿದನು.

"ನಿನ್ನನ್ನು ಬಿಡಬೇಕೆ? ನಿನಗೆ ಜೀವದಾನ ಕೊಡುವವರಿಂದ ನಾನು ಸಮಾಜದ ಅಕಲ್ಯಾಣ ಮಾಡಿದಂತಾಗುವದು. ನನ್ನ ಹಾನಿಯು ಅತ್ಯಲ್ಪವಾದದ್ದು; ಆದರೆ ನಿನ್ನನ್ನು ಹೋಗಗೊಟ್ಟರೆ ಎಷ್ಟು ಜನರ ಪ್ರಾಣಕ್ಕೆ ಮುಳುವು ಆಗುವಿಯೋ, ಎಷ್ಟು ಜನರ ಆಸ್ತಿಯನ್ನು ಅಪಹಾರ ಮಾಡುವೆಯೋ! ನಿನ್ನನ್ನು ಬಿಟ್ಟು ನಾನು ಸಾಮಾಜಿಕ ಅಪರಾಧವನ್ನು ಮಾಡಲಾರೆನು."

"ಸರದಾರರೆ, ನನ್ನನ್ನು ಬಿಟ್ಟು ಬಿಡಿರೆಂದು ನಾನು ಕೇಳಿಕೊಳ್ಳುವದಿಲ್ಲ. ನನಗೆ ಜೀವದಾನ ಕೊಟ್ಟರೆ ಸಾಕು. ಮುಂದೆ ನನ್ನ ಬಂಧವಿಮೋಚನೆಯ ವ್ಯವಸ್ಥೆಯನ್ನು ನಾನು ಮಾಡಿಕೊಳ್ಳುವೆನು. ನನಗೆ ಅದು ಸಾಧಿಸದಿದ್ದರೆ ಆಜೀವವಾಗಿ ನಿಮ್ಮ ಸೆರೆಯಾಳಾಗಿ ಉಳಿಯುವೆನು ಕಠಾರಿಯನ್ನು ಹುಡುಕಿ ಕೊಟ್ಟದ್ದಕ್ಕಾಗಿ ನನ್ನನ್ನು ಬಿಡುಗಡೆ ಮಾಡಿರೆಂದು ನಾನು ನಿಮ್ಮನ್ನು ಕೇಳುವದಿಲ್ಲವೆಂದ ಮೇಲೆ ನೀವು ಇಷ್ಟು ಹೆದರುವ ಕಾರಣವೇನು?"

ಹಂಬೀರರಾಯನು ಸ್ವಲ್ಪವೇಳೆ ಯೋಚಿಸಿ:—"ಒಳ್ಳೇದು. ನಾನು ನಿನ್ನನ್ನು ಕೊಲ್ಲುವದಿಲ್ಲ. ನೀನು ಅಪರಾಧಿಯಾಗಿ ನನ್ನ ಪ್ರಭುವಿನ ನ್ಯಾಯಾಸನದ ಮುಂದೆ ನಿಂತೆಯೆಂದರೆ ಆಗ ನಿನಗೆ ಒಂದು ವೇಳೆ ದೇಹಾಂತ ಶಾಸನ ವಿಧಿಸಲ್ಪಡುವ ಸಂಭವವುಂಟು. ಅದಕ್ಕೆ ಮಾತ್ರ ನಾನು ಹೊಣೆಗಾರನಲ್ಲ."

"ನಾನು ನ್ಯಾಯಶಾಸನಕ್ಕೆ ಅಂಜುವದಿಲ್ಲ. ನನಗೆ ಪ್ರಾಣದಂಡನೆ ವಿಧಿಸುವಂಥ ಯಾವ ನ್ಯಾಯಾಧೀಶನೂ ಆದಿಲಶಾಹೀ ಓಲಗದಲ್ಲಿಲ್ಲ. ಮುಸಲ್ಮಾನೀ ರಾಜ್ಯದೊಳಗಿನ ಕರ್ಮಚಾರಿಗಳು ನನ್ನ ಮನೆಯವರಿದ್ದ ಹಾಗೆ. ಮಠದ ಮಹಂತರೂ ಧುಂಡಿರಾಜರೂ ನನ್ನ ಪರಮ ಸ್ನೇಹಿತರು. ಹೀಗಿದ್ದ ಮೇಲೆ ನಾನು ಮರಣ ದಂಡನೆಗೆ ಭಯಪಡುವ ಕಾರಣವೇನು?"

"ಧುಂಡಜಿ, ನಿನ್ನನ್ನು ಪರರಾಜ್ಯದ ನ್ಯಾಯಾಸ್ಥಾನಕ್ಕೆ ಒಯ್ಯುವದಿಲ್ಲ. ಸ್ವರಾಜ್ಯದ ನ್ಯಾಯಾಸ್ಥಾನಕ್ಕೆ ಒಯ್ಯುವೆನು. ಶಿವಾಜಿ ಮಹಾರಾಜರಿಂದ ಸ್ಥಾಪಿಸಲ್ಪಟ್ಟ ಹಿಂದುಪದ ಪಾತಶಾಹಿಯ ನ್ಯಾಯಾಸ್ಥಾನದಲ್ಲಿ ಅನ್ಯಾಯದ ಲವಲೇಶವೂ ಇಲ್ಲ. ಅಲ್ಲಿ ದುಷ್ಟದಂಡನೆ ಶಿಷ್ಟ ಪರಿಪಾಲನೆಗಳೇ ಮುಖ್ಯ ಧರ್ಮಗಳಾಗಿವೆ."

"ಏನೂ ಅಡ್ಡಿಯಿಲ್ಲ. ನೀವು ನನ್ನ ಕೊಲೆ ಮಾಡದಿದ್ದರೆ ಸಾಕು."

"ನಾವು ನಿನ್ನೊಬ್ಬನನ್ನೇ ಕಠಾರಿಯನ್ನು ತರಲಿಕ್ಕೆ ಹೋಗಗೊಡುವದಿಲ್ಲ."

"ನಾನು ಹೋಗಬೇಕಾದುದೇ ಇಲ್ಲ. ಇಲ್ಲಿಂದಲೇ ನಿಮ್ಮ ಕಠಾರಿಯನ್ನು ತರಿಸುವೆನು." ಎಂದು ಧುಂಡಜಿಯು ನುಡಿದು:—"ಸರದಾರರೆ, ನೀವು ನನ್ನ ಜೀವಕ್ಕೆ ಅಪಾಯ ಮಾಡುವದಿಲ್ಲವಷ್ಟೆ?'' ಎಂದು ವಿನಯದಿಂದ ಕೇಳಿದನು.

"ಇಲ್ಲ, ನಾನು ನಿನ್ನ ಪ್ರಾಣಕ್ಕೆ ಅಪಾಯ ತರುವದಿಲ್ಲ."

ಧುಂಡಜಿಯು ಒಂದು ವಿಧವಾಗಿ ಧ್ವನಿ ಮಾಡಿ ಚೀರಿದನು. ಕೂಡಲೆ ಅದೇ ವಿಧದ ಧ್ವನಿಯ ಉತ್ತರ ದೊರೆಯಿತು. ಧುಂಡಜಿಯು ಮತ್ತೊಮ್ಮೆ ಮತ್ತೊಂದು ವಿಧವಾಗಿ ಚೀರಿದನು. ಆ ಧ್ವನಿಗೂ ಉತ್ತರ ಬಂತು. ಮುಂದೆ ಕೆಲವು ವೇಳೆಯಲ್ಲಿ ಒಬ್ಬ ಸ್ತ್ರೀಯು ಅಲ್ಲಿಗೆ ಬಂದಳು. ಅವಳು ಭಯಭೀತ ಳಾಗಿ ಧುಂಡಜಿಯನ್ನು ನೋಡಿ—"ನಾಥರೆ, ಇದೇನು? ನಿಮ್ಮ ಅವಸ್ಥೆಯು ಹೀಗೇಕಾಯಿತು?"

"ನನ್ನ ಹಾಗೂ ನಿನ್ನ ದುರ್ದೈವ. ಈ ಸೈನಿಕನು ಮಲ್ಲವಿದ್ಯೆಯಲ್ಲಿ ನನ ಗಿಂತ ಬಲ್ಲಿದನು. ಇದುವರೆಗೆ ನನಗೆ ಇಂಥ ಬಲಾಢ್ಯರು ಗಂಟುಬಿದ್ದಿದ್ದಿಲ್ಲ. ಆ ಶಿವಾಜಿಯ ಕೈಕೆಳಗೆ ಇಂಥ ಬಲಿಷ್ಠರಿದ್ದುದರಿಂದಲೆ ಸ್ವರಾಜ್ಯ ಸ್ಥಾಪನೆಯ ಕಾರ್ಯವು ಶೀಘ್ರವಾಗಿ ನೆರವೇರತೊಡಗಿದೆ."

ಧುಂಡಜಿಯು ಹೀಗೆ ನುಡಿದ ಕೂಡಲೆ ಹಂಬೀರರಾಯನು:—"ಮಹಾ ರಾಜರ ಪಕ್ಷವು ಸತ್ಪಕ್ಷವು. ಅವರಿಗೆ ನೈತಿಕ ಬೆಂಬಲವುಂಟು. ಸ್ವರಾಜ್ಯಸಿಂಹಾ ಸನವು ಸ್ಥಾಪಿತವಾಗಬೇಕೆಂದು ಭಾರತೀಯರು ಅವರಿಗೆ ಹೃತ್ಪೂರ್ವಕವಾಗಿ ನೆರವಾಗುತ್ತಿರುವರು. ಧುಂಡಜಿ, ನೀನು ಹಿಂದುವಲ್ಲವೆ? ಮರಾಟಿಗನಲ್ಲವೆ? ಮಹಾರಾಜರಿಂದ ಸ್ಥಾಪಿಸಲ್ಪಡುತ್ತಿರುವ ಸ್ವರಾಜ್ಯವು ನಿನ್ನದಲ್ಲವೆ? ಸ್ವಜನರ ಕೊಲೆ ಸುಲಿಗೆ ಮಾಡಿ ಹೊಟ್ಟೆ ಹೊರಕೊಂಡರೆ ಯಾವ ಪುರುಷಾರ್ಥ ಸಾಧಿಸಿ ದಂತಾಗುವದು? ನೀನು ಈ ಘೋರ ವಿಪಿನದಲ್ಲಿ ತೋರಿಸುತ್ತಿರುವ ಪ್ರತಾಪ ವನ್ನು ಸ್ವರಾಜ್ಯಕಾರ್ಯದಲ್ಲಿ ತೋರುತ್ತಿದ್ದರೆ ನೀನೂ ಸ್ವರಾಜ್ಯ ಸೋಪಾನ ವನ್ನೇರಲಿಕ್ಕೆ ಅರ್ಹನಾಗುತ್ತಿದ್ದೆ. ನೀನು ಹಿಂದುವಿದ್ದರೂ, ಮರಾಟಿಗನಿದ್ದರೂ ಯವನನಿದ್ದ ಹಾಗೆ. ನೀನು ಸ್ವರಾಜ್ಯದ ಪರಮ ವೈರಿ. ಹಿಂದುಗಳ ಕಡುಹಗೆ. ನಿನಗೆ ಮಾತೃಭೂಮಿಯ ಅಭಿಮಾನವಿಲ್ಲ. ಸ್ವಜನರ ವಿಷಯವಾಗಿ ಸಹಾನು ಭೂತಿಯಿಲ್ಲ. ಆದುದರಿಂದ ನಿನ್ನ ಕೊಲೆ ಮಾಡಿಬಿಡಬೇಕೆಂದು ಯೋಚಿ ಸಿದ್ದೆನು; ಆದರೆ ನನ್ನ ಮಹತ್ವದ ಒಡವೆಯು ಸಲುವಾಗಿ ಜೀವದಾನ ಕೊಡ

ಬೇಕಾಯಿತು. ನೀನು ನ್ಯಾಯ ಸಮ್ಮತವಾದ ಸ್ವರಾಜ್ಯ ಕಾರ್ಯವನ್ನು ಮಾ ಡುವ ಬಗ್ಗೆ ವಚನಬದ್ಧನಾದರೆ ಸ್ವರಾಜ್ಯದ ನ್ಯಾಯಾಸನದ ಮುಂದೆ ನಿನ್ನ ಅಪರಾಧವು ಕ್ಷಮಿಸಲ್ಪಡುವದು. ಹಾಗೆ ಮಾಡದೆ ಹೋದರೆ ನಿನಗೆ ನಿಶ್ಚಯ ವಾಗಿ ಪ್ರಾಣದಂಡನೆಯ ಶಿಕ್ಷೆ ವಿಧಿಸಲ್ಪಡುವದು."

ಹಂಬೀರರಾಯನು ಹೀಗೆ ನುಡಿದ ಕೂಡಲೆ ಘುಂಡಜಿಯು ವಿಚಾರ ಮಗ್ನನಾದನು. ಅವನು ಸ್ವಲ್ಪ ಹೊತ್ತು ಯೋಚಿಸಿ- "ಸರದಾರರೆ, ನೀವು ಹೇಳುತ್ತಿರುವ ಮಾತುಗಳು ಸತ್ಯವಿರುವವು; ಆದರೆ ನಿಮ್ಮ ವಿಚಾರಗಳಂತೆ ನಡೆಯುವ ಬಗ್ಗೆ ನಾನು ಈಗಲೆ ವಚನಬದ್ಧನಾಗುವದಿಲ್ಲ. ನಿನಗೂ ವಿಚಾ ರಕ್ಕೆ ಅಸ್ಪದ ದೊರೆಯಬೇಕು."

'ಒಳ್ಳೇದು. ನಿನ್ನ ಇಚ್ಛೆಯಿದ್ದಂತೆ ಆಗಲಿ. ನನ್ನ ಕಠಾರಿಯೆಲ್ಲಿರುವದು'

"ಪ್ರಿಯೆ!" ಘುಂಡಜಿಯು ತನ್ನ ಹೆಂಡತಿಯನ್ನು ಕುರಿತು--"ಕಠಾರಿ ಯನ್ನು ಸರದಾರರಿಗೆ ಕೊಟ್ಟು ಬಿಡು."

ನಾಥರೆ, ಪ್ರಿಯರೆ, ಅದು ಬರೇ ಕಠಾರಿಯಲ್ಲ. ಸಾವಿರಾರು ರೂಪಾಯಿ ಬೆಲೆ ಬಾಳುವ ರತ್ನಖಚಿತವಾದ ಕಠಾರಿಯು."

"ನಿಜವು. ಆದರೆ ಮಾಡುವದೇನು? ನನ್ನ ಪ್ರಾಣಕ್ಕೆ ಪ್ರತಿಯಾಗಿ ಕಠಾರಿಯನ್ನು ಕೊಡುವೆನೆಂದು ನಾನು ವಚನ ಕೊಟ್ಟಿದ್ದೇನೆ. ನನ್ನ ಪ್ರಾಣ ವುಳಿದರೆ ಅಂಥ ಎಷ್ಟೋ ಒಡವೆಗಳನ್ನು ಸಂಪಾದಿಸಬಹುದು."

"ನಿಮ್ಮ ಮಾತು ನಿಜ; ಆದರೆ ಕಠಾಯನ್ನು ನೋಡಿದ ಮೇಲೆ ಅದನ್ನು ತಿರುಗಿ ಕೊಡಬಾರದೆಂದೆನಿಸುವದು."

"ನನ್ನ ಜೀವ ಹೋದರೂ?"

"ಒಂದು ಕ್ಷಣವಾದರು ಹಾಗೆಯೇ ಅನಿಸುವದು. ವಿಚಾರ ಮಾಡಿ ನೋಡಿದರೆ ಮಾತ್ರ ನಿರುಪಾಯವಾಗಿ ಕೊಡಬೇಕಾಗುವದು."

"ಉಪಾಯಗಾಣದೆ ಕೊಡಬೇಕಾಗಿರುವದೇನೋ ನಿಜ. ಎಲ್ಲಿದೆ ಆ ಕಠಾರಿಯು?"

"ಪ್ರಿಯರೇ, ಕೊಟ್ಟೇ ಬಿಡಲಾ?"

"ಅವಶ್ಯ! ಅವಶ್ಯ!" ಎಂದು ಘುಂಡಜಿಯು ನುಡಿದು:—"ನನ್ನ ಪ್ರಾಣ ವು ಉಳಿಯಬೇಕೆನಿಸಿದರೆ ಮಾತ್ರ ಕೊಡು."

ಘುಂಡಜಿಯ ಹೆಂಡತಿಯು ಉದ್ವಿಗ್ನತೆಯಿಂದ ಕಠಾರಿಯನ್ನು ಬೈಲಿಗೆ

ತೆಗೆದು:—"ನೋಡಿರಿ. ಇದನ್ನು ಕೊಡಬೇಕಾದರೆ ಜೀವವು ಒಪ್ಪಾಡತೊಡಗಿದೆ."

"ಎಷ್ಟೆ ಹಣ್ಣು ಮಾಡಿ ಗಳಿಸಿರುವೆ!" ಶಂಭುವು ತಿರಸ್ಕಾರದಿಂದ ಅಂದನು.

ಹಂಬೀರರಾಯನು ಕಠಾರಿಯನ್ನು ಕೈಯಲ್ಲಿ ತೆಗೆದುಕೊಂಡು:--"ನೀನು ಇದಕ್ಕೆ ಕಟ್ಟಿದ ಹಗ್ಗಗಳನ್ನು ಹೇಗೆ ಕೊಯ್ದಿ? ಯಾವಾಗ ಕೊಯ್ದಿ?"

"ಸರದಾರರೇ, ನಿಮ್ಮ ಈ ಸೈನಿಕನೆದುರಿಗೇ ಇದನ್ನು ತೆಗೆದುಕೊಂಡೆನು. ಕುದುರೆ ನೋಡ ಹೋಗಿ ನನ್ನ ಕೈಯಲ್ಲಿರುವ ಅಸ್ತ್ರದಿಂದ ಹೀಗೆ ಕೊಯ್ದೆನು" ಎಂದು ನುಡಿದು, ಧುಂಡಜಿಯು ಹೆಂಡತಿಯು ತನ್ನ ಗಂಡನನ್ನು ಕಟ್ಟಿದ ಹಗ್ಗಗಳನ್ನು ಚರಚರ ಕೊಯ್ದಳು. ಕೂಡಲೆ ಧುಂಡಜಿಯು ಹೊರಬಿದ್ದು ಓಡತೊಡಗಿದನು. ಕೂಡಲೆ ಹಂಬೀರರಾಯನು ಶಂಭುವನ್ನು ಕುರಿತು:—"ಹೂಂ! ಅನುಮಾನವೇಕೆ? ಶರಸಂಧಾನ ಮಾಡು."

"ಹಾ! ಸರದಾರರೇ, ನನ್ನ ಜೀವಕ್ಕೆ ಅಪಾಯ ಮಾಡುವದಿಲ್ಲವೆಂದು ಮೊದಲೇ ವಚನಬದ್ಧರಾಗಿರುವಿರಿ. ನಿಮ್ಮ ಕೈಯಿಂದ ಮುಕ್ತನಾದ ಮೇಲೆ ಸ್ವಂತದ ರಕ್ಷಣೆಯ ಉಪಾಯವನ್ನು ನಾನೇ ಹುಡುಕಿಕೊಳ್ಳುವೆನೆಂದು ಮೊದಲೇ ಹೇಳಿದ್ದೆನು. ನೀವು ನನ್ನನ್ನು ಹಿಡಿಯಲಿಕ್ಕೆ ಮಾತ್ರ ಅಧಿಕಾರವುಳ್ಳವರಾಗಿರುವಿರಿ. ನಿಮ್ಮ ವಚನವು ನನ್ನ ಪ್ರಾಣಹರಣ ಮಾಡುವ ಅಧಿಕಾರವನ್ನು ಕಸಿದುಕೊಂಡಿದೆ."

ಧುಂಡಜಿಯು ಇಷ್ಟು ಹೇಳಿ ವಾಯುವೇಗದಿಂದ ಗಿಡದ ಗುಂಪಿನಲ್ಲಿ ಮರೆಯಾಗಿ ಹೋದನು. ಆಗ ಶಂಭುವು:—"ಧನಿಸಾಹೇಬ, ನೀಚನು ಓಡಿಹೋದನು. ಗಿಡದ ಗುಂಪಿನಲ್ಲಿ ಕುದುರೆಗಳು ಹೋಗುವದಿಲ್ಲ. ಅವನು ನಮಗೆ ಮೋಸ ಮಾಡಿ ಹೋದನು."

ಶಂಭುವು ಹೀಗೆ ನುಡಿದ ಕೂಡಲೆ ಅವನ ಹೆಂಡತಿಯು:—"ಅವನು ಓಡಿಹೋಗುವದಿಲ್ಲವೆಂದು ನಿಮಗೆ ವಚನ ಕೊಟ್ಟಿದ್ದಿಲ್ಲವಷ್ಟೆ?"

"ಹಾಗೇನೂ ಇಲ್ಲ. ನಾವು ಅವನಿಂದ ಹಾಗೆ ವಚನ ತೆಗೆದುಕೊಳ್ಳಬೇಕಾಗಿತ್ತು."

"ನಿಮ್ಮ ತಪ್ಪಿನ ಲಾಭವನ್ನು ಅವನು ಹೊಂದಿದನು. ನೀವು ಅವನನ್ನು ಇನ್ನು ಹಿಡಿಯಲಾರಿರಿ."

"ನೀನು ಅವನ ಹಗ್ಗವನ್ನು ಕೊಯ್ಯಬಹುದೆ?"

"ಕಠಾರಿಯನ್ನು ಹೇಗೆ ತೆಗೆದುಕೊಂಡೆಯೆಂದು ನೀನು ಕೇಳಿದ್ದಕ್ಕೆ ನಾನು ಪ್ರಯೋಗ ಮಾಡಿ ತೋರಿಸಿದೆನು. ನನ್ನ ಕಡೆಗೇನು ತಪ್ಪು?"

ತರುಣಿಯು ಹೀಗೆ ನುಡಿದು ಹಂಬೀರರಾಯನನ್ನು ನೋಡತೊಡಗಿದಳು. ಅವನು ಶಂಭುವನ್ನು ಕುರಿತು:—"ಶಂಭೂ, ನಮ್ಮಿಂದ ತಪ್ಪಾಗಿವೆ. ಇನ್ನು ಹೆಚ್ಚು ಮಾತಾಡಿ ಪ್ರಯೋಜನವಿಲ್ಲ. ಈ ತರುಣಿಯನ್ನು ತೆಗೆದುಕೊಂಡು ಹೋಗಿ ಅಪರಾಧಿಯೆಂದು ನ್ಯಾಯಾಸನದ ಮುಂದೆ ನಿಲ್ಲಿಸುವದರಲ್ಲಿಯೂ ಅರ್ಥವಿಲ್ಲ." ಎಂದು ನುಡಿದು ಆ ತರುಣಿಯನ್ನು ಕುರಿತು:— "ಅಮ್ಮಾ, ನೀನು ಹೋಗು. ಸುಲಿಗೆಯ ಕಾರ್ಯ ಬಿಟ್ಟು ಸ್ವರಾಜ್ಯಕಾರ್ಯ ಮಾಡುವದಕ್ಕೆ ನೀನು ನಿನ್ನ ಗಂಡನ ಮನವೊಲಿಸು."

ಹಂಬೀರರಾಯನು ಹೀಗೆ ನುಡಿದ ಕೂಡಲೆ ಆ ತರುಣಿಯು ಆತನನ್ನು ಅಭಿವಂದಿಸಿದಳು. ಹಂಬೀರರಾಯನೂ ಶಂಭುವೂ ತಮ್ಮ ಕುದುರೆಗಳನ್ನೇರಿ ಮಾರ್ಗಕ್ರಮಣ ಮಾಡತೊಡಗಿದರು. ಆ ತರುಣಿಯು ಅಲ್ಲಿಂದ ಹೊರಟು ತನ್ನ ಪತಿಯನ್ನು ಕೂಡಿದಳು.

---

## ೮ ಪ್ರಗತಿಪಥವೇರುವ ಪ್ರತಾಪನಿಧಿ.

ಹಂಬೀರರಾಯನು ಶಂಭುವಿನೊಡನೆ ಪಟ್ಟಣಕ್ಕೆ ಬಂದನು. ಅವನು ಅಲ್ಲಿ ಒಂದು ವಸತಿಗೃಹವನ್ನು ಶೋಧಿಸಿ ಇಳಿದನು. ಅನಂತರದಲ್ಲಿ ಊರಲ್ಲಿ ಪ್ರಾಮಾಣಿಕ ವರ್ತಕರಾರಿರುವರೆಂಬದನ್ನು ಶೋಧಿಸಲಾಗಿ ಶೇಠ ಮಥುರಾದಾಸನೆಂಬ ಗುರ್ಜರ ಸಾವುಕಾರನು ಪ್ರಾಮಾಣಿಕನಿರುವನೆಂದು ತಿಳಿಯಿತು. ಕೂಡಲೆ ಅವನು ಪೇಟೆಗೆ ಹೋಗಿ ಮಥುರಾದಾಸನ ಮನೆಯನ್ನು ಗೊತ್ತು ಹಚ್ಚಿದನು. ಹಂಬೀರರಾಯನು ಹೋದಾಗ ಮಥುರಾದಾಸನು ಯಾವುದೋ ಒಂದು ವ್ಯವಹಾರದಲ್ಲಿ ತೊಡಗಿದ್ದನು. ಆದರೂ ಅವನು ಹಂಬೀರರಾಯನನ್ನು ಸನ್ಮಾನಿಸಿ, ಯೋಗ್ಯ ಸ್ಥಳದಲ್ಲಿ ಕುಳ್ಳಿರಿಸಿ ಬಂದ ಕಾರಣವನ್ನು ವಿಚಾರಿಸಿದನು. ಒಂದು ವಸ್ತುವನ್ನು ಅಡವು ಇಟ್ಟು ಹಣ ಒಯ್ಯಬೇಕಾಗಿದೆಯೆಂದು ಹಂಬೀರರಾಯನು ಮಥುರಾದಾಸನಿಗೆ ಹೇಳಿದನು. ಸ್ವಲ್ಪ ವೇಳೆ ಕುಳಿತುಕೊಳ್ಳಲಿಕ್ಕೆ ಹಂಬೀರರಾಯನಿಗೆ ಹೇಳಿ, ಅವನು ತನ್ನ ವ್ಯವಹಾರದಲ್ಲಿ ತೊಡಗಿದನು. ಅರ್ಧಗಳಿಗೆಯೊಳಗೆ ಆ ವ್ಯವಹಾರದ ಪೂರ್ತತೆಯಾಯಿತು. ವ್ಯವಹಾರಗಳು ಶೇಠಜಿಯ ನಿರೋಪ ಹೊಂದಿ ಹೊರಟು ಹೋದರು. ಅನಂತರ

ದಲ್ಲಿ ಅವನು ಹಂಬೀರರಾಯನ ಬಳಿಗೆ ಬಂದು, ತನ್ನ ಗಾದಿಯ ಮೇಲೆ ಕುಳಿತು:—"ನಿಮ್ಮ ಒಡವೆಯನ್ನು ತೆಗೆಯಿರಿ" ಎಂದು ಹೇಳಿದನು. ಹಂಬೀರ ರಾಯನು ಕಠಾರಿಯನ್ನು ತೆಗೆದು ಸೇಠಜಿಯ ಕೈಯಲ್ಲಿ ಕೊಟ್ಟನು. ಕಠಾರಿಯನ್ನು ನೋಡಿದ ಕೂಡಲೆ ಮಥುರಾದಾಸನು ನಕ್ಕನು. ಈ ಕಠಾರಿಗೆ ನಿಮಗೆ ಎಷ್ಟು ಹಣ ಬೇಕು" ಎಂದು ಕೇಳಿದನು.

"ಒಂದು ನೂರು ರೂಪಾಯಿ" ಎಂದು ಉತ್ತರಿಸಿದನು.

"ನಾಲ್ಕು ರೂಪಾಯಿ ಬೆಲೆಯ ಕಠಾರಿಗೆ ನೂರು ರೂಪಾಯಿ ಬೇಕೆ?" ಎಂದೆಂದು ಅಚ್ಚರಿಯಿಂದ ಮಥುರಾದಾಸನು ಕೇಳಿದನು.

"ಸೇಠಜೀ, ಚೆನ್ನಾಗಿ ಪರೀಕ್ಷಿಸಿರಿ." ಎಂದು ಹಂಬೀರರಾಯನು ಹೇಳಲು, ಮಥುರಾದಾಸನು ಕನ್ನಡಕವನ್ನು ತೆಗೆದು ಕಣ್ಣಿಗೆ ಹಾಕಿಕೊಂಡು ಕಠಾರಿಯನ್ನು ನಿರೀಕ್ಷಿಸಿದನು. ಅದರ ಬೆಲೆಯು ಬಹಳವಿರುವದೆಂಬದು ಆಗ ಅವನಿಗೆ ಗೊತ್ತಾಯಿತು. ಕಠಾರಿಯ ಹಿಡಿಕೆಯು ಬಂಗಾರದ್ದೆಂದೂ, ಮೇಲೆ ಕೆಚ್ಚಿದ ಹರಳುಗಳು ನಿಜವಾದ ರತ್ನಗಳೆಂದೂ ಅವನ್ನು ನೋಡಿದ ಕೂಡಲೆ ಮಥುರಾದಾಸಗೆ ತಿಳಿದಿದ್ದಿಲ್ಲ. ಕನ್ನಡಕ ಹಾಕಿ ನೋಡಲಾಗಿ ಕಠಾರಿಯ ನಿಜವಾದ ಬೆಲೆ ಅವನಿಗೆ ಗೊತ್ತಾಯಿತು.

"ನೀವು ಇದನ್ನು ಮಾರಲು ಮನಸ್ಸು ಮಾಡಿದರೆ ಅಮೋಘವಾದ ಬೆಲೆಯು ನಿಮಗೆ ದೊರೆಯುವದು" ಎಂದು ಮಥುರಾದಾಸನು ಹೇಳಿದನು.

"ಮಾರುವ ಒಡವೆಯಲ್ಲ" ಎಂದು ಹಂಬೀರರಾಯನು ನುಡಿದು:— "ಮಥುರಾದಾಸರೇ, ಈ ಕಠಾರಿಯ ಬೆಲೆ ಏನಾಗುವದು?"

"ಮಾರುವದೇ ಆಗದಿದ್ದರೆ ಬೆಲೆಯನ್ನು ತೆಗೆದುಕೊಂಡು ಮಾಡುವದೇನು?"

"ಮಾರದಿದ್ದರೂ ಒಡವೆಯ ಬೆಲೆ ಗೊತ್ತಿರುವದು ಅಗತ್ಯವಿದೆ. ಬೆಲೆ ಹೇಳಿದರೆ ನಿಮಗೇನೂ ಹಾನಿಯಿಲ್ಲವಷ್ಟೆ?"

"ಬಂಗಾರದ ಬೆಲೆಯಂತೂ ಗೊತ್ತೇ ಆಗುವಂತಿದೆ. ಇದಕ್ಕೆ ಕೆಚ್ಚಿದ ರತ್ನಗಳು ಅಮೌಲ್ಯವಾದವುಗಳಿರುವವು. ಇದರ ಬೆಲೆ ಎರಡು ಸಾವಿರ ರೂಪಾಯಿಗಳ ಮೇಲೆ ಆಗುವದು. ಇನ್ನು ಅಗತ್ಯವಿದ್ದವರು ಕೂಡಿದರೆ ನಾಲ್ಕು ಸಾವಿರದ ವರೆಗೂ ಏರಬಹುದು. ಅಗತ್ಯವಿಲ್ಲದವರು ಒಂದು ಸಾವಿರಕ್ಕೂ ಕೇಳಬಹದು ಹರಳು ಕಲ್ಲಿನ ಬೆಲೆಯನ್ನು ಅಷ್ಟೊಂದು ನಿಕಟವಾಗಿ

ಕಟ್ಟಲು ಯಾರಿಗೂ ಸಾಧ್ಯವಿಲ್ಲ." ಎಂದು ಮಥುರಾದಾಸನು ನುಡಿದನು:-"ನೂರು ರೂಪಾಯಿಗಳಿಗಾಗಿ ಇಂಥ ದೊಡ್ಡ ಬೆಲೆಯ ಒಡವೆಯನ್ನು ಅಡವು ಇಡುವುದೇಕೆ"

"ಇದರ ಹೊರತು ನಮ್ಮಲ್ಲಿ ಯಾವ ಒಡವೆಗಳೂ ಇಲ್ಲ. ಅನಿರ್ವಾಹಕ್ಕಾಗಿ ಇದನ್ನು ತಂದಿರುವೆನು. ಹೆಚ್ಚು ಬೆಲೆಯ ಒಡವೆಯೆಂದು ಹೆಚ್ಚು ಹಣವನ್ನು ಒಯ್ದು ಪ್ರಯೋಜನವೇನು?"

"ಈ ಹಣವು ವಿವಾಹ ಕಾರ್ಯಕ್ಕಾಗಿ ಬೇಕಾಗಿರುವದೆ?"

"ಅಲ್ಲ; ಶಿವಾಜಿ ಮಹಾರಾಜರು ನಮ್ಮಲ್ಲಿಗೆ ಬರುವವರಿದ್ದಾರೆ. ಅವರ ಆತಿಥ್ಯಕ್ಕಾಗಿ ಹಣವು ಬೇಕಾಗಿದೆ."

"ನೀವು ಯಾರು?" ಎಂದು ಮಥುರಾದಾಸನು ಕುತೂಹಲಗೊಂಡು ಕೇಳಿದನು.

"ನಾನು ದೇವಗಾವಿಯ ಜಹಾಗೀರದಾರ ಗಂಭೀರರಾಯರ ಮಗನು. ನನ್ನನ್ನು ಹಂಬೀರರಾಯನೆಂದು ಕರೆಯುವರು."

"ಓಹೋ! ನೀವು ಗಂಭೀರರಾಯರ ಮಕ್ಕಳೇನು?'' ಎಂದು ವಿಸ್ಮಯಗೊಂಡು ಮಥುರಾದಾಸನು ನುಡಿದನು:—"ನಿಮ್ಮಲ್ಲಿಗೆ ಮಹಾರಾಜರು ಬರುವರೆ? ಎಂದು ಬರುವರು"

"ಅಹುದು; ಮೂರು-ನಾಲ್ಕು ದಿನಗಳಲ್ಲಿ ಬರುವವರಿದ್ದಾರೆ.''

"ನಾನೂ ಗಂಬಿರರಾಯರೂ ಪರಮಸ್ನೇಹಿತರು. ಪಾಪ-ಯುವನರು ಅನ್ಯಾಯವಾಗಿ ಅವರ ಜಹಾಗೀರಿಯನ್ನು ಸೆಳೆದುಕೊಂಡರು." ಎಂದು ಮಥುರಾದಾಸನು ನುಡಿದನು:"ಹಂಬೀರರಾಯರೇ, ಶಿವಪ್ರಭುಗಳ ಆತಿಥ್ಯಕ್ಕಾಗಿ ವಿನಿಯೋಗಿಸಲ್ಪಡುವ ಈ ಹಣಕ್ಕೆ ಬಡ್ಡಿಯನ್ನು ನಾನು ತೆಗೆದುಕೊಳ್ಳಲಾರೆನು. ನೀವು ಅನುಕೂಲವಾದಾಗ ಹಣ ತಂದು ಕೊಡಿರಿ. ನಾನು ಕೊಡುವ ಹಣಕ್ಕಾಗಿ ಕಠಾರಿಯನ್ನು ಅಡವು ಇಟ್ಟ ಬಗ್ಗೆ ಒಪ್ಪಿಗೆ ಬರೆದು ಕೊಡುವೆನು."

ಹಂಬೀರರಾಯನು ಸಾವುಕಾರನ ಮಾತುಗಳನ್ನು ಕೇಳಿ ಸಂತೋಷಬಟ್ಟನು. ಪಟ್ಟಣದಲ್ಲಿ ಮಥುರಾದಾಸನ ಸದ್ಗುಣಗಳ ಖ್ಯಾತಿಯಾದದ್ದು ಯಥಾರ್ಥವಿರುವದೆಂದು ಅವನು ಮನಗಂಡನು. ಸಾವುಕಾರನು ಒಳಗೆ ಹೋಗಿ ನೂರು ರೂಪಾಯಿ ತಂದುಕೊಟ್ಟು, ಕಠಾರಿಗೆ ಹಂಬೀರರಾಯನ ಹೆಸರಿನ ಚೀಟಿ ಕಟ್ಟಿ, ಅವನಿಗೆ ಒಂದು ಒಪ್ಪಿಗೆ ಪತ್ರ ಬರೆದು ಕೊಟ್ಟನು. ಅನಂತರ ಹಂಬೀರ

ರಾಯನು ಮಥುರಾದಾಸನಿಗೆ ನಮಸ್ಕರಿಸಿ ಅವನ ನಿರೋಪ ಹೊಂದಿ ತನ್ನ ವಸತಿಗೃಹಕ್ಕೆ ಬಂದನು.

ಹಂಬೀರರಾಯನು ಶಂಭುವಿನೊಡನೆ ದೇವಗಾವಿಗೆ ಬಂದನು. ಬರುವಾಗ ಅವನಿಗೆ ದಾರಿಯಲ್ಲಿ ಯಾವ ತೊಂದರೆಯೂ ಆಗಲಿಲ್ಲ. ಹೋಗುವಾಗ ನಡೆದ ಧುಂಡಜಿಯ ಹೆಂಡತಿಯು ಮಾಡಿದ ಕಾರಸ್ಥಾನವನ್ನೂ, ಶಂಭುವಿನ ಪರಾಕ್ರಮವನ್ನೂ ತಾಯಿಗೆ ತಿಳಿಸಿದನು. ಶಂಭುವಿನ ಪರಾಕ್ರಮದ ಕೃತ್ಯದಿಂದ ಜಯಾಬಾಯಿಯು ಸಂತೋಷಬಟ್ಟಳು. ಅವಳು ಪ್ರಭುವಿನ ಆತಿಥ್ಯಕ್ಕಾಗಿ ಬೇಕಾಗುವ ಸಾಮಗ್ರಿಗಳ ಸಿದ್ಧತೆಯಲ್ಲಿ ತೊಡಗಿದಳು. ಹಂಬೀರರಾಯನು ತನ್ನ ವಾಡಿಯನ್ನು ಅಂದಗೊಳಿಸುವದಕ್ಕಾಗಿ ಕೆಲಸಗಾರರನ್ನು ಹಚ್ಚಿದನು. ಶಿವಪ್ರಭುವಿನ ಆಗಮನದ ಸಿದ್ಧತೆಯೆಂದರೆ ಮನೆಯಲ್ಲಿ ವಿವಾಹದ ಸಿದ್ಧತೆ ನಡೆದಂತೆಯೇ ನಡೆಯಿತು. ಸ್ವರಾಜ್ಯದ ಪ್ರಭುವು-ಹಿಂದುಗಳ ಅನಭಿಷಿಕ್ತ ಸಮ್ರಾಟನು-ಮನೆಗೆ ಬರುವನೆಂದರೆ, ಅದೊಂದು ಮಹಾ ಪರ್ವಕಾಲವೆಂದೇ ಎಲ್ಲರ ಗೃಹಿಕೆಯಾಯಿತು.

ಮುಂದೆ ಎರಡು ದಿನಗಳ ಮೇಲೆ ಮಾನಾಜರಾಯನು ಹಂಬೀರರಾಯನ ಮನೆಗೆ ಬಂದನು. ಸಾಯಂಕಾಲಕ್ಕೆ ಪ್ರಭುಗಳ ಆಗಮನವಾಗುವದೆಂದು ಅವನು ಹಂಬೀರರಾಯ-ಜಯಾಬಾಯಿಗೆ ತಿಳಿಸಿದನು. ಹಂಬೀರರಾಯನು ಶಿವಾಜಿ ಮಹಾರಾಜರ ಸ್ವಾಗತದ ಸಿದ್ಧತೆಯಲ್ಲಿ ತೊಡಗಿದನು. ಆಗ ಮಾನಾಜಿರಾಯನು ಹಂಬೀರರಾಯನಿಗೆ ನಿಷ್ಕಾರಣವಾಗಿ ಹೆಚ್ಚಿನ ಆಡಂಬರಕ್ಕೆ ಹೋಗಕೂಡದೆಂದೂ, ಮಹಾರಾಜರು ಪ್ರೇಮಕ್ಕೆ ಬೆಲೆ ಕೊಡುವರಲ್ಲದೆ, ಬಾಹ್ಯಾಡಂಬರಕ್ಕೆ ಮೆಚ್ಚುವದಿಲ್ಲವೆಂದೂ ಹೇಳಿದನು. ಅಷ್ಟರಲ್ಲಿ ದೂತನು ಬಂದು, ಮಹಾರಾಜರು ಊರ ಸಮೀಪದಲ್ಲಿ ಬರುತ್ತಿರುವರೆಂದು ತಿಳಿಸಿದನು. ಕೂಡಲೆ ಹಂಬೀರರಾಯನೂ ಮಾನಾಜಿರಾಯನೂ ಮಹಾರಾಜರನ್ನು ಎದುರ್ಗೊಂಡು ಕರೆದುಕೊಂಡು ಬರುವದಕ್ಕಾಗಿ ಹೊರಟರು.

ಶಿವಪ್ರಭುವಿಗೆ ಅಟ್ಟಹಾಸದ ಎದುರ್ಗೊಳ್ಳುವ ಸಮಾರಂಭವು ಸೇರಲಿಲ್ಲ. ಆದರೂ ಜಯಾಬಾಯಿ-ಹಂಬೀರರಾಯರ ಇಚ್ಛೆಯಂತೆ ನಡೆಯುವದೇ ಅವಶ್ಯವೆನಿಸಿದ್ದರಿಂದ ಅವರು ಸುಮ್ಮನಿರಬೇಕಾಯಿತು. ಎಲ್ಲರೂ ಹಂಬೀರರಾಯನ ವಾಡೆಗೆ ಬಂದರು. ಉಪಾಹಾರದ ಕೆಲಸ ತೀರಿತು. ಅನಂತರದಲ್ಲಿ ಮಹಾರಾಜರು:—"ಮಾನಾಜಿರಾಯರೇ, ಹಂಬೀರರಾಯನು ನೀವು ಹೇಳಿ

ದಂತೆ ತೇಜಸ್ವಿಯಿರುವನು. ಇವನನ್ನು ನಮ್ಮ ಸ್ವರಾಜ್ಯಸೇವಾ ಪಥಕದಲ್ಲಿ ಸೇರಿಸಿಕೊಳ್ಳಲು ಏನೂ ಅಡ್ಡಿಯಿಲ್ಲ; ಆದರೆ ಒಮ್ಮೆ ಪರೀಕ್ಷೆಯಾದರೆ ಕೂಡಲೆ ಹೆಚ್ಚಿನ ಕರ್ತವ್ಯಭಾರದ ಕಾರ್ಯವನ್ನು ಒಪ್ಪಿಸಲಿಕ್ಕೆ ಅನುಕೂಲವಾಗುವದು."

"ಮಹಾರಾಜರೆ, ನಿಮ್ಮ ಇಚ್ಛೆಯಿದ್ದಂತೆ ಮಾಡಬೇಕು. ನಾನು ಹಂಬೀರರಾಯನಿಗೆ ಸೈನ್ಯದಲ್ಲಿ ಸೇರಬೇಕಾದರೆ ತಮ್ಮಿಂದ ಎಂಥ ಎಂಥ ಪರೀಕ್ಷೆ ತೆಗೆದುಕೊಳ್ಳಲ್ಪಡುವದೆಂಬದರ ಬಗ್ಗೆ ತಿಳಿಸಿರುವೆನು."

"ಹಂಬೀರರಾಯನು ಅಚ್ಚ ಮರಾಟನೂ ರಾಷ್ಟ್ರಭಕ್ತ ಗಂಭೀರರಾಯನ ಮಗನೂ ಇದ್ದುದರಿಂದ ಹೆಚ್ಚಿನ ಪರೀಕ್ಷೆ ತೆಗೆದುಕೊಳ್ಳುವ ಆವಶ್ಯಕತೆಯಿಲ್ಲ ವೆಂಬದು ನಿಜ; ಆದರೂ ಒಮ್ಮೆ ಯೋಗ್ಯತೆಯ ನಿರ್ಣಯ ಮಾಡಿಕೊಳ್ಳು ವದು ಉಚಿತವು. ಪ್ರತಿಯೊಬ್ಬ ಯೋಧನ ಪ್ರತಾಪದ ಅಳತೆಯನ್ನು ನಾನು ನೋಡಲೇ ಬೇಕು. ಸ್ವರಾಜ್ಯ ಸಂಸ್ಥಾಪನೆಯ ಕಾರ್ಯವೆಂದರೆ ಸಣ್ಣ ಪುಟ್ಟ ಕೆಲಸವಲ್ಲ. ಯೋಗ್ಯ ತಳಹದಿಯ ಮೇಲೆ ಕಟ್ಟಲ್ಪಟ್ಟ ಮಂದಿರವು ಹೆಚ್ಚು ಕಾಲ ಬಾಳುವದು." ಎಂದು ಮಹಾರಾಜರು ನುಡಿದು, ಹಂಬೀರ ರಾಯನನ್ನು ಕುರಿತು:—"ಹಂಬೀರರಾಯಾ, ನಮ್ಮಲ್ಲಿಯ ಯಾವನೊಬ್ಬ ಯೋಧನೊಡನೆ ಕೈಗೊಡಲಿಕ್ಕೆ ನಿನ್ನ ಇಚ್ಛೆಯಿರುವದೆ?"

"ಮಹಾರಾಜರೆ, ಹಂಬೀರರಾಯನು ಚಿಕ್ಕವನು. ಇನ್ನೂ ಕಾಳಗ ದಲ್ಲಿ ನುರಿತಿರುವದಿಲ್ಲ. ತಮ್ಮ ಯೋಧರೆಂದರೆ, ಅನೇಕ ಸಂಗ್ರಾಮಗಳಲ್ಲಿ ಚನ್ನಾಗಿ ನುರಿತ ರಣಪುಂಗವರು. ಇಂಥವರೊಡನೆ ಕೈಗೊಡಲು ಆಜ್ಞೆ ಯಾದರೆ ಹಂಬೀರರಾಯನು ವಿಜಯಿಯಾಗುವ ಆಶೆಯೆಲ್ಲಿ?" ಎಂದು ಮಾ-ನಾಜಿರಾಯನು ವಿನಯದಿಂದ ಪ್ರಶ್ನೆ ಮಾಡಿದನು.

"ಏನೂ ಅಡ್ಡಿಯಿಲ್ಲ" ಹಂಬೀರರಾಯನು ಆವೇಶದಿಂದ:—"ತಮ್ಮಲ್ಲಿ ಯ ಬೇಕಾದ ಯೋಧನನ್ನು ಆರಿಸಿ ಕಳುಹಿಸಿರಿ; ಅವನೊಡನೆ ಕಾದಲು ನಾನು ಸಿದ್ಧನಿರುವೆನು. ಮಹಾರಾಜರೆ, ಸಾಮರ್ಥ್ಯ ಸಂಪನ್ನತೆಯನ್ನು ತೋರಿಸದೆ ಸೈನ್ಯದಲ್ಲಿ ಪ್ರವೇಶವಿಲ್ಲ; ಸೈನ್ಯದಲ್ಲಿ ಪ್ರವೇಶಿಸಿದ ಹೊರತು ಸ್ವರಾಜ್ಯಸೇವೆ ಘಟಿಸುವಂತಿಲ್ಲ; ಸ್ವರಾಜ್ಯಸೇವೆ ಮಾಡದೆ ಹೋದರೆ ಯಶಸ್ಸು ದೊರೆಯುವಂತಿಲ್ಲ; ಅಭ್ಯುದಯವಾಗುವಂತಿಲ್ಲ. ಯಶೋಭ್ಯುದಯ ಹೊಂದದೆ ಬಾಳಿ ಪ್ರಯೋಜನವಿಲ್ಲ. ನಿಮ್ಮ ಸೈನ್ಯದೊಳಗಿನ ನಾಮಾಂಕಿತ ಕಲಿಯನ್ನೇ ಆರಿಸಿ ಸಂಗ್ರಾಮಕ್ಕೆ ಕಳುಹಿಸಿರಿ. ದ್ವಂದ್ವದಲ್ಲಿ ವಿಜಯ ದೊರೆತ

ಮೇಲೆಯೇ ಸ್ವರಾಜ್ಯಸೇವೆ ಮಾಡಲು ಅರ್ಹತೆಯು ಇರುವದೆಂಬ ನಂಬಿಗೆ ನನಗೂ ಆಗುವದು."

"ವೀರೋಚಿತ ಭಾಷಣವಿದು!" ಮಹಾರಾಜರು ಸಂತೋಷದಿಂದ ಉದ್ಗಾರ ತೆಗೆದು:—"ಹಂಬೀರರಾಯಾ, ನಿನ್ನ ಭಾಷಣದಿಂದಲೂ, ನಿನ್ನ ತೇಜಸ್ವಿತೆಯಿಂದಲೂ ನಿನ್ನಲ್ಲಿಯ ವಿಕ್ರಮತೆಯ ಆಳವನ್ನು ನಾನು ಅರಿತೆನು. ಆದರೂ ಕಲಿತನವನ್ನು ನೋಡಬೇಕೆಂಬ ಕುತೂಹಲದಿಂದ ನಿನ್ನ ಪರೀಕ್ಷೆಯನ್ನು ಇಟ್ಟಿದ್ದೇನೆ. ಮರಾಟಿಗರಲ್ಲಿ ಪ್ರತಾಪವು ಹೇಗೆ ಹುಟ್ಟುಗುಣವಾಗಿರುವದೆಂಬದರ ನಂಬಿಗೆಯು ಎಲ್ಲರಿಗೂ ಆಗಲಿ."

"ಮಹಾರಾಜರ ಅಭಿಪ್ರಾಯದಲ್ಲಿ ಸಂಪೂರ್ಣ ತಥ್ಯಾಂಶವುಂಟು." ಎಂದು ಮಾನಾಜಿರಾಯನು ನುಡಿದು:—"ದೇವೀನದಿಯ ತೀರದ ಬೈಲನ್ನು ಕ್ರೀಡಾಂಗಣವಾಗಿ ನಿಯಮಿಸೋಣ."

"ಕ್ರೀಡಾಂಗಣವೋ, ರಣಾಂಗಣವೋ?" ಎಂದು ಹಂಬೀರರಾಯನು ಪ್ರಶ್ನೆ ಮಾಡಿದನು.

"ರಣಾಂಗಣವಲ್ಲ; ಕ್ರೀಡಾಂಗಣವು. ದ್ವಂದ್ವದಲ್ಲಿ ಪರಸ್ಪರರು ಪರಸ್ಪರರ ಪ್ರಾಣಾಪಹರಣದ ಹಾಗು ಪ್ರಾಣಾಪಾಯವಾಗುವಂಥ ಕೃತ್ಯಗಳು ಘಟಿಸಬಾರದೆಂದು ನನ್ನ ಕಟ್ಟಳೆಯಿದೆ" ಎಂದು ಮಹಾರಾಜರು ಆಜ್ಞಾಪಿಸಿದರು.

ಅನಂತರದಲ್ಲಿ ಮಹಾರಾಜರ ಜನರೂ ಹಂಬೀರರಾಯನ ಜನರೂ ದೇವಗಾವಿಯ ಎಷ್ಟೋ ಉತ್ಸಾಹೀ ಪ್ರೇಕ್ಷಕರೂ ದೇವೀನದಿಯ ತೀರಕ್ಕೆ ಹೋದರು. ಎಲ್ಲರೂ ಉಚಿತ ಸ್ಥಾನಗಳಲ್ಲಿ ಕುಳಿತ ಬಳಿಕ ಮಹಾರಾಜರು ಮಾನಾಜಿರಾಯನನ್ನು ಕುರಿತು:—"ಹಂಬೀರರಾಯನು ಚಿಕ್ಕವನಿರುವನು. ನಮ್ಮ ಸರದಾರರೊಳಗಿನ ತೀರ ಕಡಿಮೆ ಯೋಗ್ಯತೆಯವನೊಡನೆ ಕಾದಲು ಸಹ ಇವನು ಅಯೋಗ್ಯನೆಂಬಂತೆ ತೋರುವದು. ಆದರೂ ಪರೀಕ್ಷೆಯ ಮಟ್ಟಿಗೆ ದ್ವಂದ್ವವನ್ನು ಮಾಡಿಸಬೇಕಾಗಿದೆ. ಯಾಕಂದರೆ, ಹಾಗೆ ಮಾಡದಿದ್ದರೆ ಯುದ್ಧಕೌಶಲ್ಯವೂ ಶಕ್ತಿ-ಸಾಮರ್ಥ್ಯಗಳೂ ತಿಳಿಯುವ ಸಂಭವವಿಲ್ಲ. ಇದ್ದವರಲ್ಲಿಯೇ ಹಂಬೀರರಾಯನೊಡನೆ ದ್ವಂದ್ವಮಾಡಲು ಯೋಗ್ಯಜನರಾರೆಂಬದನ್ನು ಆರಿಸಿರಿ."

"ಮಹಾರಾಜರೇ" ಮಾನಾಜಿರಾಯನು ವಿನಯದಿಂದ:—"ಸೈನ್ಯದೊಳ

ಗಿನ ಎಲ್ಲ ಸರದಾರರ ಶಕ್ತಿಪರೀಕ್ಷೆಯು ನನಗಿಂತ ತಮಗೇ ಚೆನ್ನಾಗಿ ಇರುವದು. ನೀವೇ ಎದುರಾಳಿಯನ್ನು ಯೋಜಿಸಿರಿ."

"ಹೀಗೆ ಮಾಡೋಣ." ಮಹಾರಾಜರು ಸ್ವಲ್ಪವೇಳೆ ವಿಚಾರಿಸಿ:-- "ಹಂಬೀರರಾಯನಿಗೇ ಈ ಕಾರ್ಯ ಮಾಡಲು ಹೇಳೋಣ."

"ಸರದಾರರೊಳಗಿನ ಪ್ರತಿಯೊಬ್ಬನು ಹಂಬೀರರಾಯನಿಗಿಂತ ನಾಲ್ಕು ಪಟ್ಟು ಹೆಚ್ಚಿನ ಸಾಮರ್ಥ್ಯವುಳ್ಳವರಿದ್ದಾರೆ" ಎಂದು ಕಿಸನರಾಯನೆಂಬ ಸರದಾರನು ಅಕ್ಷ್ಯತೆಯಿಂದ ಹೇಳಿದನು.

"ಹಂಬೀರರಾಯಾ, ನಿನಗೆ ಸರಿಯಾದವರನ್ನೇ ಹುಡುಕುವವದೆಂದರೆ ಸಾಧ್ಯವಿಲ್ಲ. ಆದರೂ ವಿಕ್ರಮುವನ್ನು ನೋಡುವ ಕುತೂಹಲವು ನನಗುಂಟಾಗಿರುವದರಿಂದ ದ್ವಂದ್ವ ಮಾಡಿಸುವದನ್ನು ಯೋಚಿಸಿರುವೆನು. ನೀನೇ ನಮ್ಮ ಸರದಾರರೊಳಗಿನ ಯಾವನೊಬ್ಬನನ್ನು ಆರಿಸು." ಮಹಾರಾಜರು ಹಂಬೀರರಾಯನಿಗೆ ಹೇಳಿದರು.

"ಮಹಾರಾಜರೆ, ಇಲ್ಲಿರುವ ನಿಮ್ಮ ಸರದಾರರಲ್ಲಿ ಹೆಚ್ಚಿನಯೋಗ್ಯತೆಯುವರೆಂದು ಯಾರು ನಿರ್ಣಯಿಸಲ್ಪಟ್ಟಿದ್ದಾರೆ?"

"ಯಾವನಾದರೂ ಹೆಚ್ಚು ಯೋಗ್ಯತಾಸಂಪನ್ನ ಯೋಧನ ಪರೀಕ್ಷೆ ಮಾಡುವ ಸಂದರ್ಭವೊದಗಿದಲ್ಲಿ ಈ ಕಿಸನರಾಯನನ್ನೇ ಯೋಜಿಸುತ್ತಿರುವೆನು."

"ಹಾಗಿದ್ದರೆ ನಾನು ಕಿಸನರಾಯನೊಡನೇ ದ್ವಂದ್ವವಾಡುವೆನು."

"ವ್ಯರ್ಥೋಕ್ತಿನ ಮಾತುಗಳು ನಿಷ್ಪ್ರಯೋಜಕವು. ನೆಲುವಿಗೆ ಹಾರದ ಬೆಕ್ಕು ಸ್ವರ್ಗಕ್ಕೆ ಹಾರಿತಂತೆ!" ಕಿಸನರಾಯನು ಹೀಗೆ ಗರ್ವೋದ್ಧತನದಿಂದ ಹೇಳಿದನು.

"ರಣಭೂಮಿಯೇ ಎಲ್ಲವನ್ನೂ ನಿರ್ಣಯಿಸುವದು." ಎಂದು ಹಂಬೀರರಾಯನು ವಿನಯದಿಂದಲೂ ಸಮಾಧಾನದಿಂದಲೂ ಉತ್ತರವಿತ್ತನು.

"ಹಂಬೀರರಾಯಾ, ನೀನಾಗಿ ಕಿಸನರಾಯನನ್ನು ಆರಿಸಿಕೊಂಡಿರುವೆ. ದ್ವಂದ್ವದಲ್ಲಿ ನೀನು ಜಯಶೀಲನಾದರೆ ಮಾತ್ರ ನಮ್ಮ ಸ್ವರಾಜ್ಯಸೇನಾಸಂಘದಲ್ಲಿ ಕಿಸನರಾಯನಷ್ಟೇ, ಕಿಂಬಹುನಾ ಅದಕ್ಕಿಂತ ಹೆಚ್ಚಿನ ಪದವಿಯನ್ನು ಹೊಂದುವೆ. ಒಂದುವೇಳೆ ಪರಾಭವಗೊಂಡರೆ ಮಾತ್ರ ಯೋಗ್ಯತೆಯುಂಟಾಗುವವರೆಗೂ ಸಾಧಾರಣ ಪ್ರತಿಯ ಸೈನಿಕನಾಗಿ ಉಳಿಯಬೇಕಾಗುವದು. ನೀನು

ನನ್ನ ಸ್ನೇಹಿತ ದೇಶಮುಖ ಗಂಭೀರರಾಯನ ಮಗನೆಂದೂ, ಜಹಾಗೀರದಾರ ವಂಶಸಂಭೂತನೆಂದೂ ದಾಕ್ಷಿಣ್ಯಕ್ಕೆ ಬಿದ್ದು ನಿನಗೆ ದೊಡ್ಡ ಯೋಗ್ಯತೆಯ ಸ್ಥಾನ ಕೊಡಲಾರೆನು." ಎಂದು ಶಿವಪ್ರಭುಗಳು ಹಂಬೀರರಾಯನಿಗೆ ಎಚ್ಚರಿಕೆ ಕೊಟ್ಟರು.

"ಮಹಾರಾಜರೆ!" ಹಂಬೀರರಾಯನು ಗಂಭೀರವಾಣಿಯಿಂದ-"ದ್ವಂದ್ವದಲ್ಲಿ ನಾನು ಪರಾಭೂತನಾದರೆ ಸ್ವರಾಜ್ಯ ಸೇವೆ ಮಾಡುವ ಪಾತ್ರತೆಯೇ ನನ್ನಲ್ಲಿಲ್ಲವೆಂದು ಬಗೆದು ಮನೆಗೆ ಹೋಗುವೆನು. ನಿಮ್ಮ ಈ ಕಿಸನರಾಯರಷ್ಟು ಯೋಗ್ಯತೆ ಗಳಿಸದೆ ಹೋದಲ್ಲಿ ಸ್ವರಾಜ್ಯಸೇವಾ ಪಥಕದಲ್ಲಿ ಸೈನಿಕನೆಂದು ಪ್ರವೇಶಿಸಲು ಸಹ ಪಾತ್ರತೆಯುಂಟಾಗದೆಂದು ನನ್ನ ಮತ. ಸ್ನೇಹಸಂಬಂಧ ಮೊದಲಾದ ದಾಕ್ಷಿಣ್ಯಕ್ಕೊಳಗಾಗಿ ಅಪಾತ್ರ ಜನರನ್ನು ಸ್ವರಾಜ್ಯ ಸೇವೆಯ ಕಾರ್ಯದಲ್ಲಿ ತೊಡಗಿಸುವದು ಘಾತುಕವೆಂಬ ತಮ್ಮ ಅಭಿಪ್ರಾಯಕ್ಕೆ ನನ್ನ ಪೂರ್ಣ ಬೆಂಬಲವಿದೆ."

"ಶಾಬಾಸ್ ವೀರಾ!" ಎಂದು ಮಹಾರಾಜರು ಉದ್ಗಾರ ತೆಗೆದರು.

ಅನಂತರದಲ್ಲಿ ಮಾನಾಜಿರಾಯನು ಹಂಬೀರರಾಯನನ್ನು ಕುರಿತು:— "ಹಂಬೀರರಾಯಾ, ನೀನು ನಿನಗಿಂತ ಎಷ್ಟೋ ಪಾಲು ಹೆಚ್ಚಿನ ಹುದ್ದರಿಯನ್ನು ಆರಿಸಿಕೊಂಡೆ. ಆದರೂ ನಿನಗೆ ಯಾವ ಯುದ್ಧಕಲೆಯಲ್ಲಿ ಪ್ರಾವೀಣ್ಯತೆಯುಂಟೋ ಅದೇ ಬಗೆಯ ಯುದ್ಧ ಮಾಡು."

"ಕಾಕಾಸಾಹೇಬರೆ, ಅದು ನನ್ನ ಕೆಲಸವಲ್ಲ; ಯೋಧರು ಪ್ರತಿಯೊಂದು ಯುದ್ಧಕಲೆಯಲ್ಲಿ ಪರಿಣತಿ ಹೊಂದಿದವರಿದ್ದರೆ ಅವರಲ್ಲಿ ಪಾತ್ರತೆಯುಂಟಾಗುವದು. ಖಡ್ಗ, ಬರ್ಚಿ, ದಾಂಡಪಟ್ಟಿ, ಬೋಥಾಟಿ, ಮಲ್ಲಯುದ್ಧ ಮೊದಲಾದ ಯಾವ ವಿಧದ ಕಲೆಗಳಲ್ಲಾದರೂ ಪರೀಕ್ಷೆಯಾಗಲಿ." ಎಂದು ಹಂಬೀರರಾಯನು ನುಡಿದನು.

"ಒಳ್ಳೇದು. ನಿನ್ನ ಇಚ್ಛೆಯಂತೆ ನಾನೇ ಯುದ್ಧಕಲೆಯ ತೀರ್ಮಾನವನ್ನು ಹೇಳುವೆನು. ಸಂಗ್ರಾಮದಲ್ಲಿ ಪರಸ್ಪರರ ಪ್ರಾಣಾಘಾತವಾಗಬಾರದೆಂಬ ಉದ್ದೇಶದಿಂದ ಬೋಥಾಟಿಯಿಂದಲೇ ದ್ವಂದ್ವವಾಗಬೇಕೆಂದು ನನ್ನ ತೀರ್ಪು ಇರುವದು." ಎಂದು ಮಹಾರಾಜರು ನಿರ್ಣಯ ಹೇಳಿದರು.

"ಪ್ರಭುಗಳ ಕೈ ಕೆಳಗಿನ ಸರದಾರರ ಕೈ ಗೊತ್ತಿಲ್ಲ ಈ ತರುಣನಿಗೆ. ಸ್ವರಾಜ್ಯಸಂಗ್ರಾಮದಲ್ಲಿ ನುರಿತ ಮಲ್ಲರೊಡನೆ ಕೈಗೆ ಕೈಕೊಡುವದನ್ನು ಹುಡು

ಗಾಟಿಗೆಯೆಂದು ತಿಳಿದಿರುವನು ಈ ತರುಣನು." ಎಂದು ಕಿಸನರಾಯನು ನುಡಿದು, ತನ್ನ ಬೋಥಾಟಿಯನ್ನೆತ್ತಿದನು.

"ಸ್ವರಾಜ್ಯಸಿಂಹಾಸನ ಸಂಸ್ಥಾಪನೆಯ ಕಾರ್ಯವು ಘನತರವಾದದ್ದು. ಸ್ವರಾಜ್ಯಸಂಗ್ರಾಮದಲ್ಲಿ ನುರಿತ ನಿಮ್ಮಂಥ ವೀರರನ್ನು ಮೀರುವ ತರುಣರು ಸ್ವರಾಜ್ಯಸೇವೆಗಾಗಿ ಧಾವಿಸುವದು ಭಾರತದ ಭಾಗ್ಯವೇ ಸರಿ!" ಎಂದು ಮಾಸಾಜಿರಾಯನು ನುಡಿದನು.

"ಇಂಥ ಕಿರುಕಳನು ವೀರರನ್ನು ಮೀರುವನೆ?" ಎಂದು ಕಿಸನರಾಯನು ಗರ್ಜಿಸಿದನು.

"ಪರಾಕ್ರಮವು ಕಿರಿಯತನ-ಹಿರಿಯತನದಲ್ಲಿಲ್ಲ. ಅಭಿಮನ್ಯುವು ಕಿರಿಯನಾದರೂ ದ್ರೋಣ-ಕರ್ಣಾದಿ ಹಿರಿಯರನ್ನು ಬೆರಗುಗೊಳಿಸಿದನು. ಇಂಥ ಕಿರಿಯರೂ ಹಿರಿಯರನ್ನು ಮೀರುವಂಥ ಹಿರಿಮೆಯನ್ನು ತೋರಿದರೆ, ಅದೊಂದು ಸ್ವರಾಜ್ಯ ಸೂರ್ಯೋದಯದ ಪೂರ್ವಲಕ್ಷಣವೆಂದು ಹೇಳಬೇಕಾಗುವದು." ಎಂದು ಮಹಾರಾಜರು ಕಿಸನರಾಯನಿಗೆ ಹೇಳಿದರು.

"ಅಭಿಮನ್ಯುವಿನಂಥ ಹಲಕೆಲವು ಬಾಲಕರು ಪ್ರತಾಪಪ್ರದರ್ಶನ ಮಾಡಿದ ಉದಾಹರಣೆಗಳನ್ನು ಎಲ್ಲ ತರುಣರ ವಿಷಯವಾಗಿ ಕೊಟ್ಟರೆ ಹೇಗೆ ಸರಿಯಾಗುವದು? ಎಲ್ಲ ತರುಣರೂ ಹಾಗಿದ್ದ [illegible] ಷವಾಗುತ್ತಿರಲಿಲ್ಲ. ಒಳ್ಳೇದು. ಪರಾಕ್ರಮವು ಈಗಲೇ ವ್ಯಕ್ತವಾಗುವದು. ಈ ಬಾಲಕನೊಡನೆ ಕಾದಿ ಜಯಿಸುವದು ನಿಜ. ಜಯವು ನನಗೆ ಕಟ್ಟಿಟ್ಟಂತೆಯೇ ಸರಿ. ಜಯವೆಂದರೆ ಅದು ನನ್ನ ಅಂಗೈಯಲ್ಲಿದೆ; ಆದರೆ ವಿಜಯ ದೊರೆತರೂ ನನ್ನ ಪಾಲಿಗೆ ಕೀರ್ತಿ ಬರುವದಿಲ್ಲ. ಸಣ್ಣಹುಡುಗನ ಕೂಡ ದ್ವಂದ್ವ ಮಾಡಿ ಜಯಸಂಪಾದನೆ ಮಾಡಿದ್ದೇನೂ ದೊಡ್ಡ ಮಾತಲ್ಲವೆಂದು ಎಲ್ಲರೂ ಅನ್ನುವರು. ಇವನೊಡನೆ ಕಾಳಗ ಮಾಡುವದರಿಂದ ನನಗೆ ಅಪಯಶ ಮಾತ್ರ ಬರುವದು. ಆದರೂ ಚಿಂತೆಯಿಲ್ಲ. ಮಹಾರಾಜರ ಇಚ್ಛೆಯಂತೆ ನಡೆಯುವದು ನನ್ನ ಧರ್ಮವಿರುವದರಿಂದ ಈ ಬಾಲಕನೊಡನೆ ಕೈಕೊಡಬೇಕಾಗಿದೆ." ಎಂದು ಕಿಸನರಾಯನು ಆಢ್ಯತೆಯಿಂದ ನುಡಿದನು.

"ಕಿಸನರಾಯಾ, ನೀನು ಪರಾಕ್ರಮಿ ನಿಜ. ಹಂಬೀರರಾಯನು ಚಿಕ್ಕವನಿದ್ದುದರಿಂದ ನಿನಗಿಂತ ಕಡಿಮೆ ಯೋಗ್ಯತೆಯವನೆಂದು ನಿರ್ಣಯಿಸಲು ನನಗೆ ಈಗ ಸಾಧ್ಯವಿಲ್ಲ." ಎಂದು ಶಿವಪ್ರಭುಗಳು ನುಡಿದು, ಹಂಬೀರರಾಯ

ನನ್ನು ಕುರಿತು:--"ಹಂಬೀರರಾಯಾ, ನೀನು ದ್ವಂದ್ವಕ್ಕೆ ಸಿದ್ಧನಾಗು."

ಹಂಬೀರರಾಯನು ದ್ವಂದ್ವಕ್ಕೆ ಸಿದ್ಧನಾದನು. ಅವನು ಮಹಾರಾಜರಿಗೂ ಮಾನಾಜಿರಾಯನಿಗೂ ನಮಸ್ಕಾರ ಮಾಡಿ, ತನ್ನ ಕೇಸರಿ ಕುದುರೆಯನ್ನೇರಿದನು. ಶಂಭು ಹಾಗು ಕಾಳು ಇವರು ಹಂಬೀರರಾಯನಿಗೆ ನಮಿಸಿ ಜಾಗ್ರತೆಯಿಂದ ಕಾದಲು ಹೇಳಿದರು. ಕಿಸನರಾಯನಾದರೂ ತನ್ನ ಕುದುರೆಯನ್ನೇರಿದನು. ಸಂಗ್ರಾಮವು ಪ್ರಾರಂಭವಾಯಿತು. ಇಬ್ಬರೂ ವೀರರು ಅಸಾಮಾನ್ಯಯೋಧರು. ಪರಸ್ಪರರು ಪರಸ್ಪರರನ್ನು ಜಯಿಸುವದಕ್ಕೆ ಮಿತಿಮೀರಿ ಯತ್ನಿಸುತ್ತಿದ್ದರು. ನೋಡುವವರಿಗೆ ಇಬ್ಬರೂ ವೀರರು ಸಮಾನ ಪರಾಕ್ರಮಿಗಳಾಗಿ ಕಾಣತೊಡಗಿದರು. ಹಂಬೀರರಾಯನು ಚಿಕ್ಕವನಾದರೂ ಕಿಸನರಾಯನನ್ನು ಸರಿಗಟ್ಟಿದ್ದರಿಂದ ಮಹಾರಾಜರು ವಿಸ್ಮಯಚಕಿತರಾದರು. ಅವರಿಗೆ ಸಂಭ್ರಮವೂ ಎನಿಸಿತು. ಇಬ್ಬರೂ ಸರಿಸಮಾನಸ್ಕಂಧರೆಂಬ ನಿರ್ಣಯ ಮಾಡಬೇಕೆಂದು ಅವರ ಮನಸ್ಸಿನಲ್ಲಿ ಯೋಚನೆ ಹುಟ್ಟಿತು. ಕಿಸನರಾಯನ ಕಡೆಯವರು ಕಿಸನನನ್ನೂ ಹಂಬೀರರಾಯನ ಕಡೆಯವರು ಹಂಬೀರರಾಯನನ್ನೂ ಹೊಗಳತೊಡಗಿದ್ದರು. ಮಾನಾಜಿಯ ಮುಖದಿಂದಲೂ, "ಶಾಬಾಸ! ಹಂಬೀರರಾಯಾ ಶಾಬಾಸ್" ಎಂಬ ಉದ್ಗಾರ ಹೊರಟಿತು. ಮಹಾರಾಜರು ಮಾತ್ರ ಸುಮ್ಮನೆ ನಿರೀಕ್ಷಿಸುತ್ತ ಕುಳಿತಿದ್ದರು. ಯುದ್ಧವನ್ನು ನಿಲ್ಲಿಸಬೇಕೆಂದು ಅವರು ಆಜ್ಞೆ ಮಾಡತಕ್ಕವರು; ಅಷ್ಟರಲ್ಲಿ ಹಂಬೀರರಾಯನ ಕುದುರೆಯು ಕಿಸನರಾಯನ ಕುದುರೆಯ ಮೇಲೆ ಜಿಗಿದು ಅದನ್ನು ನೆಲಕ್ಕೆ ಕೆಡಹಿತು. ಈ ಸಂಧಿಯನ್ನು ಸಾಧಿಸಿ ಹಂಬೀರರಾಯನು ತನ್ನ ಕೈಯಲ್ಲಿಯ ಬೋಥಾಟದಿಂದ ಕಿಸನರಾಯನನ್ನು ಹೊಡೆದನು. ಕೂಡಲೆ ಕುದುರೆ ಬಿದ್ದ ಪರಕ್ಷಣದಲ್ಲಿ ಅವನೂ ನೆಲಕ್ಕೆ ಬಿದ್ದನು. ಆ ಕೂಡಲೆ ಮಹಾರಾಜರ ಮುಖದಿಂದ: "ಶಾಬಾಸ್ ಬಾಲವೀರಾಗ್ರಣಿ!" ಎಂದು ಧನ್ಯೋದ್ಗಾರ ಹೊರಟಿತು.

ಹಂಬೀರರಾಯನು ಕುದುರೆಯಿಂದಿಳಿದು ಕಿಸನರಾಯನನ್ನು ಎಬ್ಬಿಸಿ ನಿಲ್ಲಿಸಿ, ಹುಡಿ ಮುಣುಗಿದ ಅವನ ಅರಿವೆಗಳನ್ನು ಜಾಡಿಸುತ್ತ:—ಮಿತ್ರರೆ, ಸಂಗ್ರಾಮದಲ್ಲಿ ಜಯಾಪಜಯಗಳು ದೈವಾಧೀನವಾದವುಗಳಿರುವದರಿಂದ, ನಾವು ಉಭಯತರೂ ಅವುಗಳಿಗಾಗಿ ಆನಂದ-ಕ್ಲೇಶಗೊಳ್ಳುವ ಕಾರಣವಿಲ್ಲ. ನಾವಿಬ್ಬರೂ ಒಂದೇ ವ್ಯವಸಾಯದವರು. ನಮ್ಮ ಗುರಿ ಒಂದೇ ಒಂದು. ದೈನ್ಯಾವಸ್ಥೆಗೀಡಾಗಿ ಅಧಃಪಾತಹೊಂದಿದ ಭಾರತವನ್ನು ಸ್ವರಾಜ್ಯಸೋಪಾನ

ಗಳಿಗೇರಿಸುವ ಪ್ರಭುಗಳ ಮಹಾಕಾರ್ಯದಲ್ಲಿ ಸೇವೆ ಮಾಡುವವರಾದ ನಾವು ಸ್ಪರ್ಧೆಗೆ ಸ್ಥಳಕೊಡಲೇಬೇಕು. ಮೇಲಾಟವು ಯಶಸ್ಸಾಧನೆ ಮಾಡುವಂಥದು. ಈ ಸಾಧನೆ ಮಾಡುತ್ತ ಹೋದರೆ ನಾವು ಎಂಥ ವೈರಿಗಳನ್ನಾದರೂ ಹಣಿಯು ವೆವು. ಸದ್ಯದ ಅಪಜಯದಿಂದ ನೀವು ವ್ಯಸನಗೊಂಡರೆ ನಿಮ್ಮ ಅಂತಃಕರಣವು ಕಲುಷಿತವಿರುವದೆಂದು ಮಹಾರಾಜರು ನಿರ್ಣಯಿಸಬಹುದು. ಭಾವೀ ತರುಣರ ಮುನ್ನಡೆಯನ್ನು ನೋಡಿ ನೀವು ಸಂಭ್ರಮಗೊಳ್ಳಲೇಬೇಕು. ನೀವು ಸ್ವಜನರು. ಸ್ವರಾಜ್ಯ ಸೇವೆಗಾಗಿ ನಾವೂ ನೀವೂ ಯತ್ನ ಮಾಡಬೇಕಾಗಿದೆ. ಆದ್ದರಿಂದ ಈರ್ಷೆ ದ್ವೇಷ ಮಾತ್ಸರ್ಯಾದಿಗಳನ್ನು ಬದಿಗಿರಿಸಿ, ಅಹಂಕಾರಕ್ಕೆ ಎಡೆಗೊಡದೆ, ಸಮಬುದ್ಧಿಯಿಂದಲೂ, ಐಕ್ಯದಿಂದಲೂ ನಾವು ಹೋರಾಡಲೇ ಬೇಕು."

ಹಂಬೀರರಾಯನ ಮನೋವೃತ್ತಿಯನ್ನು ನೋಡಿ ಶಿವಪ್ರಭುಗಳಿಗೆ ಪರಮಾನಂದವಾಯಿತು. ಅವರು ಅವನನ್ನು ಮನಸ್ವೀಯಾಗಿ ಹೊಗಳಿದರು. ಅನಂತರದಲ್ಲಿ ಅವರು ಮಾನಾಜಿರಾಯನನ್ನು ಕುರಿತು:-"ಮಾನಾಜಿರಾಯರೆ, ಹಂಬೀರರಾಯನು ಪ್ರತಾಪಸಿಧ್ಧಿಯಿರುವನು. ಅವನು ತನ್ನ ತಂದೆಯ ಕೀರ್ತಿಯನ್ನು ಕಾಯುವದರಲ್ಲಿ ಸಂಶಯವಿಲ್ಲ. ಇವನ ಯೋಗ್ಯತೆಯನ್ನು ನಾನು ಲಕ್ಷಿಸಿ ಇವನನ್ನು ನಿಮ್ಮ ಪಥಕದಲ್ಲಿ ಜಮಾದಾರನನ್ನಾಗಿ ನೇಮಿಸಿರುವೆನು. ಮುಂದೆ ಸರದಾರಿಕೆ ದೊರೆಯುವದು ಇವನ ಕರ್ತವ್ಯಪ್ರಭಾವವನ್ನು ಅವಲಂಬಿಸಿದೆ. ನಿಮ್ಮ-ಇವರ ಮನೆತನಗಳ ಪೂರ್ವ ಸಂಬಂಧವನ್ನು ಅನುಲಕ್ಷಿಸಿ ಇವನನ್ನು ನಿಮ್ಮ ಕೈಯಲ್ಲಿ ಕೊಟ್ಟಿರುವೆನು. ನೀವು ಇವನಿಗೆ ಪ್ರತ್ಯಕ್ಷ ಯುದ್ಧಾನುಭವ ಕೊಡಿರಿ. ಅನುಭವವಿಲ್ಲದೆ ಎಂಥ ವೀರರಿಂದಲಾದರೂ ಸಂಗ್ರಾಮದಲ್ಲಿ ಜಯ ದೊರೆಯದು. ನುರಿತವರಿಗೇ ಜಯ ದೊರೆಯುವ ಸಂಭವ ಹೆಚ್ಚು. ಇವನ ಯೋಗ್ಯತೆಯು ಸರದಾರಿಕೆಯದಿದ್ದರೂ ಕೇವಲ ಅನುಭವಹೊಂದುವ ದಕ್ಕಾಗಿ ಇವನಿಗೆ ಜಮಾದಾರ ಸ್ಥಳವನ್ನು ಕೊಟ್ಟಿದ್ದೇನೆ. ಇವನು ಬೇಗನೆ ಪ್ರಗತಿ ಪಥವನ್ನು ಹಿಡಿಯುವಂತೆ ಮಾಡುವದು ನಿಮ್ಮನ್ನೇ ಕೂಡಿದೆ."

"ಹಂಬೀರರಾಯನನ್ನು ಅವನ ಪೂರ್ವದ ವೈಭವಕ್ಕೇರಿಸಬೇಕೆಂದು ನನ್ನ ಇಚ್ಛೆಯಿದೆ. ಇವನು ಸರದಾರನಾಗಲು ಯೋಗ್ಯನೇ ಇದ್ದಾನೆ. ತಮ್ಮ ಅಪ್ಪಣೆಯ ಮೇರೆಗೆ ಇವನಿಗೆ ಪ್ರತ್ಯಕ್ಷ ಕೆಲಸ ಕೊಟ್ಟು ಬೇಗನೆ ನುರಿಯುವಂತೆ ಮಾಡುವೆನು." ಎಂದು ಮಾನಾಜಿರಾಯನು ಹೇಳಿದ ಮೇಲೆ ಮಹಾರಾಜರು

ತನ್ನ ಕುದುರೆಯನ್ನೇರಿದರು. ಇತರರು ಅವರ ಹಿಂದೆ ನಡೆದರು. ಎಲ್ಲ ಜನರೂ ಹಂಬೀರರಾಯನ ವಾಡಿಗೆ ಬಂದರು. ಸಂಧ್ಯಾಸಮಯವಾಯಿತು. ಮಹಾರಾಜರ ಆತಿಥ್ಯದ ಸಿದ್ಧತೆಯಾಗಿತ್ತು. ಊಟಕ್ಕೆ ಏಳುವದಕ್ಕಾಗಿ ಜಯಾಬಾಯಿಯು ಮಹಾರಾಜರಿಗೂ ಅವರ ಜನರಿಗೂ ತಿಳಿಸಿದಳು.

ಎಲ್ಲ ಜನರೂ ಆನಂದದಿಂದ ಹಂಬೀರರಾಯನ ಪ್ರತಾಪವನ್ನು ಹೊಗಳುತ್ತ ಊಟ ಮಾಡಿದರು. ಜಯಾಬಾಯಿಯು ಆನಂದ ಶರಧಿಯಲ್ಲಿ ಮುಳುಗಿದಳು.

---

## ೮ ಪಶ್ಚಾತ್ತಾಪ ಪುನೀತ.

ಊಟ-ಉಡಿಗೆಗಳಾದ ಮೇಲೆ ಶಿವಪ್ರಭುಗಳೂ ಮಾನಾಜಿರಾಯನೂ ಹಂಬೀರರಾಯನೂ ಕಿಸನರಾಯನೂ ಮಾತಾಡುತ್ತ ಕುಳಿತರು. ಜಯಾಬಾಯಿಯು ಎಂಥ ಪ್ರಸ್ಥಿತ್ಯವಸ್ಥೆಗೀಡಾದವಳಿದ್ದರೂ ದೊಡ್ಡ ಮನೆತನದವಳಾದುದರಿಂದ ಮಹಾರಾಜರ ಆತಿಥ್ಯದಲ್ಲಿ ಕೊರತೆಯಾಗಿರಲಿಲ್ಲ. ಅವಳ ವಿನಯ, ಆದರ-ಸತ್ಕಾರಗಳನ್ನು ನೋಡಿ ಮಹಾರಾಜರು ಸಂಪ್ರಸನ್ನಗೊಂಡಿದ್ದರು. ಮಾತಾಡುತ್ತ ಮಾತಾಡುತ್ತ ಅಂದಿನ ಹಂಬೀರರಾಯನ ವಿಜಯದ ಪ್ರಸ್ತಾಪ ಹೊರಟಿತು. ಆಗ ಅವರು ಕಿಸನರಾಯನನ್ನು ಕುರಿತು:—"ಕಿಸನರಾಯಾ, ನೀನು ದ್ವಂದ್ವದಲ್ಲಿ ಪರಾಭೂತನಾದುದರಿಂದ ನಿನ್ನ ಶಸ್ತ್ರಾಸ್ತ್ರಕವಚಗಳೆಲ್ಲವೂ ನಿಯಮದಂತೆ ಹಂಬೀರರಾಯನ ಸ್ವಾಧೀನವಾದವು. ನೀನು ಅವುಗಳನ್ನು ವಿಜಯಿ ವೀರನ ವಿಜಯದ ಸ್ಮೃತಿಚಿಹ್ನವೆಂದು ಅವನಿಗೆ ಒಪ್ಪಿಸಲೇಬೇಕು."

ಕಿಸನರಾಯನು ಮಹಾರಾಜರ ಮಾತಿಗೆ ಮರುಮಾತಾಡಲಿಲ್ಲ. ಅವನು ಎದ್ದು ಹೋಗಿ, ತನ್ನ ಕವಚ, ಶಸ್ತ್ರಾಸ್ತ್ರಗಳನ್ನೆಲ್ಲ ಮಹಾರಾಜರ ಮುಂದಿಟ್ಟು: "ಮಹಾರಾಜರೆ, ನಾನು ಇವುಗಳನ್ನು ನಾಳೆ ಹೊರಡುವಾಗ ಹಂಬೀರರಾಯನ ಸ್ವಾಧೀನಪಡಿಸುವದಕ್ಕಾಗಿ ಸಿದ್ಧಪಡಿಸಿಯೇ ಇರಿಸಿದ್ದೆನು; ಆದರೆ ಇಂದೇ ತಮ್ಮ ಆಜ್ಞೆಯಾದುದರಿಂದ ತಂದಿದ್ದೇನೆ. ಇವುಗಳನ್ನು ತಮ್ಮ ಹಸ್ತದಿಂದ ವಿಜಯಿ ವೀರನಿಗೆ ಪಾರಿತೋಷಕವಾಗಿ ಕೊಡಿರಿ"

ಮಹಾರಾಜರು ಆ ಒಡವೆಗಳನ್ನೆಲ್ಲ ಕೈಯಲ್ಲಿ ತೆಗೆದುಕೊಂಡು—"ಹಂಬೀರರಾಯಾ, ನೀನು ನಿನ್ನ ವಿಕ್ರಮಾರ್ಜಿತ ಸ್ವತ್ತನ್ನು ಸ್ವೀಕರಿಸು. ಇವುಗಳ ಮೇಲೆ ನಿನ್ನ ಸಂಪೂರ್ಣ ಬಾಧ್ಯತೆಯಿದೆ."

ಹಂಬೀರರಾಯನು ಎದ್ದು ನಿಂತು ಮಹಾರಾಜರಿಗೆ ನಮಸ್ಕರಿಸಿ:—"ಮಹಾರಾಜರೆ, ನಿಯಮದ ಮೇರೆಗೆ ನನಗೆ ಪಾರಿತೋಷಕವಾಗಿ ಇವುಗಳನ್ನು ಕೊಡಲು ತಮ್ಮ ಇಚ್ಛೆಯಿದ್ದರೂ, ಒಬ್ಬ ವೀರನ ಸ್ವತ್ತನ್ನು ಕಸಿದುಕೊಳ್ಳುವ ಸಾಹಸ ಮಾಡುವದು ನನ್ನಿಂದಾಗದು. ಇವುಗಳು ನನಗೆ ತಲುಪಿದವು. ನನ್ನ ಇಚ್ಛೆಯಂತೆ ತಾವು ಇವುಗಳನ್ನು ಕಿಸನರಾಯನಿಗೆ ಸಲ್ಲಿಸಬೇಕೆಂದು ವಿನಂತಿ ಮಾಡಿಕೊಳ್ಳುವೆನು. ಇಂದಿನ ಹೋರಾಟವು ಕೇವಲ ನನ್ನ ಪ್ರತಾಪ ಪರೀಕ್ಷೆಯಾಗಿದ್ದುದರಿಂದ ಒಬ್ಬ ವೀರನ ಅಪಮಾನಗೊಳಿಸುವ ಕಾರ್ಯ ನೆರವೇರಬಾರದೆಂದು ಬೇಡಿಕೊಳ್ಳುವೆನು." ಎಂದು ನುಡಿದು, ಶಸ್ತ್ರಾಸ್ತ್ರ-ಕವಚಗಳನ್ನು ತನ್ನ ಕೈಯಿಂದ ಮುಟ್ಟಿ:—'ಇವುಗಳು ನನಗೆ ತಲುಪಿದಂತಾದವು. ಇನ್ನು ಮರಳಿ ಕಿಸನರಾಯನ ಸ್ವಾಧೀನ ಮಾಡಬೇಕು."

ಹಂಬೀರರಾಯನ ದೊಡ್ಡಸ್ತಿಕೆಯನ್ನು ನೋಡಿ ಮಹಾರಾಜರಿಗೆ ಆನಂದವಾಯಿತು. ಆಗ ಅವರು ಮಾನಾಜಿರಾಯನನ್ನು ಕುರಿತು:—"ಮಾನಾಜಿರಾಯರೆ, ಹಂಬೀರರಾಯನು ನಿಜವಾಗಿಯೂ ಘನವಂತನಿರುವನು. ಇವನಿಗೆ ಸರಕಾರೀ ವೆಚ್ಚದಿಂದ ಸರಂಜಾಮಿನ ವ್ಯವಸ್ಥೆ ಮಾಡಿರಿ. ಉತ್ತಮಪ್ರತಿಯ ಒಡವೆಗಳನ್ನು ಸಿದ್ಧಪಡಿಸತಕ್ಕದ್ದು."

"ಮಹಾರಾಜರ ಆಜ್ಞೆಯಂತೆ ವ್ಯವಸ್ಥೆ ಮಾಡುವೆನು. ಹಂಬೀರರಾಯನ ಸರಂಜಾಮಿನ ವ್ಯವಸ್ಥೆಗಾಗಿ ಎಷ್ಟು ಹಣ ವೆಚ್ಚಮಾಡಲು ಆಜ್ಞೆಕೊಡುವಿರಿ?"

"ಐದು ನೂರು ರೂಪಾಯಿ ವೆಚ್ಚ ಮಾಡಬೇಕು."

ಮಹಾರಾಜರು ಹೀಗೆ ಹೇಳುವಷ್ಟರಲ್ಲಿ ಒಬ್ಬ ಮರಾಟಿಗನು ಅಲ್ಲಿಗೆ ಬಂದು ಮಹಾರಾಜರಿಗೂ ಮಾನಾಜಿರಾಯನಿಗೂ ಹಂಬೀರರಾಯನಿಗೂ ನಮಸ್ಕರಿಸಿ, ಅವರ ಎದುರಿನಲ್ಲಿ ಹಣದ ಚೀಲವನ್ನೂ ಮುತ್ತು-ರತ್ನ ಹಾಗು ಬಂಗಾರದ ಆಭರಣಗಳನ್ನೂ ಇರಿಸಿ, ಮಹಾರಾಜರನ್ನು ಕುರಿತು:—"ಮಹಾರಾಜರೆ, ಈ ಸಂಪತ್ತನ್ನು ಸ್ವರಾಜ್ಯಕಾರ್ಯಕ್ಕಾಗಿ ವಿನಿಯೋಗ ಮಾಡಬೇಕೆಂದು ನನ್ನ ಪ್ರಾರ್ಥನೆಯಿದೆ. ನಾನು ನನ್ನ ಶೇಷಾಯುಷ್ಯವನ್ನು ರಾಷ್ಟ್ರಸೇವೆಯಲ್ಲಿ ಕಳೆಯಬೇಕೆಂದು ಸತ್ಯಸಂಕಲ್ಪ ಮಾಡಿಕೊಂಡು ಬಂದಿದ್ದೇನೆ."

ಆ ಮನುಷ್ಯನ ಮಾತು ಕೇಳಿ ಎಲ್ಲರಿಗೂ ಆಶ್ಚರ್ಯವಾಯಿತು; ಸ್ವರಾಜ್ಯ ಸೇವೆಗಾಗಿ ಇಂಥ ಅಮೌಲ್ಯವಾದ ತ್ಯಾಗ ಮಾಡುವದನ್ನು ನೋಡಿ ಮಹಾರಾಜರನ್ನೊಡಗೊಂಡು ಎಲ್ಲರಿಗೂ ಆನಂದವಾಯಿತು. ಮಹಾರಾ

ಜರು ಅವನನ್ನು ದಿಟ್ಟಿಸಿ ನೋಡಿ:—"ನೀನು ಯಾರು? ಈ ಸಂಪತ್ತನ್ನು ರಾಷ್ಟ್ರಕಾರ್ಯಕ್ಕಾಗಿ ವೆಚ್ಚಮಾಡಲು ನೀನು ಸಿದ್ಧನಾದದ್ದು ಸ್ವಪ್ರೇರಣೆಯಿಂದಲೋ, ಪರೋಪದೇಶದಿಂದಲೋ?"

"ಪ್ರಭುಗಳೆ!" ಆ ಮನುಷ್ಯನು ಮಹಾರಾಜರನ್ನು ಕುರಿತು ವಿನಯದಿಂದ:—"ಈ ಹಣವನ್ನು ವೆಚ್ಚಮಾಡಲು ಪ್ರೇರಿಸಿದವರು ಯಾರೂ ಇಲ್ಲ; ಆದರೆ ದುರ್ಮಾರ್ಗಿಯಾದ ನನ್ನನ್ನು ರಾಷ್ಟ್ರಕಾರ್ಯಮಾಡಲು ಉಪದೇಶ ಮಾಡಿದ ಗುರುಗಳು ಮಾತ್ರ ಇರುವರು. ನನ್ನ ಹೆಸರನ್ನು ಮಾತ್ರ ಹೇಳಲು ಸದ್ಯಕ್ಕೆ ನನ್ನ ಇಚ್ಛೆಯಿಲ್ಲ; ಧೈರ್ಯವೂ ಇಲ್ಲ. ನನ್ನ ಹೆಸರು ಕೇಳಿದ ಮೇಲೆ ನನ್ನ ಸಲುವಾಗಿ ತಮ್ಮ ಬುದ್ಧಿಯು ವಿಪರೀತ ಪ್ರಕಾರ ಹೊಂದಬಹುದು. ನಾನು ಪಾಪಜೀವಿಯು. ಆದುದರಿಂದ ನನ್ನ ಹೆಸರು ಹೇಳಿದ ಮೇಲೆ ನನ್ನ ಮುಖಾವಲೋಕನವನ್ನು ಸಹ ಮಾಡಲಾರಿರಿ. ಮಹಾರಾಜರೆ, ನಾನು ಪಶ್ಚಾತ್ತಾಪ ಜೀವಿಯಾಗಿರುವದರಿಂದ ಸ್ವರಾಜ್ಯಸೇವೆ ಮಾಡಲು ಅರ್ಹತೆಯುಂಟಾಗಿರುವದೆಂಬ ಆತ್ಮವಿಶ್ವಾಸದಿಂದ ತಮ್ಮ ಬಳಿಗೆ ಬಂದಿರುವೆನು."

ಆ ಮನುಷ್ಯನ ಮಾತುಗಳನ್ನು ಕೇಳಿ ಮಹಾರಾಜರನ್ನು ಮೊದಲ್ಗೊಂಡು ಎಲ್ಲರೂ ವಿಸ್ಮಿತರಾದರು. ಅಗಣಿತವಾದ ಸಂಪತ್ತನ್ನು ಸ್ವರಾಜ್ಯಸೇವೆಗಾಗಿ ಸಲ್ಲಿಸಲು ಸಿದ್ಧನಾದವನು ನಿಜವಾಗಿಯೂ ಪಶ್ಚಾತ್ತಾಪ ಪ್ರೇರಿತನಿರುವನೆಂಬ ನಂಬಿಗೆಯು ಅವರಿಗಾಯಿತು. ಕೆಲ ಹೊತ್ತು ಎಲ್ಲರೂ ಸ್ತಬ್ಧರಾಗಿದ್ದರು. ಅನಂತರದಲ್ಲಿ ಮಹಾರಾಜರು ಆ ಮನುಷ್ಯನಿಗೆ:—"ನೀನು ನಿನ್ನ ಪರಿಚಯು ತಿಳಿಸಲು ಏನೂ ಭಯಪಡುವ ಕಾರಣವಿಲ್ಲ; ಯಾಕಂದರೆ ಈಗ ನೀನು ಪಶ್ಚಾತ್ತಾಪಪರಿಶುದ್ಧನಾಗಿರುವೆಯೆಂಬ ಲಕ್ಷಣವು ನನಗೂ ತೋರುವದು. ನಿನ್ನ ಮಾತುಗಳು ನಿನ್ನ ಅಂತರಾತ್ಮನ ಸಾಕ್ಷಿಯಾಗಿ ದಿಟವಿದ್ದರೆ ನೀನು ನಿನ್ನ ಪರಿಚಯು ಮಾಡಿಕೊಡಲು ಏನೂ ಅಡ್ಡಿಯಿಲ್ಲ. ನಿನ್ನ ಇಚ್ಛೆಯು ಹಾಗಿರದಿದ್ದರೆ ಮಾತ್ರ ನನ್ನ ಆಗ್ರಹವಿಲ್ಲ. ಪಶ್ಚಾತ್ತಾಪಶುದ್ಧನಾದವನು ಅಜ್ಞಾನದಿಂದ ಆದ ಅಪರಾಧಗಳ ಮೇಲೆ ಎಂದೂ ಹೊದಿಕೆ ಹಾಕುವ ಕಾರಣವಿಲ್ಲ. ನಿನ್ನ ನಿಜವಾದ ಇತಿಹಾಸವು ಸರ್ವಶ್ರುತವಾದರೆ, ನೀನೊಬ್ಬ ಆದರ್ಶ ವ್ಯಕ್ತಿಯೂ ಒಂದು ದೃಷ್ಟಾಂತವೂ ಆಗಬಹುದು."

"ಮಹಾರಾಜರೆ, ನನ್ನ ಹೆಸರು ಕೇಳಿದ ಮೇಲೆ ನೀವು ನನ್ನ ವಿಷಯುವಾಗಿ ತಿರಸ್ಕಾರ ಬುದ್ಧಿಯುಳ್ಳವರಾಗಲಿಕ್ಕಿಲ್ಲವೆಂಬ ಭರವಸೆ ಕೊಡಿರಿ."

"ಅವಶ್ಯ, ಅವಶ್ಯ. ನಾನು ನಿನ್ನನ್ನು ಎಂದೂ ತಿರಸ್ಕರಿಸಲಾರೆನು; ಆದರೆ ನೀನು ಕಾಯಾವಾಚಾಮನಸಾ ಸ್ವರಾಜ್ಯಸೇವೆ ಮಾಡಲು ಬದ್ಧನಾಗುವ ಬಗ್ಗೆ ಪ್ರತಿಜ್ಞೆ ಮಾಡಿದರೆ, ನಿನ್ನ ಹಿಂದಿನ ಅಪರಾಧಗಳೆಲ್ಲವೂ ಕ್ಷಮಿಸಲ್ಪಡುವವು."

ಮಹಾರಾಜರ ಮಾತುಗಳನ್ನು ಕೇಳಿ ಆ ಮನುಷ್ಯನಿಗೆ ಆನಂದವಾಯಿತು. ಆಗ ಅವನು:—"ಪ್ರಭುಗಳೆ, ನೀವು ನನ್ನ ಹೆಸರನ್ನು ಕೇಳಿದರೆ ಸಾಕು, ನನ್ನ ಇತಿಹಾಸವೇ ತಮ್ಮ ಕಣ್ಣಮುಂದೆ ಕಟ್ಟುವದು."

ಆ ಮನುಷ್ಯನು ಹೀಗೆ ನುಡಿದ ಕೂಡಲೆ ಹಂಬೀರರಾಯನೂ ಶಂಭುವೂ ಅವನ ಕಡೆಗೆ ದಿಟ್ಟಿಸಿ ನೋಡತೊಡಗಿದರು. ಆಗ ಶಂಭುವು:—"ನನಗೆ ಈ ಮನುಷ್ಯನ ಧ್ವನಿಯು ಗುರುತು ಹತ್ತುವದು. ನಾನು ಇವನನ್ನು ಎಲ್ಲಿಯೋ ನೋಡಿದಂತಾಗಿದೆ."

"ನನಗೂ ಹಾಗೆಯೆ ತೋರುವದು." ಎಂದು ಹಂಬೀರರಾಯನು ನುಡಿದು, ಆಶ್ಚರ್ಯದಿಂದ:—"ಇವನೇ ಆ ಸುಲಿಗೆಗಾರ ಧುಂಡಜಿಯು!" ಎಂದು ಉದ್ಗಾರ ತೆಗೆದನು.

"ತಪ್ಪು ಹೇಳುವಿರಿ, ಗುರುಮಹಾರಾಜ! ನೀವು ತಪ್ಪು ಹೇಳುವಿರಿ. ಸುಲಿಗೆಗಾರ ಧುಂಡಜಿಯು ಈಗ ನಿಮಗೆ ಎಲ್ಲಿಯೂ ದೊರೆಯುವದಿಲ್ಲ. ನಿಮ್ಮ ಮುಂದೆ ನಿಂತವನು ಸುಲಿಗೆಗಾರ ಧುಂಡಜಿಯಲ್ಲ, ಸ್ವರಾಜ್ಯಸೇವಕ ಧುಂಡಜಿಯು!"

"ಶಾಬಾಸ್! ಧುಂಡಜಿ, ನಿನ್ನ ಗಡ್ಡಗಳೆಲ್ಲ ಮಾಯವಾದುದರಿಂದ ನನಗೆ ನಿನ್ನ ಪರಿಚಯವು ಬೇಗನೆ ಆಗಲಿಲ್ಲ." ಎಂದು ಹಂಬೀರರಾಯನು ನಗುತ್ತ ನುಡಿದನು.

"ಪೂರ್ವಾಶ್ರಮದ ಆ ಗಡ್ಡಗಳೂ, ಆ ವೇಷವೂ, ಆ ವೃತ್ತಿಯೂ ಈಗ ಹೇಗೆ ಉಳಿಯುವವು? ಗುರುಮಹಾರಾಜರೆ, ನಿಮ್ಮ ಅಂದಿನ ಉಪದೇಶದಿಂದ ನಾನು ಹೊಸ ಜನ್ಮವನ್ನು ತಾಳಿರುವೆನು. ನಿಮ್ಮ ಉಪದೇಶಾಮೃತವು ನನ್ನನ್ನು ಈ ಮಾರ್ಗಕ್ಕೆ ಹಚ್ಚಿತು. ಆದ್ದರಿಂದ ನಿಮ್ಮನ್ನು ನಾನು ಗುರುಗಳ ಸ್ಥಾನದಲ್ಲಿ ಗಣಿಸಿರುವೆನು." ಎಂದು ಧುಂಡಜಿಯು ವಿಶ್ವಾಸಪೂರ್ವಕವಾಗಿ ಹೇಳಿದನು.

"ಧುಂಡಜಿ, ಸುಲಿಗೆಗಾರನಾದ ನೀನು ಇಂಥ ಸನ್ಮಾರ್ಗವನ್ನು ಹಿಡಿಯುವಿ

ವೆಂದು ಆಗ ನಾನು ಭಾವಿಸಿರಲಿಲ್ಲ. ನಿನ್ನಂಥ ಪ್ರತಾಪಶಾಲಿಗಳು ಸುಲಿಗೆಯಂಥ ಹೀನ ಕರ್ಮವನ್ನು ತ್ಯಜಿಸಿ ಸನ್ಮಾರ್ಗಪ್ರವೃತ್ತರಾದರೆ, ಸ್ವರಾಜ್ಯಕಾರ್ಯಕ್ಕೆ ಬಹಳೇ ಅನುಕೂಲವಾಗಬಹುದೆಂದು ತೋರಿದ್ದರಿಂದ ನಾನು ಎರಡು ಮಾತು ಹೇಳಿದ್ದೆನು."

ಹಂಬೀರರಾಯನು ಹೀಗೆ ನುಡಿದ ಕೂಡಲೆ ಮಾನಾಜಿರಾಯನು ನಗುತ್ತ:—"ಗುರುವಿನ ಉಪದೇಶಾಮೃತದ ಪ್ರಭಾವವು ಇವನನ್ನು ಈ ತೆರನಾಗಿ ಮಾರ್ಪಡಿಸಿತು."

"ಕಾಕಾಸಾಹೇಬರೆ!" ಹಂಬೀರರಾಯನು ವಿನಯದಿಂದ:-"ನನ್ನ ಉಪದೇಶಾಮೃತದ ಫಲವೆಂದು ನನಗೆ ದೊಡ್ಡಸ್ತಿಕೆ ಕೊಟ್ಟು ನಾಚಿಸಬೇಡಿರಿ. ಪ್ರತಿಯೊಂದು ವ್ಯಕ್ತಿಯಲ್ಲಿ ಸ್ವರಾಜ್ಯಪ್ರೇಮವು ಉದಯವಾಗಿ ಸಂವರ್ಧನೆ ಹೊಂದುವಂತೆ ಉಪದೇಶಿಸುವ ಜಗದ್ಗುರುಗಳಾದ ಈ ಶಿವಪ್ರಭುಗಳ ಪ್ರತಾಪವೇ ಅಂಥಹದು. ಶಕಪುರುಷರಾದ ಮಹಾರಾಜರು ಎಂದು ಕ್ರಾಂತಿಖಡ್ಗವನ್ನು ಹಿರಿದರೋ, ಅಂದಿನಿಂದಲೇ ಜನತೆಯು ಸ್ವರಾಜ್ಯಸೋಪಾನವನ್ನೇರತೊಡಗಿದೆ. ನಿಮಿತ್ತಮಾತ್ರನಾದ ನನ್ನಂಥವನು ಇಲ್ಲದ ಶ್ರೇಯಸ್ಸಿಗೆ ಭಾಗಿಯಾಗ ಹೋದರೆ ಅದು ಎಂದೂ ಸಮಂಜಸವಾಗಲಾರದು."

"ಹಂಬೀರರಾಯನೇ!" ಮಹಾರಾಜರು ಹಾಸ್ಯದಿಂದ:—"ನಿಮ್ಮಂಥ ಕರ್ತೃತ್ವಶಾಲಿಗಳಿಲ್ಲದೆ ಹೋದರೆ ನನ್ನೊಬ್ಬನಿಂದ ಏನಾಗಬೇಕಾಗಿದೆ? ನಾನು ನಿಮಿತ್ತ ಮಾತ್ರನು. ಜನಾಂಗದ ಮನೋಭೂಮಿಕೆಯು ಹೇಗಿರುವದೆಂಬದನ್ನು ಪರಿಶೀಲಿಸಿ, ಅದರಿಂದ ಕಾರ್ಯವಾಗುವ ಚಿಹ್ನವು ತೋರಿದ್ದರಿಂದ ನಾನು ಈ ಮಹಾಕಾರ್ಯವನ್ನು ಹಮ್ಮಿಕೊಂಡೆನು. ಅದು ಯವನರ ಪಾಶವೀ ಆಡಳಿತೆಗೂ ರಾಕ್ಷಸೀ ಅತ್ಯಾಚಾರಕ್ಕೂ ತ್ರಸ್ತನಾಗಿತ್ತು. ಅದರಲ್ಲಿ ಸ್ವರಾಜ್ಯ ಸಂಸ್ಥಾಪನೆಮಾಡುವ ಯೋಗ್ಯತೆ ಇರುವದೆಂಬದರ ಅಳತೆ ಗೊತ್ತಾದ ಕೂಡಲೆ, ನಾನು ಕ್ರಾಂತಿಖಡ್ಗವನ್ನು ಒರೆಯಿಂದ ಹಿರಿದೆನು. ಹಾಗಿಲ್ಲದಿದ್ದರೆ ಎಂಥ ಪ್ರಭಾವಶಾಲಿಯಾಗಿದ್ದರೂ ಒಬ್ಬನ ಖಡ್ಗದಿಂದ ಏನಾಗಬೇಕಾಗಿದೆ? ಜಗದಂಬೆಯ ಅನುಗ್ರಹ, ಸಮರ್ಥರ ಆಶೀರ್ವಾದ, ಜನತೆಯ ಬೆಂಬಲ ಮೊದಲಾದ ಅನುಕೂಲ ಪರಿಸ್ಥಿತಿಯು ಪ್ರಾಪ್ತವಾದುದರಿಂದ, ಒಂದೇ ಒಂದು ಖಡ್ಗವು ಸಹಸ್ರಖಡ್ಗಗಳ ಬಲವನ್ನು ಹೊಂದಿತು. ಏನೇ ಆಗಲಿ, ಸುಲಿಗೆಗಾರನು ಸ್ವರಾಜ್ಯಸೇವಾಸಕ್ತನಾದದ್ದನ್ನು ನೋಡಿದರೆ ಮನಸ್ಸು ಕೌತುಕಗೊಳ್ಳುವದು."

ಎಂದು ಮಹಾರಾಜರು ಆನಂದಪುಳಕಿತರಾಗಿ ನುಡಿದು ಧುಂಡಜಿಯನ್ನು ಕುರಿತು:—"ನೀನು ಪಶ್ಚಾತ್ತಾಪ ಪ್ರಸೀತನಿರುವದರಿಂದ ನಿನ್ನನ್ನು ಸ್ವರಾಜ್ಯ ಸೇವೆಯಲ್ಲಿ ತೊಡಗಿಸಲು ನನಗೆ ಏನೂ ಆತಂಕ ತೋರುವದಿಲ್ಲ. ಆದರೆ ನಿನ್ನ ಶೌರ್ಯ ಧೈರ್ಯ ಸಾಹಸಗಳ ಪರೀಕ್ಷೆಯು ಅತ್ಯವಶ್ಯವಿದೆ. ನೀನು ಈ ಹಂಬೀರರಾಯನನ್ನು ಗುರುವೆಂದು ಭಾವಿಸಿರುವ ಮೂಲಕ ಶಿಷ್ಯಪರೀಕ್ಷೆಯ ಭಾರವನ್ನು ನಾನು ಇವನ ಮೇಲೆಯೇ ಹೊರಿಸಿರುವೆನು. ನೀನು ಶೂರನೆಂಬ ವಿಷಯದಲ್ಲಿ ನನಗೆ ಸಂದೇಹವಿಲ್ಲ. ನೀನು ಕಾಯಾ ವಾಚಾ ಮನಸ್ಸಿನಿಂದ ಸ್ವರಾಜ್ಯಸೇವೆ ಮಾಡುವೆಯೆಂಬ ನಂಬಿಗೆಯಾಗಲಿಕ್ಕೆಬೇಕು; ಹಾಗು ನಿನ್ನ ಸದ್ಯದ ಭಾವನೆಗಳು ಚಿರಸ್ಥಾಯಿಯಾಗಿ ಉಳಿಯುವವೆಂಬದರ ಬಗ್ಗೆ ವಿಶ್ವಾಸವೂ ಹುಟ್ಟಬೇಕು. ನೀನು ನಂಬಿಗೆಗೆ ಪಾತ್ರನಾದ ಮೇಲೆ ನಿನ್ನ ಯೋಗ್ಯತೆಗನುಗುಣವಾಗಿ ಪ್ರಗತಿಯನ್ನು ಹೊಂದಿಯೇ ಹೊಂದುವೆ. ಇಂದಿನಿಂದ ನೀನು ಹಂಬೀರರಾಯನ ಕೈಯಲ್ಲಿ ಸೈನಿಕನಾಗಿ ಕೆಲಸ ಮಾಡುತ್ತ ಹೋಗತಕ್ಕದ್ದು."

ಮಹಾರಾಜರ ಮಾತುಗಳಿಂದ ಧುಂಡಜಿಯು ಸಂಭ್ರಮಗೊಂಡನು. ಸ್ವರಾಜ್ಯ ಸೇವೆ ಮಾಡಲು ಅಪಾತ್ರನೆಂದು ಅವರು ಎಲ್ಲಿ ನಿಶ್ಚಯಿಸುವರೋ ಎಂದು ಧುಂಡಜಿಯು ಗಾಬರಿಗೊಂಡಿದ್ದನು. ಸೈನಿಕನ ಸ್ಥಳದಲ್ಲಿಯೇ ಆಗಲೊಲ್ಲದೇಕೆ, ಸ್ವರಾಜ್ಯಸೇವೆ ಮಾಡಲು ಸಂಧಿ ದೊರೆತುದರಿಂದ ಅವನಿಗೆ ಸಂಭ್ರಮವಾಯಿತು. ಅವನು ಶಿವಪ್ರಭುಗಳಿಗೆ ನಮಸ್ಕಾರ ಮಾಡಿ:—"ಮಹಾತ್ಮರೆ! ಯುವನರ ಪ್ರಚಂಡತಮವಾದ ಶಕ್ತಿಯನ್ನು ತೃಣಪ್ರಾಯವಾಗಿ ಬಗೆದು ಸ್ವರಾಜ್ಯಸೇವೆಗಾಗಿ ಆತ್ಮಬಲಿದಾನ ಮಾಡಲು ಜನತೆಯು ಮುಂದೆ ಬೀಳಬೇಕಾದರೆ ನಿಮ್ಮಂತಹ ಮುಂದಾಳುವಿನ ಯೋಗ್ಯತೆ ವರ್ಚಸ್ಸು ಮೊದಲಾದವುಗಳೇ ಕಾರಣವಾಗಿರುವವೆಂದು ಇಂದು ನಾನು ಮನಗಂಡೆನು. ಇಷ್ಟುದಿನ ನನ್ನ ಕಣ್ಣುಗಳು ಯವನ ಸೇವೆಯಲ್ಲಿ ತೊಡಗಿ ಅಂಧವಾಗಿದ್ದವು. ಯವನ ದಾಸ್ಯವೇ ಇತಿಕರ್ತವ್ಯವೆಂದು ನನ್ನ ಭಾವನೆಯಾಗಿತ್ತು. ನಾನು ಯಾರು, ನನ್ನ ಕರ್ತವ್ಯವೇನು, ಮಾತೃಭೂಮಿಯ ಉದ್ಧಾರಕ್ಕೆ ನಾನು ಮಾಡಬೇಕಾಗಿದ್ದ ತ್ಯಾಗವಾವುದು, ನಮಗೆ ಈಗ ಯಾವ ವಿಧದ ಹಸಿವೆಯಾಗಿದೆ, ಪರಧರ್ಮೀಯರ ಉದ್ದೇಶವೇನಿದೆ, ಅವರ ಕುಟಿಲ ಕಾರಸ್ಥಾನಗಳಾವವು, ಅವರು ಯಾವ ಬಲದಿಂದ ಇಷ್ಟು ವಿಖ್ಯಾತರಾದರು, ಅವರ ಬಲವೂ ಆಳಿಕೆಯೂ ಇಷ್ಟು ದೀರ್ಘಕಾಲ ಬಾಳಲು ಕಾರಣವೇನು, ನಮ್ಮಲ್ಲಿ ಒಡಕು ಹುಟ್ಟಿಸಿ,

ನಮ್ಮಲ್ಲಿಯ ಅಜ್ಞಾನತೆಯ ಲಾಭ ಹೊಂದಿ ಪರಕೀಯರು ತಮ್ಮ ರಾಜ್ಯಾಧಿಕಾರವನ್ನು ಹೇಗೆ ಸ್ಥಿರಪಡಿಸುತ್ತಿರುವರು, ತಮ್ಮ ಧರ್ಮದ ಅಭ್ಯುದಯಕ್ಕಾಗಿ ಅವರು ವಿಧರ್ಮಿಯರ ಧರ್ಮಕ್ಕೆ ಹೇಗೆ ಕುಠಾರ ಪ್ರಾಯರಾಗಿರುವರು ಮೊದಲಾದ ಆಲೋಚನೆಗಳನ್ನು ಮಾಡದಲೆ ನಾನು ಮಾತೃಮೂರ್ತಿಗೆ ಎಷ್ಟುವಿಧವಾಗಿ ದ್ರೋಹಬಗೆದೆನಲ್ಲ! ಎಂದು ಮನಸ್ಸು ಉದ್ವಿಗ್ನತೆ ಹೊಂದತೊಡಗಿದೆ. ಮಹಾರಾಜರೆ, ಮನುಷ್ಯನು ಪ್ರತಿಷ್ಠೆಯ ಬೆನ್ನು ಹತ್ತಿದರೆ, ಹಾಗು ಸ್ವಾರ್ಥಕ್ಕೆ ಕಟ್ಟು ಬಿದ್ದರೆ ಅವನಿಂದ ಎಂಥ ದುಷ್ಕೃತ್ಯಗಳಾದಗುವವೆಂಬದನ್ನು ಹೇಳಲಿಕ್ಕೆ ಬರುವದಿಲ್ಲ. ದೇವಗಾವಿ ಮಠದ ಮಹಂತರೂ ಅವರ ದಿವಾಣ ಧುಂಡಿರಾಜರೂ ಸ್ವಾರ್ಥಲಾಲನೆಗೋಸುಗ ಮಾಡುತ್ತಿರುವ ದುಷ್ಕೃತ್ಯಗಳೇ ಈ ಮಾತಿಗೆ ಸಾಕ್ಷಿ. ಅವರ ಹಾಗು ವಿಜಾಪುರದ ಸುಭೇದಾರರ ಪ್ರೋತ್ಸಾಹನೆಯಿಂದಲೆ ನನ್ನಂಥ ಸುಲಿಗೆಗಾರರ ಹಾವಳಿ ಹೆಚ್ಚಾಗಿದೆ. ಜನತೆಯು ಇಂಥ ಜನರ ಅತ್ಯಾಚಾರಗಳಿಗಾಗಿ ಬೆಂದು ಬಸವಳಿಯುತೊಡಗಿದೆ. ಜನಾಂಗದ ಬಿಸಿಯುಸಿರಿನ ಬಿಸಿಯು ಮಹಂತ ಧುಂಡಿರಾಜರಂಥವರಿಗೂ ಸುಭೇದಾರರಂಥ ಆಳರಸರಿಗೂ ಹತ್ತುವ ಸಂಭವವಿಲ್ಲ. ನಿಮ್ಮ ಜಾಗ್ರತಿಯಿಂದ ದಕ್ಷಿಣ ದೇಶವು ಎಚ್ಚತ್ತಿದೆ. ನಿಮ್ಮ ಕ್ರಾಂತಿಯ ಕೂಗಿನಿಂದ ಜನಾಂಗವು ಬಡಿದೆಬ್ಬಿಸಿದಂತಾಗಿದೆ. ಪಾರತಂತ್ರ್ಯದಿಂದ ಅಧೋಗತಿಗಿಳಿದ ತಮ್ಮನ್ನು ಸ್ವರಾಜ್ಯಸೋಪಾನವೇರಿಸುವ ಮಹಾತ್ಮನು ಯಾರೆಂಬದರ ಅರಿವು ಅವರಿಗುಂಟಾಗಿದೆ. ವನವಾಸಿಯಾದ ನನ್ನಂಥ ಸುಲಿಗೆಗಾರರಿಗೆ ಕೂಡ ಕ್ರಾಂತಿಯ ಕೂಗು ಕೇಳತೊಡಗಿದೆ; ಆತ್ಮೋನ್ನತಿಯ ಗುಟ್ಟು ಗೊತ್ತಾಗತೊಡಗಿದೆ; ಮಾತೃಭೂಮಿಯ ಮೇಲಿನ ಭಕ್ತಿ ಭಾವನೆಗಳು ಹೊರಸೂಸತೊಡಗಿವೆ! ಮಹಾತ್ಮಾ! ಕ್ರಾಂತಿಯ ಖಡ್ಗಗಳ ಝಣಝಣಾಟವು ವೈರಿಗಳ ಹೃದಯವನ್ನು ನಡುಗಿಸಹತ್ತಿದೆ. ಶಾಹೀ ಸಿಂಹಾಸನಗಳನ್ನು ಎಗರಿಸಹತ್ತಿದೆ. ಪುಣ್ಯಶ್ಲೋಕಿ ಶಿವಪ್ರಭೋ! ನೀವು ನಿಜವಾಗಿ ಅವತಾರಿಕಪುರುಷರು. ನಿಮ್ಮ ಸೇವೆಯಲ್ಲಿ ದೇಹವನ್ನು ಸವೆಯಿಸುವವರಿಂದಲೇ ಇಹ ಪರಗಳಲ್ಲಿ ಸೌಖ್ಯವು ಲಭಿಸುವದು. ನನ್ನ ಸದ್ಗುರುಗಳಾದ ರಂಬೀರರಾಯನಿಂದ ಎಚ್ಚರಗೊಂಡ ನಾನು ಪಶ್ಚಾತ್ತಾಪಪುನೀತನಾಗಿರುವೆನು. ರಾಷ್ಟ್ರಕ್ಕಾಗಿ ಬೇಕಾದಂತಹ ತ್ಯಾಗಮಾಡಲು ಸಿದ್ಧನಾಗಿರುವೆನು. ಬಹಳವೇಕೆ ಆತ್ಮಬಲಿದಾನ ಮಾಡಲು ನನ್ನ ಸಿದ್ಧತೆಯಿದೆ."

ಧುಂಡಜಿಯ ವಿಚಾರ ಪರಿಪ್ಲುತ ಭಾಷಣವನ್ನು ಕೇಳಿ ಎಲ್ಲರಿಗೂ ಸಂ

ತೋಷವಾಯಿತು. ಸ್ವರಾಜ್ಯಸೇವೆಗಾಗಿ ಸಾಮಾನ್ಯ ಜನರೂ ಮುಂದಾಗತೊಡಗಿದ್ದರಿಂದ ಮಹಾರಾಜರಿಗುಂಟಾದ ಆನಂದವನ್ನು ವರ್ಣಿಸಲಾಸಲ್ಲ. ಅವರು ಧುಂಡಜಿಗೆ:—"ನಿನ್ನಲ್ಲಿ ಈಗಲಾದರೂ ಸುವಿಚಾರಗಳು ಉದಯವಾದದ್ದು ಸಂತೋಷದ ವಿಷಯ. ನೀನು ನಮ್ಮ ಶತ್ರುವಾಗಿದ್ದವನು ಮಿತ್ರನಾದೆ. ಮಾತೃಭೂಮಿಯ ಆದರ್ಶ ಸೇವಕನೂ ಆಗುವೆಯೆಂಬ ಭರವಸೆಯಾಗಿದೆ. ಸ್ವಧರ್ಮೀಯರಾಗಲಿ, ವಿಧರ್ಮೀಯರಾಗಲಿ, ಹಿಂದು ಭೂಮಿಯ ಹಾಗು ಹಿಂದು ಜನತೆಯ ವೈರವನ್ನು ಯಾರು ಬಯಸುವರೋ, ಯಾರು ಹಿಂದು ರಾಷ್ಟ್ರವನ್ನು ದಾಸ್ಯದಲ್ಲಿರಿಸಲು ಪ್ರಯತ್ನಪಡುವರೋ, ಹಿಂದು ಜನಾಂಗಕ್ಕೆ ಯಾರು ತೊಂದರೆ ಕೊಡುವರೋ ಅವರೆಲ್ಲರೂ ಸ್ವರಾಜ್ಯದ ವೈರಿಗಳು. ಅಂಥವರು ಹಿಂದುಗಳಾಗಿದ್ದರೂ ಹಿಂದು ಭೂಮಿಗೆ ಅವರು ವೈರಿಗಳೇ. ಮಹಂತ ಧುಂಡಿರಾಜರು ಹಿಂದುಗಳಾಗಿದ್ದರೂ ಮಾತೃಭೂಮಿಯ ಹಗೆಗಳಾಗಿರುವರು. ಅಂಥ ಜನರಿಗೆ ಕೂಡ ಯೋಗ್ಯ ಪ್ರಾಯಶ್ಚಿತ್ತ ವಿಧಿಸುವದು ನಮ್ಮ ಕರ್ತವ್ಯವೇ ಆಗಿದೆ. ಸಮಯ ಸಾಧಿಸಿದಾಗ ಆ ಕೆಲಸವೂ ನೆರವೇರುವದು. ಧುಂಡಜಿ, ನೀನು ಪಶ್ಚಾತ್ತಾಪಪ್ರಸೀತನಿರುವದರಿಂದ ನಿನಗೆ ಯಾವ ವಿಧದ ಶಾಸನವನ್ನೂ ವಿಧಿಸದೆ ಸ್ವರಾಜ್ಯಸೇನಾಪಥಕದಲ್ಲಿ ನಿನ್ನನ್ನು ತೆಗೆದುಕೊಂಡಿರುವೆನು. ಇನ್ನು ನೀನು ಸ್ವರಾಜ್ಯ ಕಾರ್ಯಕ್ಕಾಗಿ ಕೊಟ್ಟ ಕಾಣಿಕೆಯ ವಿಷಯವಾಗಿ ಹೇಳಬೇಕಾದರೆ, ನಿನ್ನ ಈ ಒಡವೆಗಳೆಲ್ಲವನ್ನು ಸ್ವಾಧೀನ ಪಡಿಸಿಕೊಳ್ಳುವ ಇಚ್ಛೆ ನನಗಿಲ್ಲ. ಈ ಒಡವೆಗಳ ಒಡೆಯರಾರೆಂಬದನ್ನು ತಿಳಿಸಿದರೆ, ಅವುಗಳನ್ನು ಅವರವರ ಸ್ವಾಧೀನಪಡಿಸುವ ವ್ಯವಸ್ಥೆ ಮಾಡುವೆನು."

"ಪ್ರಭೋ!" ಧುಂಡಜಿಯು ಕ್ಲೇಶವಾಣಿಯಿಂದ:—"ಇವುಗಳು ಯಾರವೆಂದು ಹೇಳಲಿ? ಎಷ್ಟು ಜನ ಶ್ರೀಮಂತರ ಒಡವೆಗಳು ಇವುಗಳಲ್ಲಿರುವವೋ, ಎಷ್ಟು ದೀನ ದರಿದ್ರರ ಒಡವೆಗಳು ಇವುಗಳಲ್ಲಿರುವವೋ! ಇಂಥವರದೇ ಎಂದು ಒಂದು ಒಡವೆಯನ್ನು ಕೂಡ ತೆಗೆದು ಕೊಡಲು ನನಗೆ ಸಾಧ್ಯವಿಲ್ಲ."

ಅನಂತರದಲ್ಲಿ ಮಹಾರಾಜರು ಮಾನಾಜಿರಾಯನನ್ನು ಕುರಿತು:—"ಮಾನಾಜಿರಾಯರೆ, ಧುಂಡಜಿಯ ಈ ಕಾಣಿಕೆಯನ್ನು ಯೋಗ್ಯ ಕೆಲಸಕ್ಕಾಗಿ ವಿನಿಯೋಗಿಸುವದು ಅವಶ್ಯವು. ಇದರ ಮೇಲೆ ಹಿಂದು ಜನತೆಯ ಒಡೆತನವಿದೆ. ಇದನ್ನು ದೀನ ದರಿದ್ರರ ಹಿತಕ್ಕಾಗಿ ಹಾಗು ಸಾರ್ವಜನಿಕ ಉಪಯೋಗಕ್ಕಾಗಿ ವೆಚ್ಚಮಾಡಬೇಕು. ಇದನ್ನು ಯಾವ ಯಾವ ವಿಧವಾಗಿ ಎಷ್ಟು ಎಷ್ಟು

ವೆಚ್ಚಮಾಡಬೇಕೆಂಬ ಅಧಿಕಾರವನ್ನು ನಾನು ನಿಮಗೆ ಕೊಟ್ಟಿರುವೆನು. ನೀವು ಯಾವ ಯಾವ ವಿಷಯುಗಳಿಗೆ ಎಷ್ಟೆಷ್ಟು ವಿನಿಯೋಗ ಮಾಡುವವರಿರುವಿರೆಂಬ ಬಗ್ಗೆ ಲೆಕ್ಕ ಸಿದ್ಧಪಡಿಸಿರಿ. ಅವನ್ನು ನಾನು ನೋಡಿ ಸರಿಪಡಿಸಬೇಕಾದುದನ್ನು ಸರಿಪಡಿಸಿ ವೆಚ್ಚಮಾಡುವ ಬಗ್ಗೆ ಆಜ್ಞೆ ಕೊಡುವೆನು."

ಮಹಾರಾಜರು ಮಾನಾಜಿರಾಯನಿಗೆ ಹೀಗೆ ಆಜ್ಞಾಪಿಸಲು, ಅವನು ಸುಲಿಗೆಯ ಆಸ್ತಿಯ ವಿನಿಯೋಗದ ಬಗ್ಗೆ ಲೆಕ್ಕವನ್ನು ಸಿದ್ಧಪಡಿಸಲು ಒಪ್ಪಿದನು. ಅಷ್ಟರಲ್ಲಿ ಊಟದ ವೇಳೆಯಾಯಿತು. ಅಡಿಗೆಯು ಸಿದ್ಧವಿರುವದೆಂದು ಜಯಾಬಾಯಿಯಿಂದ ಸೂಚನೆಯೂ ಬಂತು. ಕೂಡಲೆ ಎಲ್ಲರೂ ಊಟಕ್ಕೆ ಎದ್ದರು. ಅಂದು ಪಶ್ಚಾತ್ತಾಪಪುನೀತನಾದ ಘುಂಪಜಿಗೂ ಮಹಾರಾಜರ ಪಂಗ್ತಿಲಾಭವಾಯಿತು!

---

## ೯ ವಿದ್ರೋಹಿ ದುರ್ಗಾಧಿಪತಿ.

ಶಿವಾಜಿಮಹಾರಾಜರಿಗೆ ಘುಂಪಜಿಯಿಂದ ಎಷ್ಟೋ ಗೌಪ್ಯ ಸಂಗತಿಗಳು ತಿಳಿದವು. ಆಡವಿಯಲ್ಲಿ ಯಾವ ಯಾವ ಸುಲಿಗೆಗಾರರಿಗೆ ಯಾರ ಯಾರ ಉದಾರಾಶ್ರಯವಿರುವದೆಂಬ ಸಂಗತಿಯು ಗೊತ್ತಾಯಿತು. ವಿಜಾಪುರದ ಶಾಹೀ ಓಲಗದ ಅಧಿಕಾರಿಗಳ ಅನಸ್ವಿತ ಕೃತಿಗಳ ಮಾದರಿಗಳು ಗೊತ್ತಾದವು. ಕೆಲವು ಜನ ಹಿಂದುಗಳು ಬಾಹ್ಯಾತ್ಕಾರವಾಗಿ ತಮ್ಮಂತೆ ನಟಿಸುತ್ತ, ಅಂತರಂಗದಲ್ಲಿ ಯವನರನ್ನು ಕೂಡಿಕೊಂಡು ಹೇಗೆ ಹೇಗೆ ಸ್ವಾರ್ಥಸಾಧನೆ ಮಾಡುತ್ತಿರುವರೆಂಬದೂ ಗೋತ್ತಾಯಿತು. ಇಂಥ ವಿದ್ರೋಹಿ ಹಿಂದುಗಳು ಯವನರಿಗಿಂತ ಪ್ರಬಲನ ಶತ್ರುಗಳೆಂದು ಮಹಾರಾಜರ ತಿಳುವಳಿಕೆಯಿದ್ದುದರಿಂದ ಅಂಥವರ ಪಾರಿಪತ್ಯ ಮಾಡಿಯೇ ತೀರಬೇಕೆಂದು ಮಹಾರಾಜರು ಸಂಕಲ್ಪಿಸಿಕೊಂಡರು. ಅವರು ವಿದ್ರೋಹಿಗಳಿಗೆ ಪ್ರಾಯಶ್ಚಿತ್ತವಿಧಿಸುವದಕ್ಕೆ ಎಂದೂ ಹಿಂದು ಮುಂದು ನೋಡುತ್ತಿರಲಿಲ್ಲ. ಇಷ್ಟರೊಳಗಾಗಿ ಎಷ್ಟೋ ಹಿಂದುಗಳು ಅವರಿಂದ ದಂಡನೆ ಹೊಂದಿದ್ದರು. ಇಂಥ ವಿದ್ರೋಹಿ ಹಿಂದುಗಳಲ್ಲಿ ಜಯಗಡದ ದುರ್ಗಾಧಿಪತಿಯಾದ ಅಮೃತರಾಯನೊಬ್ಬನಾಗಿದ್ದನು. ಆ ಜಯಗಡವು ಸ್ವರಾಜ್ಯ ಹಾಗು ಸಾವಂತವಾಡಿಗಳ ಗಡಿಯಲ್ಲಿತ್ತು. ಸಾವಂತವಾಡಿಯ

ಘೋಂಪ ಸಾವಂತನು ಮಹಾರಾಜರಿಗೆ ಯವನರಷ್ಟೇ ಶತ್ರುವಾಗಿದ್ದನು. ಅವನ ಚಲನವಲನವನ್ನು ನಿರೀಕ್ಷಿಸುತ್ತ, ಪ್ರಸಂಗಪ್ರೊದಗಿದಾಗ ಅವನಿಗೆ ಬಿಗಿ ಮಾ-ಡುತ್ತ ಗಡಿನಾಡನ್ನು ಸಂರಕ್ಷಿಸುವವಕ್ಕಾಗಿ ಅಮೃತರಾಯನು ಜಯಗಡ ದುರ್ಗದ ಮೇಲೆ ಅಧಿಕಾರಿಯಾಗಿ ನಿಯಮಿಸಲ್ಪಟ್ಟಿದ್ದನು. ಈ ಅಮೃತ ರಾಯನ ವಿಷಯವಾಗಿಯೂ ಧುಂಡಜಿಯು ಕೆಲವು ಸಂಗತಿಗಳನ್ನು ಹೇಳಿದನು. ಯವನ ಅಧಿಕಾರಿಗಳೊಡನೆ ಸಂಬಂಧಪಟ್ಟ ಧುಂಡಜಿಯಂಥ ಸುಲಿಗೆ ಗಾರರಿಗೆ ಕೂಡ ರಾಜಕಾರಣದ ಎಷ್ಟೋ ಸಂಗತಿಗಳು ಗೊತ್ತಿರುತ್ತಿದ್ದುದನ್ನು ನೋಡಿ ಮಹಾರಾಜರಿಗೆ ಆಶ್ಚರ್ಯವಾಯಿತು.

ಅಮೃತರಾಯನ ಪ್ರಸ್ತಾಪ ಹೊರಟ ಕೂಡಲೆ ಮಹಾರಾಜರು ಮಾನಾಜಿ ರಾಯನನ್ನು ಕುರಿತು:—"ಅಮೃತರಾಯರಿಗೆ ಇದೇ ವಸತಿಯಲ್ಲಿ ಬರ ಹೇಳಿದ್ದೆನು. ಇಷ್ಟು ವೇಳೆಗೆ ಅವರು ಬರಬೇಕಾಗಿತ್ತು. ಯಾಕೆ ಬರಲಿಲ್ಲ ವೋ ಏನೋ!"

ಧುಂಡಜಿಯು ಹೇಳಿಕೆಯಿಂದ ಮಾನಾಜಿರಾಯ-ಹಂಬೀರರಾಯ ಮೊದಲಾದವರಿಗೆ ಅಮೃತರಾಯನ ವಿಷಯವಾಗಿ ಸಂದೇಹವು ಉತ್ಪನ್ನವಾಗಿತ್ತು. ಮಹಾರಾಜರು ಅಮೃತರಾಯನನ್ನು ಬರಹೇಳಿರುವ ಸಂಗತಿ ಗೊತ್ತಾದಮೇಲೆ ಅವರಿಗೆ ಮತ್ತಷ್ಟು ಸಂದೇಹವಾಯಿತು; ಹಾಗೆ ಅಮೃತರಾಯನು ವಿದ್ರೋಹಿಯಾದ ಸಂಗತಿಯು ಮಹಾರಾಜರಿಗೆ ಮೊದಲೇ ಗೊತ್ತಾಗಿರುವದೆಂದು ಅವರು ತಿಳಿದರು; ಆದರೆ ಅಮೃತರಾಯನನ್ನು ಇಲ್ಲಿಗೆ ಬರಹೇಳಿದ ಕಾರಣವೇನೆಂದು ಕೇಳುವ ಧೈರ್ಯವು ಯಾರಿಗೂ ಆಗಲಿಲ್ಲ. ಅವರು ವಿಸ್ಮಿತರಾಗಿ ಮಹಾರಾಜರ ಮುಖವನ್ನು ನೋಡುತ್ತ ಸ್ವಸ್ಥವಾಗಿ ಕುಳಿತರು. ಆಗ ಮಹಾರಾಜರು:—"ಧುಂಡಜಿಯು ಹೇಳಿದ ಸಂಗತಿಗಳಲ್ಲಿ ಅಮೃತರಾಯನ ಪ್ರಕರಣವು ಇದ್ದುದು ತಮಗೆ ಗೊತ್ತಾಯಿತಷ್ಟೆ? ಅವನ ವಿಷಯವಾಗಿದ್ದ ಸಂದೇಹವನ್ನು ಸತ್ಯಕ್ಕೆ ಎಳೆಯುವ ಲಿಖಿತ ಆಧಾರಗಳು ನನ್ನ ಕಡೆಗೆ ಇರುವವು."

ಮಹಾರಾಜರು ವಿದ್ರೋಹಿ ಜನರ ಬಗ್ಗೆ ಎಷ್ಟು ಜಾಗ್ರತರಾಗಿರುವರೆಂಬ ಸಂಗತಿಯು ಅವರ ಮಾತಿನಿಂದ ಎಲ್ಲ ಜನರಿಗಾಯಿತು. ಮಾನಾಜಿರಾಯನು ಅವರ ಯೋಗ್ಯತೆಯನ್ನು ಅರಿತವನಿದ್ದುದರಿಂದ ಅವನಿಗೆ ಹೆಚ್ಚಾಗಿ ಕೌತುಕವಾಗಲಿಲ್ಲ; ಯಾಕಂದರೆ, ಅವನಿಗೆ ಇಂಥ ಸಂಗತಿಳು ನಿತ್ಯದವಾಗಿದ್ದವು; ಆದರೆ ಹಂಬೀರರಾಯನಿಗೆ ಮಾತ್ರ ಪರಮಾವಧಿ ವಿಸ್ಮಯವಾಯಿತು. ಮಹಾ

ರಾಜರ ವ್ಯಕ್ತಿತ್ವವು ಸಾಮಾನ್ಯವಾದುದಲ್ಲವೆಂದು ಅವನು ಅವರನ್ನು ಮುಕ್ತಕಂಠ ದಿಂದ ಯಾಗಿ ಕೊಂಡಾಡಿದನು.

ಕೆಲವು ವೇಳೆಯ ಮೇಲೆ ಹಂಬೀರರಾಯನ ಸೇವಕರಲ್ಲೊಬ್ಬನು ಅಲ್ಲಿಗೆ ಬಂದು:—'ಧನೀಸಾಹೇಬರೇ, ಹೊರಗೆ ಅಶ್ವಾರೋಹಿಯೊಬ್ಬನು ಬಂದಿರುವನು; ಮಹಾರಾಜರನ್ನು ಕಾಣಬೇಕಾಗಿದೆಯೆಂದು ಅವನು ಹೇಳಿದನು."

"ಒಳ್ಳೇದು, ಅವನನ್ನು ಒಳಗೆ ಕಳುಹಿಸು" ಎಂದು ಮಹಾರಾಜರು ಸೇವಕನಿಗೆ ಆಜ್ಞಾಪಿಸಿ:—"ಬಹಳ ಮಾಡಿ ಅವರು ಜಯಗಡದ ಅಮೃತರಾಯರೇ ಇರಬಹುದು."

ನಿಜವಾಗಿಯೂ ಅವನು ಅಮೃತರಾಯನೇ ಆಗಿದ್ದನು. ಮಹಾರಾಜರ ಆಜ್ಞೆಯಾಗಿರುವದೆಂದು ಹೇಳಿ, ಸೇವಕನು ಅವನನ್ನು ಒಳಗೆ ಕಳುಹಿದನು. ಅಮೃತರಾಯನು ಒಳಗೆ ಬಂದು, ಮಹಾರಾಜರಿಗೆ ನಮಸ್ಕಾರ ಮಾಡಿ ನಿಂತುಕೊಂಡನು. ಆಗ ಅವರು:—ಅಮೃತರಾಯರೆ, ನನ್ನ ನಿರೋಪವು ನಿಮಗೆ ತಲುಪಿತೆಂದೇ ಬಂದಿರುವಿರಲ್ಲವೆ?"

"ಹೌದು. ಮಹಾರಾಜರೇ, ಅದಕ್ಕಾಗಿಯೇ ಬಂದೆನು. ತಮ್ಮ ವಸತಿಯು ದೇವಗಾಂವಿಯ ಜಹಾಗೀರದಾರರ ವಾಡೆಯಲ್ಲಿರುವದೆಂಬ ಸಂಗತಿಯು ನನಗೆ ಗೊತ್ತು ಸಹ ಇರಲಿಲ್ಲ. ತಮ್ಮ ಪತ್ರ ಬಾರದಿದ್ದರೆ, ಇಂಥ ಜಹಾಗೀರದಾರರ ಮನೆಯಲ್ಲಿ ಮಹಾರಾಜರು ವಸತಿ ಮಾಡಿದ್ದಾರೆಂದು ಯಾರಾದರೂ ಹೇಳಿದ್ದರೆ ನಾನು ನಂಬುತ್ತಲೇ ಇರಲಿಲ್ಲ. ಯಾಕೆಂದರೆ, ಮಹಾರಾಜರಂಥ ಜನರು ಇಂಥ ಸಾಮಾನ್ಯರ ಮನೆಯಲ್ಲಿ ವಸತಿ ಮಾಡುವದು ಅಸಂಭಾವ್ಯವೆಂದೇ ನನ್ನ ಕಲ್ಪನೆಯಾಗುತ್ತಿತ್ತು." ಎಂದು ಅಮೃತರಾಯನು ಉಪಹಾಸಾತ್ಮಕವಾಗಿ ನುಡಿದನು.

ಅಮೃತರಾಯನ ವ್ಯಂಗ್ಯೋಕ್ತಿಗಳನ್ನು ಕೇಳಿ ಮಹಾರಾಜರಿಗೆ ತಿರಸ್ಕಾರವೆನಿಸಿತು. ಆದರೂ ಅವರು ತಮ್ಮ ಮನೋವಿಕಾರವನ್ನು ವ್ಯಕ್ತಪಡಿಸದೆ ಸಮಾಧಾನ ವಾಣಿಯಿಂದ:—"ನಿಮ್ಮಂಥ ದೊಡ್ಡ ಅಧಿಕಾರಿಗಳಿಗೆ ಈ ಜಹಾಗೀರದಾರನ ಮನೆಯು ಸಾಮಾನ್ಯತರದ್ದಾಗಬಹುದು; ಆದರೆ ಸ್ವರಾಜ್ಯ ಸೇವಕನಾದ ನನಗೆ ನಿಮ್ಮ ಮನೆಯೂ ಅಷ್ಟೇ; ಗತ ವೈಭವದ ಹಂಬೀರರಾಯನ ಮನೆಯೂ ಅಷ್ಟೇ. ಇನ್ನೊಂದು ಮಾತೇನಂದರೆ, ಕೇವಲ ದೊಡ್ಡ ಜನರೇ ದೊಡ್ಡವರೆಂದು ನಾನು ತಿಳಿಯುವದಿಲ್ಲ. ಹಂಬೀರರಾಯನಂಥ ಸಣ್ಣ ಮನು

ಷ್ಯರು ನಿಮ್ಮಂಥ ದೊಡ್ಡ ಜನರನ್ನು ಮೀರುವ ಯೋಗ್ಯತೆಯುಳ್ಳವರಿರುವರು; ನಿಮ್ಮಂಥ ದೊಡ್ಡ ಮನುಷ್ಯರಲ್ಲಿ ಹಂಬೀರರಾಯನೇ ಏಕೆ, ಈ ಸುಲಿಗೆಗಾರ ಧುಂಡಜಿಯಲ್ಲಿದ್ದಷ್ಟು ಗುಣಗಳಿರುವದಿಲ್ಲ."

ಮಹಾರಾಜರು ಸಮಾಧಾನದಿಂದ ಮಾತಾಡಿದರೂ ಅವರ ಮಾತಿನಲ್ಲಿ ಗರ್ಮವಿತ್ತು. ಆ ತಿರಳು ಮಾನಾಜಿರಾಯನೊಬ್ಬನಿಗೇ ಚೆನ್ನಾಗಿ ಹೊಳೆಯಿತು. ಕಳ್ಳರ ಜೀವ ಹುಳ್ಳು ಳ್ಳಗೆ ಎಂಬಂತೆ ಅಮೃತರಾಯನೂ ಮೆಟ್ಟಿಬಿದ್ದನು. ಆದರೂ ಅವನು ಯಾವ ಬಗೆಯ ವಿಕಾರವನ್ನೂ ಬೈಲಿಗೆ ತರಲಿಲ್ಲ. ಮಹಾರಾಜರ ಮರ್ಮೋಕ್ತಿಗಾಗಿ ಅವನು ನಾಚಿದನು ಮಾತ್ರ.

ಅನಂತರದಲ್ಲಿ ಮಹಾರಾಜರು ಹಂಬೀರರಾಯನನ್ನು ಕುರಿತು:— "ಹಂಬೀರರಾಯಾ, ಇವರು ಜಯಗಡದ ದುರ್ಗಾಧಿಪತಿಗಳಾದ ಅಮೃತರಾಯರು. ಇವರು ಅತ್ಯಂತ ಪ್ರಾಮಾಣಿಕರೂ, ಶೂರರೂ, ಸ್ವರಾಜ್ಯದ ಏಕನಿಷ್ಠ ಸೇವಕರೂ ಎಂದು ತಿಳಿದುಕೊಂಡು ಸ್ವರಾಜ್ಯ-ಸಾವಂತವಾಡಿಗಳ ಗಡಿಯಲ್ಲಿಪ್ಪ ಜಯಗಡ ದುರ್ಗದ ಮೇಲೆ ಅಧಿಕಾರಿಯನ್ನಾಗಿ ನಿಯಮಿಸಿರುವೆನು. ಇವರನ್ನು ಕೆಲಸವೊಂದು ರಾಜಕಾರಣದ ನಿಮಿತ್ತವಾಗಿ ಇಲ್ಲಿಗೆ ಕರೆಯಿಸಿರುವೆನು. ನಾನು ನಿನ್ನ ಅತಿಥಿಯಾದುದರಿಂದ ನನ್ನ ಆಮಂತ್ರಿತರಾದ ಇವರೂ ನಿನ್ನ ಅತಿಥಿಗಳೇ ಸರಿ. ಇವರು ಹಸಿದಿರುವದರಿಂದ ಊಟದ ವ್ಯವಸ್ಥೆ ಮಾಡಿಸು."

"ಅವಶ್ಯ" ಎಂದು ನುಡಿದು, ಹಂಬೀರರಾಯನು ಎದ್ದು:—"ನಡೆಯಿರಿ ಅಮೃತರಾಯರೇ!"

"ನಾನು ಊಟ ತೀರಿಸಿಕೊಂಡೇ ಇಲ್ಲಿಗೆ ಬಂದಿರುವೆನು" ಎಂದು ಅಮೃತರಾಯನು ನುಡಿದನು. ಅನಂತರದಲ್ಲಿ ಮಹಾರಾಜರು ಬಲುಮೆಯಿಂದ ಅಲ್ಪೋಪಹಾರವನ್ನಾದರೂ ತೀರಿಸಿಕೊಂಡು ಬರಬೇಕೆಂದು ಹೇಳಿ, ಅಮೃತರಾಯನನ್ನು ಕಳುಹಿಸಿದರು.

ಉಪಾಹಾರ ತೀರಿದ ಮೇಲೆ ಅಮೃತರಾಯನು ಮಂತ್ರಣಾಗಾರಕ್ಕೆ ಬಂದನು. ಮಹಾರಾಜರು ಅವನನ್ನು ಯೋಗ್ಯ ಸ್ಥಳದಲ್ಲಿ ಕುಳ್ಳಿರಿಸಿದರು. ಆಗ ಅಮೃತರಾಯನು:—"ಮಹಾರಾಜರೇ, ಧುಂಡಜಿ ಸುಲಿಗೆಗಾರನು ಇವನೇ ಏನು?" ಎಂದು ವಿಚಾರಿಸಿದನು.

"ಹೌದು; ಇವನೇ ಸುಲಿಗೆಗಾರ ಧುಂಡಜಿಯು. ಸದ್ಯಕ್ಕೆ ದಕ್ಷಿಣಭಾರತದಲ್ಲಿ ಸ್ವಾಭಿಮಾನವು ಜಾಗೃತವಾಗತೊಡಗಿದೆ. ಮಾತೃಭೂಮಿಯ ಸೇವೆ

ಗಾಗಿ ಎಷ್ಟೋ ಜನರು ಮುಂದೆ ಬರುತ್ತಿರುವರು. ಹೀನ ಕರ್ಮಗಳಾದ ಧುಂಡಜಿಯಂಥ ಸುಲಿಗೆಗಾರರಲ್ಲಿ ಸಹ ವಿವೇಕವು ಜಾಗ್ರತವಾಗತೊಡಗಿದೆ. ಇನ್ನು ಅಪವಾದಕ್ಕಾಗಿ ಕೆಲವು ಕೆಟ್ಟ ಉದಾಹರಣೆಗಳೂ ದೊರೆಯುತ್ತವೆ. ನಿಮ್ಮಂಥ ದೊಡ್ಡ ದೊಡ್ಡ ದುರ್ಗಾಧಿಪತಿಗಳೂ ಮಹಂತರಂಥ ದೊಡ್ಡ ವಿರಕ್ತರೂ ಮಾತೃಭೂಮಿಯ ದ್ರೋಹವೆಸಗಲು ಸಿದ್ಧರಾಗುತ್ತಿರಬಹುದು."

"ನನ್ನಂಥ?" ಎಂದು ಅಮೃತರಾಯನು ವಿಸ್ಮಯಗೊಂಡವರಂತೆ ಕೇಳಿ: 'ಮಹಾರಾಜರೆ, ಇದೇನು ನುಡಿಯುವಿರಿ?"

"ಅಮೃತರಾಯರೇ, ಗಾಬರಿಯಾಗಬೇಡಿರಿ. ನಿಮ್ಮಂಥ ಅಂದರೆ ನೀವೇ ಅಲ್ಲ; ನಿಮ್ಮ ಹಾಗೆ ಎಷ್ಟೋ ದುರ್ಗಗಳಲ್ಲಿ ಅಧಿಪತಿಗಳಾಗಿದ್ದವರು ರಾಷ್ಟ್ರ ದ್ರೋಹಪಾತಕವೆಸಗಲು ಸಿದ್ಧರಾಗುತ್ತಿರುವರೆಂದು ನನ್ನ ಮಾತಿನ ಅರ್ಥ. ಅಷ್ಟೇ ಏಕೆ? ನೀವು ಕೂಡ ಹಾಗೆ ತಾಯಿನಾಡಿನ ದ್ರೋಹವೆಸಗುವದು ಕೂಡ ಅಸಂಭಾವ್ಯವಲ್ಲ. ಮನಸ್ಸು ಮಾಡಿದರೆ ಯಾವುದು ತಾನೆ ಅಸಾಧ್ಯವು?"

"ಮಹಾರಾಜರೆ! ಪಾತಕಿಗಳು ಏನಾದರೂ ಕೆಟ್ಟ ಕರ್ಮ ಮಾಡುತ್ತಿರಬಹುದು; ಆದರೆ ಈ ದೇಹದಲ್ಲಿ ಪ್ರಾಣವಿರುವವರೆಗೆ ಈ ನಿಮ್ಮ ಸೇವಕನಿಂದ ಅಂಥ ಘಟನೆಗಳೆಂದೂ ನಡೆಯವು."

"ನಾನು ಅಷ್ಟು ವಿಶ್ವಾಸಗೊಂಡೇ ಜಯಗಡದಂಥ ಆಯಕಟ್ಟಿನ ದುರ್ಗದ ಮೇಲೆ ನಿಯಮಿಸಿ, ಸ್ವರಾಜ್ಯದ್ರೋಹವೆಸಗಲು ಸಿದ್ಧನಾದ ಸಾವಂತನ ಚಲನವಲನವನ್ನು ನಿರೀಕ್ಷಿಸುವ ಕೆಲಸಕ್ಕೆ ನಿಮ್ಮನ್ನು ಹಚ್ಚಿರುವೆನು."

"ನಾನೆಲ್ಲಿ ಅಲ್ಲವೆನ್ನುತ್ತೇನೆ ಮಹಾರಾಜರೇ! ನಾನು ನನ್ನ ಕರ್ತವ್ಯವನ್ನು ಅತ್ಯಂತ ಜಾಗ್ರತೆಯಿಂದ ಮಾಡುತ್ತಿರುವೆನು" ಎಂದು ಅಮೃತರಾಯನು ನುಡಿದು, ವಿಷಯಾಂತರ ಮಾಡಿ:—"ಧುಂಡಜಿಯಂಥ ಸುಲಿಗೆಗಾರನು ಸ್ವರಾಜ್ಯಸೇವೆಗೆ ಸಿದ್ಧನಾದದ್ದು ಅತ್ಯಂತ ವಿಸ್ಮಯವು. ತಮ್ಮ ಪ್ರಭಾವವೇ ಅಂತಹದು. ಅದು ಎಂತಹರನ್ನಾದರೂ ರಾಷ್ಟ್ರಸೇವೆ ಮಾಡಹಚ್ಚುವದು. ಧುಂಡಜಿಯು ಯವನರ ಪಕ್ಷಪಾತಿಯಾಗಿದ್ದನು. ಈಗ ಸ್ವರಾಜ್ಯಕ್ಕಾಗಿ ತನ್ನ ದೇಹವನ್ನು ಸವೆಯಿಸಲು ಸಿದ್ಧನಾದದ್ದು ಸಂತೋಷದ ಸಂಗತಿ."

"ಅವನು ತನ್ನ ಸಂಪತ್ತು ಸರ್ವಸ್ವವನ್ನೂ ಸ್ವರಾಜ್ಯ ಕಾರ್ಯಕ್ಕೆ ಕಾಣಿಕೆಯಾಗಿ ಸಮರ್ಪಿಸಿರುವನು" ಎಂದು ಮಾನಾಜಿರಾಯನು ಹೇಳಿದನು.

"ಆತ್ಮಬಲಿದಾನ ಮಾಡಲು ಸಿದ್ಧನಾದವನಿಗೆ ಸಂಪತ್ತಿನ ಬೆಲೆಯೇನು?"

ಮಹಾರಾಜರು ನುಡಿದು:—"ಇಂಥವನಿಂದ ನಿಮ್ಮಂಥವರು ಕೂಡ ಪಾಠ ಕಲಿಯುವಂತಿಲ್ಲವೆ ಅಮೃತರಾಯರೆ?"

"ಧುಂಡಜಿಯ ನಡತೆಯು ಅನುಕರಣೀಯವಿದೆ." ಎಂದು ಅಮೃತರಾಯನು ನುಡಿದು:—"ಮಹಾರಾಜರೆ, ಈ ಹಂಬೀರರಾಯರೂ ಇನ್ನು ಮೇಲೆ ಸ್ವರಾಜ್ಯ ಸೇವೆಗಾಗಿ ಟೊಂಕ ಕಟ್ಟುವವರಿರುವಂತೆ ತೋರುವದು."

"ನಿಜ." ಎಂದು ಮಹಾರಾಜರು ನುಡಿದು, ಅಮೃತರಾಯನನ್ನು ತೀಕ್ಷ್ಣ ದೃಷ್ಟಿಯಿಂದ ನೋಡುತ್ತ:—"ಸ್ವರಾಜ್ಯದ ದೈವವು ಎಂತಹದಿದೆಯೋ ನೋಡಬೇಕು. ಹಂಬೀರರಾಯ-ಧುಂಡಜಿಯರಂಥ ಒಬ್ಬಿಬ್ಬರು ಸ್ವರಾಜ್ಯ ಸೇವೆಗೆ ಸಿದ್ಧರಾಗುತ್ತಿರುವಷ್ಟರಲ್ಲಿ ನಿಮ್ಮಂಥ ಹಳೆಯ ಜನರಲ್ಲಿ ಒಬ್ಬಿಬ್ಬರು ವಿದ್ರೋಹಿತನ ಮಾಡತೊಡಗಿದ್ದಾರೆ."

"ಮಹಾರಾಜರೆ, ಒಮ್ಮೆ ನಿಮ್ಮ ಸೇವೆಯನ್ನು ಕೈಕೊಂಡಮೇಲೆ ವಿದ್ರೋಹಿತನದ ಮಹಾಪಾತಕವು ಯಾರಿಂದಲೂ ಘಟಿಸದೆಂದು ನನ್ನ ಆತ್ಮವಿಶ್ವಾಸವಿದೆ." ಎಂದು ಅಮೃತರಾಯನು ಗಂಭೀರತೆಯನ್ನು ಅಭಿನಯಿಸುತ್ತ ನುಡಿದನು.

"ನಿಮ್ಮ ಆತ್ಮವಿಶ್ವಾಸವು ವಿಶ್ವಾಸಾರ್ಹವಿದ್ದರೆ ಅದೊಂದು ಮಹಾಭಾಗ್ಯವು." ಎಂದು ಮಹಾರಾಜರು ನುಡಿದು:—"ಇರಲಿ. ಅಮೃತರಾಯರೆ, ಜಯಗಡದ ಕಡೆಯ ವರ್ತಮಾನವೇನು? ಫೌಂಡಸಾವಂತನು ಏನೇನು ಚಲನವಲನ ನಡೆಯಿಸಿರುವನು? ಅವನ ಸಾಹಸವೇನಿದೆ? ದುರ್ಗದ ಬಿಗಿಯು ಚನ್ನಾಗಿ ಇರುವದೇ ಹೇಗೆ? ಗಡಿನಾಡಿನ ದುರ್ಗವಾದ ಜಯಗಡದಂಥ ಮಹತ್ವದ ಸ್ಥಳದ ಮೇಲೆ ನಿಮ್ಮನ್ನು ನಿಯಮಿಸಿದೆ. ನೀವು ನಿಮ್ಮ ಅಧಿಕಾರಕ್ಕನುಗುಣವಾಗಿ ಕರ್ತವ್ಯ ಜರುಗಿಸುತ್ತಿರುವಿರೊ, ಸ್ವಚ್ಛಂದದಲ್ಲಿ ಕಾಲಕಳೆಯುತ್ತಿರುವಿರೋ? ಇಲ್ಲವೆ ಬೇರೊಂದು ಮಾರ್ಗವನ್ನು ಹಿಡಿದು ದುರ್ಗದ ಹಾಗು ಸ್ವರಾಜ್ಯದ ಉಪೇಕ್ಷೆಮಾಡುತ್ತಿರುವಿರೋ? ನನಗೆ ಎಲ್ಲ ಸಂಗತಿಗಳನ್ನು ಮರೆಮಾಜದೆ ವಿಶದವಾಗಿ ಹೇಳಿರಿ."

ಮಹಾರಾಜರ ಮಾತುಗಳನ್ನು ಕೇಳಿ ಅಮೃತರಾಯನು ಬೆಚ್ಚಿಬಿದ್ದನು. ಎಂದೂ ಹೀಗಾಡದವರು ಇಂದೇಕೆ ಹೀಗೆ ಮಾತಾಡುತ್ತಿರುವರೋ ಎಂದು ಅವನು ಯೋಚಿಸಹತ್ತಿದನು. ಹೆಚ್ಚು ವೇಳೆ ಆಲೋಚಿಸುವಷ್ಟು ಅವಕಾಶವಿರಲಿಲ್ಲ. ಮಹಾರಾಜರ ಪ್ರಶ್ನೆಗೆ ಬೇಗನೆ ಉತ್ತರ ಕೊಡಬೇಕಾಗಿತ್ತು. ಅವರ

ಮಾತಿನ ಪರಿಣಾಮವು ಅವನ ಮನಸ್ಸಿನ ಮೇಲೆ ಚನ್ನಾಗಿ ಆಗಿದ್ದರೂ ಯಾವ ವಿಧದ ಎಡರು ತೊಡರು ಮಾಡದೆ ಸರಳವಾಣಿಯಿಂದ:—"ಮಹಾರಾಜರೆ, ತಮ್ಮ ರಾಜಕಾರಣವೆಂದರೆ ಅಂಥ ಇಂಥ ರಾಜಕಾರಣವಲ್ಲ; ಸ್ವರಾಜ್ಯದ ರಾಜಕಾರಣವು. ತಾವು ಬಹು ಪ್ರಯಾಸದಿಂದ ಸ್ವರಾಜ್ಯ ಮಂದಿರ ಕಟ್ಟುತ್ತಿರುವ ಸಮಯದಲ್ಲಿ ನನ್ನಂಥವನೊಬ್ಬನು ರಾಜಕಾರಣದ ಕಡೆಗೆ ದುರ್ಲಕ್ಷ್ಯ ಮಾಡಿದರೆ ಇಲ್ಲವೆ ಸ್ವಚ್ಛಂದವೃತ್ತಿಯಲ್ಲಿ ಕಾಲ ಕಳೆಯತೊಡಗಿದರೆ ಆ ಪೆಟ್ಟು ಸ್ವರಾಜ್ಯ ಮಂದಿರಕ್ಕೆ ಬೀಳುವದೆಂಬದರ ಅರಿವಿಲ್ಲದಂಥ ಪಶುಕೋಟಿಯವನು ನಾನಲ್ಲ. ಈ ಮಾತಿನ ಬಗ್ಗೆ ತಮಗೆ ನಂಬಿಗೆ ಇರುವ ಮೂಲಕವೇ ಮಹತ್ವದ ಸ್ಥಳದ ಮೇಲೆ ನನ್ನನ್ನು ನಿಯಮಿಸಿರುವಿರಿ. ಹೀಗಿದ್ದ ಮೇಲೆ ನಾನು ಅಲಕ್ಷ್ಯ ಮಾಡುವೆನೆಂದು ತಮಗೆ ತೋರುತ್ತಿರುವದು ನನ್ನ ದುರ್ದೈವದ ಸಂಗತಿ."

"ಅಮೃತರಾಯರೆ, ಇದೇನು ನುಡಿಯುವಿರಿ? ನಿಮ್ಮಲ್ಲಿ ನನ್ನ ನಂಬಿಗೆ ಇಂದಿಗೂ ಇದೆ; ಆದರೆ ನನ್ನ ಪ್ರಶ್ನೆಗಳಿಗೆ ಉತ್ತರ ಮಾತ್ರ ಸರಿಯಾಗಿ ದೊರೆಯಬೇಕು." ಎಂದು ಮಹಾರಾಜರು ನುಡಿದು:—"ಸಾವಂತನು ಸ್ವರಾಜ್ಯದ ಮೇಲೆ ದಂಡೆತ್ತಿ ಬರಲು ಸಾಹಸ ಮಾಡುತ್ತಿರುವದು ನಿಜವಷ್ಟೆ?"

"ಛೇ! ಅವನ ಎದೆಗಾರಿಕೆ ನನಗೆ ಗೊತ್ತಿದೆ. ಸ್ವರಾಜ್ಯದ ಮೇಲೆ ದಾಳಿ ಮಾಡುವದು ಅವನ ಹಣೆಯಲ್ಲಿ ಬರೆದಿಲ್ಲ"

"ಅವನ ದಂಡುಗಳು ಜಯಗಡದ ಸೀಮೆಯಲ್ಲಿ ಗುಪ್ತವಾಗಿ ಸಂಗ್ರಹವಾಗುತ್ತಿರುವವೆಂದು ಕೇಳುತ್ತಿರುವೆನು. ಈ ಸಂಗತಿಯಾದರೂ ನಿಜವೆ?"

"ಈ ಸಂಗತಿ ಸುಳ್ಳು. ಒಂದು ವೇಳೆ ಸಂಗ್ರಹವಾಗುತ್ತಿದ್ದರೆ ಆ ವಿಷಯ ನನಗೆ ತಿಳಿಯದು. ಈ ಸಂಗತಿಯ ಬಗ್ಗೆ ಸೂಕ್ಷ್ಮವಾಗಿ ಶೋಧನೆ ಮಾಡಿ ತಮಗೆ ತಿಳಿಸುವೆನು."

"ಸೂಕ್ಷ್ಮವಾಗಿ ಶೋಧಿಸುವಿರಾ? ಜಯಗಡದಿಂದ ದೂರವಿರುತ್ತಿರುವ ನನಗೆ ಈ ಕಾರಸ್ಥಾನದ ಕಾಳಿಯು ತಗಲುತ್ತಿರಲು, ಜಯಗಡದವರೇ ಆದ ನೀವು ಈ ಸಂಗತಿಯ ಬಗ್ಗೆ ಸೂಕ್ಷ್ಮ ಶೋಧನೆ ಮಾಡಬೇಕಾದ ಮಾತಿನ ಇಂಗಿತವು ಬೇರೆ ವಿಧವಾಗಿರಲಿಕ್ಕೇಬೇಕು."

"ತಾವು ನನ್ನ ವಿಷಯವಾಗಿ ಈ ರೀತಿ ನುಡಿದರೆ ಅದಕ್ಕೆ ನನ್ನ ಉಪಾಯವೇ ಇಲ್ಲ. ನಾನು ಇಂದಿನ ತನಕ ಸ್ವರಾಜ್ಯ ಸೇವೆಯನ್ನು ಪ್ರಾಮಾಣಿಕತನದಿಂದ ಮಾಡುತ್ತ ಬಂದಿರುವೆನು. ಮುಂದೆಯೂ ಮಾಡುವೆನು. ಗಡಿನಾಡಿ

ನಲ್ಲಿ ಸಾವಂತನ ಸೈನ್ಯವು ಕೂಡಿದ್ದು ನನಗೆ ಗೊತ್ತಿಲ್ಲ. ನಾನು ಯಾವಾಗಲೂ ಅವನ ವಿಷಯವಾಗಿ ದಕ್ಷತೆಯಿಂದಿರುವೆನು."

"ಯಾವ ವಿಷಯವಾಗಿ ದಕ್ಷತೆಯಿಂದಿರುವಿರಿ? ಸಾವಂತನಿಂದ ಬಹುಮಾನ ಪಡೆಯುವ ವಿಷಯವಾಗಿ ದಕ್ಷತೆಯಿಂದಿರುವಿರಲ್ಲವೆ?"

"ಮಹಾರಾಜರೆ! ಇದೇನು ನುಡಿಯುವಿರಿ?" ಅಮೃತರಾಯನು ಬೆಚ್ಚಿ ಬಿದ್ದು ನುಡಿದು—"ಯಾವನೋ ದುಷ್ಟನು ತಮಗೆ ನನ್ನ ವಿಷಯವಾಗಿ ದೂರು ಹೇಳಿರಬೇಕು."

"ಸಾಕ್ಷಿಗಳು ದೊರೆತ ಮೇಲಾದರೂ ಒಪ್ಪುವಿರಾ?"

"ನನ್ನ ದ್ವೇಷ ಮಾಡುವವರು ಈ ಸ್ವರಾಜ್ಯದಲ್ಲಿ ಕಡಿಮೆಯಿಲ್ಲ. ಎಂಥ ಎಂಥ ಸರದಾರರು ಸಹ ನನ್ನ ಉತ್ಕರ್ಷೆಯನ್ನು ಸಹಿಸಲಾರದವರಾಗಿದ್ದಾರೆ."

"ಲೇಖನ ಸಾಕ್ಷಿಗಳು ಮುಂದೆ ಬಂದರೆ?"

"ಅಗತ್ಯ! ನನ್ನ ಲೇಖನಗಳು ದೊರೆತರೆ ಮಹಾರಾಜರು ಬೇಕಾದ ದಂಡನೆಯನ್ನು ನನಗೆ ವಿಧಿಸಬಹುದು."

"ಸಾವಂತನ ಲೇಖನ ಸಾಕ್ಷಿಯು ದೊರೆತರೆ?"

"ನನ್ನ ದುರ್ದೈವವು ಏನೇನು ಆಟ ಹೂಡಿದೆಯೋ!"

"ಸಾವಂತನಿಂದ ಬಹುಮಾನ ಪಡೆಯುವ ನಿಮ್ಮ ದೈವವು ದುರ್ದೈವವಲ್ಲ; ಸುದೈವವು. ಸ್ವರಾಜ್ಯಸೇವೆ ಮಾಡಿದರೆ ನಿಮಗೆ ದೊರೆಯಬೇಕಾದುದೇನು? ಮಾತೃಭೂಮಿಯ ಸ್ವಾತಂತ್ರ ರಕ್ಷಣೆಗಾಗಿಯೂ ಸ್ವರಾಜ್ಯ ಸ್ಥಾಪನೆಗಾಗಿಯೂ ಸಹಸ್ರಾವಧಿ ದೇಶಭಕ್ತರು ಆತ್ಮಬಲಿದಾನ ಮಾಡಿದ ಪುಣ್ಯದ ಫಲವನ್ನು ಕೆಲವೊಂದು ಸಾವಿರ ಹಣಕ್ಕೆ ವಿಕ್ರಯಿಸುವಂಥ ಕೃತ್ಯ ಜರುಗಿಸುವ ನಿಮ್ಮಂಥ ಸುದೈವಿಗಳು ಕಡಿಮೆಯೆ?" ಮಹಾರಾಜರು ಹೀಗೆ ನುಡಿದು:— "ಮಾನಾಜಿರಾಯರೆ, ಈ ಪತ್ರವನ್ನು ಎಲ್ಲರೂ ಕೇಳುವಂತೆ ಸ್ಪಷ್ಟ ಓದಿಹೇಳಿರಿ."

ಮಾನಾಜಿರಾಯನು ಪತ್ರವನ್ನು ಕೈಯಲ್ಲಿ ತೆಗೆದುಕೊಂಡು ಓದತೊಡಗಿದನು. ಅದರಲ್ಲಿ ಹೀಗೆ ಬರೆದಿತ್ತು:—

"ಪ್ರಿಯಮಿತ್ರ ಅಮೃತರಾಯರೇ, ನಿಮ್ಮ ಪತ್ರದಂತೆ ಈಗಲೆ ಜಯಗಡ ಕೋಟೆಯ ಮೇಲೆ ದಾಳಿ ಮಾಡುವದು ನನಗೆ ಸಾಧ್ಯವಿಲ್ಲ. ಯಾಕಂದರೆ, ನಿಮ್ಮ ಸೂಚನೆಯಂತೆ ನನ್ನಲ್ಲಿ ಇನ್ನೂ ಹತ್ತುಸಾವಿರ ಸೈನ್ಯವು ಸಿದ್ಧವಾಗಿಲ್ಲ. ಎಲ್ಲ ಸಿದ್ಧತೆಯು ಕೆಲವು ದಿವಸಗಳಲ್ಲಿ ಪೂರ್ತೈಸುವದು. ನಾಳಿನ ಅಮಾ

ವಾಸ್ಯೆಗೆ ನೀವು ದುರ್ಗದ ಹೊರಗಿನ ಚೌಕಿಯಲ್ಲಿ ಬರಬೇಕು. ಆಗ ನಿಮಗೆ ಪಾರಿತೋಷಕದ ಹಣವನ್ನು ಕೊಡುವೆನು. ತರುವಾಯ ಕಟ್ಟಳೆಯ ಮೇರೆಗೆ ದುರ್ಗದ ಮಹಾದ್ವಾರವನ್ನು ತೆರೆಯತಕ್ಕದ್ದು. ನಿಮ್ಮ ಸಂಪತ್ತು ಹಾಗು ಹೆಂಡಿರು-ಮಕ್ಕಳ ರಕ್ಷಣೆಯ ಭಾರವು ನನ್ನ ಮೇಲಿದೆ. ನಿಮಿತ್ತಕ್ಕೆ ನಿಮ್ಮನ್ನು ಸೆರೆಹಿಡಿಯುವೆನು. ನಿಮ್ಮನ್ನು ಬಿಡಿಸಿಕೊಳ್ಳುವಾಗ ನಿಮ್ಮ ಮಹಾರಾಜರಿಂದ ದೊರೆತ ಕಪ್ಪಿನ ಹಣವನ್ನಾದರೂ ನಾನು ನಿಶ್ಚಯವಾಗಿ ನಿಮಗೇ ಸಲ್ಲಿಸುವೆನು. ನಾನು ಹೀಗೆ ಮಾಡಿದರೆ, ನಿಮ್ಮ ವಿಷಯವಾಗಿ ಮಹಾರಾಜರಿಗೆ ಸಂಶಯ ಬರುವದಿಲ್ಲ; ಉಭಯತರ ಕಾರ್ಯಸಾಧನೆಯೂ ಬೇಗ ಆಗುವದು. ಪ್ರೀತಿಯಿರಲಿ. ತಮ್ಮ,

ಫೌಂಡ ಸಾವಂತ"

"ಸುಳ್ಳು ಕಂತೆ!" ಅಮೃತರಾಯನು ಕ್ರೋಧವನ್ನು ಅಭಿನಯಿಸುತ್ತ: "ಯಾವನೋ ದ್ವೇಷಿಯು ಈ ಕಾರಸ್ಥಾನ ರಚಿಸಿರುವನು. ಸಾವಂತರೊಡನೆ ನನ್ನ ಪತ್ರವ್ಯವಹಾರವೇ ಇಲ್ಲ."

"ಮಾನಾಜಿರಾಯರೇ, ಸಾವಂತನು ಮೊದಲು ನಿಮ್ಮ ಸೆರೆಯಾಳಾಗಿದ್ದನು. ಮುಂದೆ ಕಾಣಿಕೆ-ಒಪ್ಪಂದ ಮೊದಲಾದ ವ್ಯವಹಾರ ನಡೆದಾಗ ನೀವು ಅವನ ಸ್ವಾಕ್ಷರ-ಹಸ್ತಾಕ್ಷರಗಳ ಪರಿಚಯ ಹೊಂದಿದವರಾಗಿರುವಿರಿ. ಪರೀಕ್ಷಿಸಿ ನೋಡಿರಿ. ಇವು ಸಾವಂತನ ಅಕ್ಷರಗಳು ಅಲ್ಲವೋ ಹೇಗೆ? ಅಪರಾಧಿಗಾದರೂ ತನ್ನ ಅಭಿಪ್ರಾಯವನ್ನು ಮುಂಡೆ ಮಾಡಲು ಸಂಧಿಕೊಡಲಿಕ್ಕೇ ಬೇಕು" ಎಂದು ಮಹಾರಾಜರು ಶಾಂತಸ್ವರದಿಂದ ನುಡಿದರು.

"ಇವು ಸಾವಂತನ ಅಕ್ಷರಗಳೆಂಬದರಲ್ಲಿ ತಿಲಾಂಶವಾದರೂ ಸಂದೇಹವಿಲ್ಲ. ನನ್ನಲ್ಲಿ ಇಂದಿಗೂ ಅವನ ಹಸ್ತಾಕ್ಷರದ ಕಾಗದ-ಪತ್ರಗಳಿವೆ" ಎಂದು ಮಾನಾಜಿರಾಯನು ಹೇಳಿದನು.

"ನಿಮ್ಮ ಸಾಕ್ಷಿಯಲ್ಲಿ ಮಹಾರಾಜರು ವಿಶ್ವಾಸವಿಟ್ಟರೂ ಇಲ್ಲವೆ ನೀವು ಈ ಪತ್ರದೊಳಗಿನ ಅಕ್ಷರಗಳು ಸಾವಂತನವೇ ಎಂದು ಸಿದ್ಧಪಡಿಸಿದರೂ ನಾನು ಎಂದೂ ದೋಷಿಯೆನಿಸಿಕೊಳ್ಳಲಾರೆನು. ಯಾಕಂದರೆ, ಸಾವಂತನೇ ನನ್ನ ಮೇಲಿನ ದ್ವೇಷಕ್ಕಾಗಿ ಹೀಗೆ ಕಾರಸ್ಥಾನ ರಚಿಸಿರಬಹುದು. ನಾನು ಅವನ ಹಗೆಯಾಗಿರುವದರಿಂದ, ಹೀಗೆ ಘಟನೆಯಾಗುವದು ಅಸಂಭಾವ್ಯವಲ್ಲ" ಎಂದು ಅಮೃತರಾಯನು ಗಂಭೀರತೆ ತಂದುಕೊಂಡು ನುಡಿದನು.

"ಅಪರಾಧಿಯು ಅಭಿಪ್ರಾಯ ವ್ಯಕ್ತಮಾಡಲು ಸ್ವಾತಂತ್ರ್ಯವಿರಲೇ ಬೇಕು. ಅಮೃತರಾಯರೇ, ನಿಮ್ಮ ಅಭಿಪ್ರಾಯದಂತೆ ಕಲ್ಪನೆ ಮಾಡಲು ಸ್ಥಳಾವಕಾಶವಿದೆ; ಆದರೆ ಸಾವಂತನು ಈ ಬಗೆಯ ಮನುಷ್ಯನು ಹೌದೋ ಅಲ್ಲವೋ ಎಂಬದನ್ನು ಪರಿಶೀಲಿಸುವದು ಕರ್ತವ್ಯವಾಗಿದೆ." ಎಂದು ಮಹಾರಾಜರು ನುಡಿದು, ಮಾನಾಜಿರಾಯನನ್ನು ಕುರಿತು:—"ಸರದಾರರೇ, ಫೌಂಡ ಸಾವಂತನು ಈ ಬಗೆಯ ಅಧಮತನ ಮಾಡಬಹುದೆ?"

"ಮಹಾರಾಜರೆ!" ವಿನಯದಿಂದಲೂ ಸೌಮ್ಯವಾಣಿಯಿಂದಲೂ ಮಾನಾಜಿರಾಯನು:—"ಅಮೃತರಾಯರ ಹೇಳಿಕೆಯಂತೆ ಕಾರಸ್ಥಾನವಾಗಿರುವದು ಅಸಂಭವವು. ಸಾವಂತನು ಬಂಡುಗಾರನಿರುವನು. ಬೇಕಾದ ಮಾರ್ಗದಿಂದ ತಮ್ಮ ವಿರೋಧ ಬಳೆಯಿಸಬಹುದು; ಒಡಕು ಹುಟ್ಟಿಸಲು ಯತ್ನಿಸಬಹುದು. ಅವನು ಅಭಿಮಾನಿಯೂ ಯೋಧನೂ ಇರುವನು. ಅಂಥವನು ಸ್ವರಾಜ್ಯಭಕ್ತನೂ ಪ್ರಾಮಾಣಿಕನೂ ಆದ ಒಬ್ಬ ಮನುಷ್ಯನ ಮೇಲಿನ ದ್ವೇಷಕ್ಕಾಗಿ ಇಂಥ ಹೇಸಿತನವನ್ನೆಂದೂ ಮಾಡನೆಂದು ನನ್ನ ವಿಶ್ವಾಸವಿದೆ."

"ನನ್ನ ದುರ್ದೈವ!" ಅಮೃತರಾಯನು ಹಣೆಗೆ ಕೈಹಚ್ಚಿಕೊಂಡು:—"ಮಾನಾಜಿರಾಯರೇ, ತಮ್ಮ ಅಭಿಪ್ರಾಯದಿಂದ ಮೊದಲೇ ವಿಕಲ್ಪಕ್ಕೊಳಗಾದ ಮಹಾರಾಜರ ಮನಸ್ಸಿನ ಮೇಲೆ ಯಾವ ಪರಿಣಾಮವಾಗುವದೆಂಬದರ ಪರಿವೆ ನಿಮಗಿಲ್ಲ"

"ಹಾ! ಅಮೃತರಾಯರೇ, ಬೇರೆಯವರ ಮೇಲೆ ಹಳಿಹಾಯಬೇಡಿರಿ. ನೀವು ಬೇಕಾದ ಹಾಗೆ ನಿಮ್ಮ ಅಭಿಪ್ರಾಯವನ್ನು ಪುಷ್ಟೀಕರಿಸಿರಿ. ನಿಮ್ಮಂತೆ ಇತರರಿಗೂ ತಮ್ಮ ಅಭಿಪ್ರಾಯ ವ್ಯಕ್ತ ಮಾಡಲು ಸ್ವಾತಂತ್ರ್ಯವಿರುವದೆಂಬದನ್ನು ಮರೆಯಬೇಡಿರಿ. ಸ್ವರಾಜ್ಯದಲ್ಲಿ ಮೊಗಲಾಯಿತನದ ಪ್ರವೇಶವೆಂದಿಗೂ ಆಗದೆಂಬದನ್ನು ನೆನಪಿನಲ್ಲಿಟ್ಟು ವರ್ತಿಸಿರಿ. ನಾನು ನಿಮ್ಮ ಅಭಿಪ್ರಾಯವನ್ನು ಆದಷ್ಟುಮಟ್ಟಿಗೆ ಸಮರ್ಥಿಸುವೆನು. ಈ ಪತ್ರವನ್ನು ಸಾವಂತನು ಬುದ್ಧಿಪೂರ್ವಕವಾಗಿ ನನ್ನ ಕೈಯಲ್ಲಿ ಬೀಳುವಂತೆ ಕಳಿಸಿರುವದಿಲ್ಲ. ಇದನ್ನು ನಾನು ಯುಕ್ತಿಯಿಂದ ಸಂಪಾದಿಸಿದ್ದೇನೆ. ಹೇಗಿದ್ದರೂ ಇದರಿಂದ ಪ್ರತ್ಯಕ್ಷ ಅಪರಾಧವು ನಿಮ್ಮ ಮೇಲೆ ಹೊರಲಾರದೆಂದು ಗ್ರಹಿಸುವಾ" ಎಂದು ಮಹಾರಾಜರು ನುಡಿದು:—"ಮಾನಾಜಿರಾಯರೇ, ಇನ್ನು ಈ ಪತ್ರವನ್ನೋದಿರಿ."

"ಪ್ರಿಯ ಮಿತ್ರ ಸಾವಂತರಿಗೆ—ನಾನು ನನ್ನ ಕಟ್ಟಳೆಗಳನ್ನು ಮೊದಲೇ

ತಿಳಿಸಿದ್ದೇನೆ. ನನ್ನ ಕಟ್ಟಳೆಗಳಿಗೆ ಒಪ್ಪಿದರೆ ಮಾತ್ರ ನಾನು ಜಯದುರ್ಗ ವನ್ನು ನಿಮ್ಮ ಸ್ವಾಧೀನಪಡಿಸುವೆನು.

ಮಹಾರಾಜರ ಗುಪ್ತಚಾರರು ಅಲ್ಲಲ್ಲಿ ಸಂಚರಿಸುತ್ತಿರುವ ಮೂಲಕ ಪತ್ರವ್ಯವಹಾರದ ವಿಷಯವಾಗಿ ಒಳ್ಳೇ ದಕ್ಷತೆಯಿರಲಿ. ನಮ್ಮ ಪತ್ರಗಳನ್ನು ತರುವ ನಿಮ್ಮ ಚಾರರು ಒಳ್ಳೆಯ ವಿಶ್ವಾಸದವರಿರಲಿ. ನಾನಾದರೂ ಈ ವಿಷ ಯದಲ್ಲಿ ದಕ್ಷತೆ ವಹಿಸಿದ್ದೇನೆ.

ತಮ್ಮ,

ಅಮೃತರಾಯ"

"ನಿಮ್ಮ ವಿದ್ರೋಹಿಯಾದ ಅಮೃತರಾಯನೊಬ್ಬನು ಎಲ್ಲಿಯಾದರೂ ಇರಬಹುದಲ್ಲವೆ? ಅಥವಾ ನಿಮ್ಮ ಹೆಸರಿನಿಂದ ಯಾವನೊಬ್ಬನು ಈ ಪತ್ರ ಕಳುಹಿಸಿರಬಹುದೆ? ನಿಮ್ಮಂತಹ ಅಕ್ಷರಗಳುಳ್ಳವನು ಈ ಕೃತ್ಯವನ್ನು ಮಾಡಿರ ಬಹುದೆ? ಅಮೃತರಾಯರೆ, ಬಹಳ ಮಾಡಿ ಇದು ನಿಮ್ಮ ಹಸ್ತಾಕ್ಷರದ ಪತ್ರವಾಗಿರಲಿಕ್ಕಿಲ್ಲ" ಮಹಾರಾಜರು ಅಮೃತರಾಯನನ್ನು ಕುರಿತು ನುಡಿದು, ಮಾನಾಜಿರಾಯರಿಗೆ:—"ಆ ಪತ್ರವನ್ನು ಅಮೃತರಾಯರ ಕೈಯಲ್ಲಿ ಕೊಡಿರಿ. ಸ್ವದೇಶಪ್ರೇಮಿಗಳೂ ಮಾತೃಭೂಮಿಯ ಸಲುವಾಗಿ ಆತ್ಮಾರ್ಪಣೆ ಮಾಡಲು ಸಿದ್ಧರಾದವರೂ ಪ್ರಾಮಾಣಿಕರೂ ಆದವರ ಮೇಲೆ ಜಗತ್ತು ಎಂಥ ಎಂಥ ಕಾರಸ್ಥಾನ ರಚಿಸಿ, ಅವರ ಹಾನಿಮಾಡತೊಡಗಿರುವದೆಂಬುದಾದರೂ ಸಿದ್ಧ ವಾಗಲಿ."

"ಮಹಾರಾಜರೇ! ಕ್ಷಮಿಸಿರಿ. ಜಡಸ್ವಾರ್ಥಕ್ಕೊಳಪಟ್ಟ ನನ್ನಿಂದ ಈ ಅಪರಾಧ ಘಟಿಸಿದೆ. ನಾನು ಇಂಥ ಹೀನ ಕಾರ್ಯ ಮಾಡಬಾರದಾಗಿತ್ತು. ಸ್ವಾರ್ಥವು ವಿವೇಕವನ್ನೇ ಹಾಳು ಮಾಡುತ್ತಿದೆ" ಅಮೃತರಾಯನು ಮಹಾ ರಾಜರ ಪಾದಗಳನ್ನು ಹಿಡಿದು ದೈನ್ಯದಿಂದ ಬೇಡಿಕೊಂಡನು.

ಮಹಾರಾಜರು ಅವನನ್ನು ಹಿಡಿದೆಬ್ಬಿಸಿ:—"ಅಷ್ಟೊಂದು ವಿನಂತಿ ಮಾಡಿಕೊಳ್ಳುವ ಕಾರಣವಿಲ್ಲ. ಅಮೃತರಾಯರೇ, ನಾವಿಲ್ಲದಿದ್ದರೆ ನಿಮಗೆ ಸಾವಂತಸಿದ್ದಾನೆ; ಆದಿಲಶಹನಿದ್ದಾನೆ. ಅನಂತ ಸ್ವದೇಶಭಕ್ತರ ಆತ್ಮಬಲಿ ದಾನದಿಂದ ಸಿದ್ಧವಾದ ಸ್ವರಾಜ್ಯಮಂದಿರವನ್ನು ಉಧ್ವಸ್ತಗೊಳಿಸಿ, ಅತ್ಯಲ್ಪ ವಾದ ಸ್ವಾರ್ಥಸಾಧಿಸುವ ನಿಮ್ಮ ವೃತ್ತಿಯು ಎಂಥದೆಂಬದನ್ನು ನೀವೇ ಯೋಚಿಸಿರಿ. ನಿಮ್ಮಂತಹ ಜನರು ಎಂದಿನಿಂದಲೂ ನಮ್ಮ ಮಾತೃಭೂಮಿ ಯಲ್ಲಿ ಉದಯಹೊಂದುತ್ತಿರುವದು ಹಿಂದುಗಳಾದ ನಮ್ಮ ದುರ್ದೈವ!

ನಿಮಗೆ ಏನೆಂದರೇನಾಗಬೇಕಾಗಿದೆ?" ಎಂದು ಮಹಾರಾಜು ನುಡಿದು, ಸೇವಕರನ್ನು ಕುರಿತು :—" ಇವರಿಗೆ ಬಲವಾದ ಶೃಂಖಲೆಗಳನ್ನು ತೊಡಿಸಿ ಸೆರೆಮನೆಯಲ್ಲಿರಿಸಿರಿ. ಇವರ ಅಪರಾಧದ ವಿಚಾರಣೆಯನ್ನು ನಾಳೆ ಮಾಡೋಣ."

"ಇಂಥ ವಿದ್ರೋಹಿಗಳಿಗೆ ದೇಹಾಂತಶಾಸನವೇ ಯೋಗ್ಯವು!" ಎಂದು ಮಾನಾಜಿರಾಯನು ಸಂತಪ್ತವಾಣಿಯಿಂದ ನುಡಿದನು.

"ನಿಜವು; ನನ್ನಂಥ ಮಾತೃಘಾತಕಿಗೆ ಅಂಥ ಪ್ರಾಯಶ್ಚಿತ್ತವೇ ಯೋಗ್ಯವು" ಎಂದು ಅಮೃತರಾಯನು ನುಡಿದು, ದೈನ್ಯದಿಂದ ಮಹಾರಾಜರನ್ನು ಕುರಿತು:—"ನನ್ನಿಂದ ಅಪರಾಧವಾಗಿದೆ. ನನ್ನ ಕೃತ್ಯಕ್ಕಾಗಿ ಪಶ್ಚಾತ್ತಾಪವು ಹುಟ್ಟಿದೆ. ಇನ್ನು ಮೇಲೆ ನನ್ನಿಂದ ಇಂಥ ಕೆಲಸಗಳು ಪ್ರಾಣವಿರುವವರೆಗೂ ಜರಗುವದಿಲ್ಲವೆಂದು ಪ್ರಮಾಣಪೂರ್ವಕವಾಗಿ ಹೇಳುವೆನು. ಮಹಾರಾಜರೆ, ನನ್ನನ್ನು ಇದೊಂದು ಬಾರಿ ಕ್ಷಮಿಸಿರಿ."

"ನೀವು ಕ್ಷಮಾರ್ಹರಿರುವಿರೆಂಬದನ್ನು ನೀವೇ ಸಿದ್ಧಪಡಿಸಿರಿ. ನೀಚಮಾನವನ ದುಷ್ಟ ಸ್ವಭಾವಕ್ಕನುಗುಣವಾದ ಕೃತ್ಯವು ನಿಮ್ಮಿಂದ ಘಟಿಸಿದೆ. ನೀವು ಒಮ್ಮೆಲೆ ಅಪರಾಧವನ್ನೊಪ್ಪಿ ಪಶ್ಚಾತ್ತಾಪಬುದ್ಧಿಯ ಪ್ರದರ್ಶನ ಮಾಡಿದ್ದರೆ ಎಷ್ಟಾದರೂ ದಯೆಯನ್ನು ತೋರಿಸಲು ಸಾಧ್ಯವಿತ್ತು. ವೈರಿಯನ್ನುಳಿಸಿಕೊಳ್ಳಲು ಮಾರ್ಗ ದೊರೆಯದಾದ ಮೇಲೆ ನೀವು ಅನಿವಾರ್ಯಕ್ಕಾಗಿ ಒಪ್ಪಿಗೊಟ್ಟಿರಿ. ಸ್ವರಾಜ್ಯಸೇವೆಯಂಥ ಪುಣ್ಯತಮವಾದ ಕಾರ್ಯದಲ್ಲಿ ತೊಡಗಿ, ಇಂಥ ನೀಚವೃತ್ತಿಯನ್ನು ತೋರಿಸುವದು ಎಂತಹ ಪಾತಕವೆಂಬದನ್ನು ನೀವೇ ಲೆಕ್ಕ ಹಾಕಿ ತಿಳಿದುಕೊಳ್ಳಿರಿ. ಅಧಮವೃತ್ತಿಯವರಾದ ನಿಮ್ಮಲ್ಲಿ ಪಶ್ಚಾತ್ತಾಪಬುದ್ಧಿಯು ಹುಟ್ಟಿರುವದೆಂದು ಭಾವಿಸಲು ಎಡೆಯಿಲ್ಲ. ಕೆಲವು ಸಾವಿರ ರೂಪಾಯಿಗಳಿಗಾಗಿ ನೀವು ಮಾತೃಭೂಮಿಯ ಸ್ವಾತಂತ್ರ್ಯವನ್ನು ಮಾರಲೊಪ್ಪಿದಿರಿ; ಒಂದು ವೇಳೆ ವೈರಿಗಳು ನಿಮ್ಮನ್ನು ಒಂದು ಪ್ರಾಂತದ ಒಡೆಯರನ್ನೇ ಮಾಡಿದ್ದಾದರೆ ಮಾತೃಮೂರ್ತಿಯಾದ ಭಾರತಮಾತೆಯ ಕತ್ತನ್ನು ಹಿಚುಕಲು ಕೂಡ ನೀವು ಹಿಂದುಮುಂದೆ ನೋಡುವವರಲ್ಲ. ಆದ್ದರಿಂದ ನ್ಯಾಯಸಮ್ಮತವಾಗಿಯೇ ನಿಮ್ಮ ಅಪರಾಧದ ತೀರ್ಮಾನ ಮಾಡಬೇಕಾಗಿದೆ; ಹಾಗೆ ಮಾಡದಿದ್ದರೆ ನಾನು ದೋಷಿಯಾಗುವೆನು."

"ದಯಾಸಾಗರ ಮಹಾರಾಜರೆ, ನೀವು ನನಗೆ ಮರಣ ದಂಡನೆಯನ್ನು ವಿಧಿಸಬಾರದು. ನನ್ನ ತರುವಾಯ ನನ್ನ ಹೆಂಡಿರು-ಮಕ್ಕಳನ್ನು ರಕ್ಷಿಸುವವರು

ಈ ಜಗತ್ತಿನಲ್ಲಿ ಯಾರೂ ಇಲ್ಲ; ನನ್ನ ಮೇಲಲ್ಲದಿದ್ದರೂ ನನ್ನ ದೀನ ಮನೆತನದ ಕಡೆಗಾದರೂ ಲಕ್ಷ್ಯಗೊಟ್ಟು ಜೀವದಾನ ಕೊಡಿರಿ."

"ನೀವು ನಿಮ್ಮ ಹೆಂಡಿರು-ಮಕ್ಕಳ ಕಡೆಗೇ ನೋಡುವಿರಿ. ಈ ಸ್ವರಾಜ್ಯದಲ್ಲಿ ನಿಮ್ಮಂತಹ ಕುಟುಂಬಗಳೆಷ್ಟು ಇರುವದಿಲ್ಲ? ಅವರೆಲ್ಲರ ಕಡೆಗೆ ನೀವು ತಿಲಾಂಶವಾದರೂ ನೋಡಿದಿರಾ? ನಿಮ್ಮದೊಂದು ಕುಟುಂಬದ ರಕ್ಷಣೆಗಾಗಿ, ಲಕ್ಷಗಟ್ಟಲೆ ಕುಟುಂಬಗಳ ಕೊರಳು ಕೊಯ್ಯುವದಕ್ಕೆ ಯಾವ ಅಡ್ಡಿಯೂ ಇಲ್ಲವೆಂದು ನಿಮ್ಮ ಸಿದ್ಧಾಂತವಿರುವದೇನು?"

"ಒಬ್ಬ ಸಾಮಾನ್ಯ ಸೇವಕನ ಕೆಲಸಕ್ಕಾದರೂ ಹಚ್ಚಿ ನನ್ನನ್ನು ಜೀವಂತವಾಗಿ ಉಳಿಸಿರಿ."

"ನಿಮ್ಮಂಥವರನ್ನು ಜೀವಂತ ಉಳಿಸುವದು ಮಹಾ ಪಾತಕವಿದ್ದುದರಿಂದ ನ್ಯಾಯವು ನಿಮಗೆ ಮರಣದಂಡಣೆಯನ್ನೇ ವಿಧಿಸುತ್ತದೆ. ಅದಕ್ಕೆ ನಾನೇನು ಮಾಡಲಿ?"

"ಮಹಾರಾಜರೇ, ನಾನು ಅಂಥ ಕೆಟ್ಟ ಮನುಷ್ಯನೆಂದು ಭಾವಿಸಬೇಡಿರಿ. ನನ್ನ ಹೆಂಡತಿಯು ಅಲಂಕಾರಗಳ ಮೇಲೆ ಬಹಳೇ ಲೋಭಿಯು. ಅವಳ ಆ ಇಚ್ಛೆಯನ್ನು ಪೂರೈಸುವದಕ್ಕಾಗಿ ನಾನು ಇಂಥ ಕೆಲಸ ಮಾಡಬೇಕಾಯಿತು."

"ಇರಬಹುದು; ಆದರೆ ಮಾಡುವದೇನು? ನನ್ನ ನ್ಯಾಯದ ಅಧಿಷ್ಠದೇವತೆಯಾದ ಜಗದಂಬೆಗೆ ವಿದ್ರೋಹಿಗಳ ರಕ್ತಪಿಪಾಸೆ ಬಹಳ. ಅಂಥವರನ್ನು ಹಾಗೆಯೆ ಬಿಟ್ಟರೆ, ಸ್ವರಾಜ್ಯ ಸಂಸ್ಥಾಪನೆಗೆ ಅಯೋಗ್ಯನೆಂದು ಆಕೆ ನನ್ನ ಮೇಲೆ ರುಷ್ಟಳಾಗುವಳು. ಇದಕ್ಕೇನು ಹೇಳುವಿರಿ? ನಿಮ್ಮ ಪತ್ನಿಯ ಅಲಂಕಾರದ ಇಚ್ಛೆಯನ್ನು ಪೂರೈಸುವದಕ್ಕಾಗಿ ನಿಮಗೆ ಒಂದು ದುರ್ಗವನ್ನು—ಸ್ವರಾಜ್ಯದ ಮಹಾದ್ವಾರವನ್ನು—ಶತ್ರುಸಮರ್ಪಣೆ ಮಾಡಬೇಕಾಯಿತು; ಆದರೆ ಮಾತೃಸಮಾನವಾದ ಸ್ವರಾಜ್ಯದ ಸ್ವಾತಂತ್ರ್ಯದ ಇಚ್ಛೆಯನ್ನು ಪೂರೈಸುವದಕ್ಕಾಗಿ ನಾನು ನಿಮ್ಮದೊಂದು ಪ್ರಾಣವನ್ನಾದರೂ ಬಲಿಕೊಡಲು ಬೇಡವೇ? ಭಾರತಮಾತೆಯ ಇಚ್ಛೆಗಿಂತಲೂ ನಿಮ್ಮ ಪತ್ನಿಯ ಇಚ್ಛೆಯೇ ದೊಡ್ಡದೆಂದು ನಿಮಗೆ ಕಾಣುತ್ತಿರುವದು ನಿಜ; ಆದರೆ ನನಗೆ ಹಾಗೆ ತೋರುವದಿಲ್ಲವಾದ್ದರಿಂದ ನಿಮ್ಮ ಬಲಿಯೇ ಸಿದ್ಧವು."

ಅಮೃತರಾಯನು ನಿರಾಶೆಗೊಂಡನು. ಎದೆಯು ಹಡದಡನೆ ಹಾಕತೊಡಗಿತು. ಪ್ರಾಣಾಂತಿಕ ವೇದನೆಗಳು ಈಗಾಗಲೆ ಆಗತೊಡಗಿದವು.

ಅವನು ಅತ್ಯಂತ ಕರುಣಾಜನಕ ವಾಣಿಯಿಂದ:—"ಮಹಾರಾಜರೆ, ನನ್ನ ಕೊನೆಯ ಎರಡು ಮಾತು ಕೇಳಿರಿ. ನನ್ನ ಸಲುವಾಗಿಯಲ್ಲದಿದ್ದರೂ ಸ್ವರಾಜ್ಯದ ಹಿತದ ಸಲುವಾಗಿಯಾದರೂ ಕೇಳಿರಿ. ನಾನು ಹೇಳುವ ಮಾತಿನಿಂದ ಸ್ವರಾಜ್ಯ ಹಿತವು ಸಾಧಿಸುವದೆಂಬದು ಸಿದ್ಧವಾದರೆ ನನ್ನ ಪ್ರಾಣವನ್ನು ಮಾತ್ರ ಉಳಿಸಿರಿ. ಉಳಿದ ಬೇಕಾದಂತಹ ಶಾಸನಕ್ಕಾದರೂ ನಾನು ಸಿದ್ಧನಿರುವೆನು."

"ಒಳ್ಳೇದು. ನೀವು ಹೇಳುವದಾದರೂ ಏನು? ನಿಮ್ಮ ಅಭಿಪ್ರಾಯವು ಸ್ವರಾಜ್ಯದ ಹಿತಮಾಡುವಂತಹದೆಂದು ಸಿದ್ಧವಾದರೆ ನಿಮಗೆ ಮರಣದಂಡನೆಯು ಮಾತ್ರ ವಿಧಿಸಲ್ಪಡುವದಿಲ್ಲ."

"ಮಹಾರಾಜರೆ, ಸಾವಂತನಿಗೆ ನಾನು ಪತ್ರ ಕಳಿಸಿದರೆ ಅವನು ನಾಳಿನ ಅಮಾವಾಸ್ಯೆಯ ದಿನ ಜಯಗಡ ದುರ್ಗದ ಬಳಿಯಲ್ಲಿ ಬರುವನು. ನೀವು ಸೈನ್ಯ ತೆಗೆದುಕೊಂಡು ಮುಂದಾಗಿಯೆ ಅಲ್ಲಿದ್ದ ಅರಣ್ಯದಲ್ಲಿ ಗುಪ್ತವಾಗಿದ್ದು, ಅವನ ಸೈನ್ಯ ಬಂದೊಡನೆಯೆ ದಾಳೀ ಮಾಡಿ ಅವನನ್ನು ಪರಾಭವಗೊಳಿಸಬೇಕು. ಸಾಮರ್ಥ್ಯ ಪ್ರಕಟ ಮಾಡದೆ ನನ್ನಂಥ ಆಶೆಬುರುಕನಿಗೆ ಧನಲಾಲಸೆ ತೋರಿಸಿ ಕಾರ್ಯ ಸಾಧನೆ ಮಾಡಲು ಯತ್ನಿಸುವ ಸಾವಂತನಿಗೆ ಈ ವಿಧದ ಪ್ರತೀಕಾರ ಮಾಡುವದು ಪಾತಕವೆನಿಸದು."

"ನಿಮ್ಮ ಪಾಪಪುಣ್ಯ ವಿಚಾರವು ಇಷ್ಟು ಪ್ರಬಲವಿದ್ದರೂ ಮಾತೃದ್ರೋಹ ಬಗೆದಿರಿ. ನಿಮಗೆ ಏನನ್ನಬೇಕೋ ತಿಳಿಯದಾಗಿದೆ. ನಾವು ನಿಮ್ಮ ಸಲಹೆಯಂತೆ ಕಾರ್ಯ ಮಾಡಬಹುದು. ಯಾಕಂದರೆ ರಾಜಕಾರಣದಲ್ಲಿ ನಾವು ಹಾಗೆ ಮಾಡಿದರೆ ಅದು ಪಾತಕವೆನಿಸದು; ಆದರೆ ನಂಬಿದ ಮನುಷ್ಯನ ಕೊರಳು ಕೊಯ್ಯುವಂಥ ಅಪರಾಧವು ನಿಮ್ಮಿಂದ ಘಟಿಸುತ್ತಲಿದೆ. ಇದಕ್ಕೇನು ನಿಮ್ಮ ಉತ್ತರವು?"

"ಮಹಾರಾಜರೆ, ನನ್ನ ಈ ಪಾಪಕ್ಕಾಗಿ ಪ್ರಾಯಶ್ಚಿತ್ತ ವಿಧಿಸುವ ಅಧಿಕಾರ ನಿಮ್ಮದಲ್ಲ. ದೇವರು ನನಗೆ ಬೇಕಾದ ಶಾಸನ ಮಾಡಲೊಲ್ಲನೇಕೆ. ನಾನು ನನ್ನ ಪ್ರಾಣರಕ್ಷಣೆಗಾಗಿ ಈ ಪಾತಕವನ್ನು ಮಾಡಲೇ ಬೇಕಾಗಿದೆ."

"ನಿಮ್ಮ ಯಾವ ಮಾತುಗಳನ್ನಾದರೂ ನಿಜವೆಂದು ಭಾವಿಸುವದೇ ಭಯವೆನಿಸಹತ್ತಿದೆ. ಯಾಕಂದರೆ ನೀವು ಹೊತ್ತು ಬಂದಂತೆ ಕೊಡೆಹಿಡಿಯುವಿರಿ."

"ಜಗದಂಬೆಯು ಸಾಕ್ಷಿಯಾಗಿ ಈ ಮಾತಿನಲ್ಲಿ ಅಸತ್ಯವಿಲ್ಲ. ನನ್ನ ಮಾತಿನ ನಂಬಿಗೆಯಾಗುವವರೆಗೆ ನಾನು ನಿಮ್ಮ ಸೆರೆಯಾಳಾಗಿಯೆ ಇರುವೆನು.

ನಂಬಿಗೆಯಾದ ಮೇಲೆ ನನ್ನನ್ನು ಮುಕ್ತಗೊಳಿಸಿರಿ."

"ನಂಬಿಗೆಯಾದ ಮೇಲೆ ನಿಮ್ಮನ್ನು ಸೆರೆಯಿಂದ ಮುಕ್ತಗೊಳಿಸುವೆ ನೆಂದು ಅಭಿವಚನ ಕೊಡಲಾರೆನು. ನೀವು ಹೇಳುತ್ತಿರುವ ಮಾತುಗಳು ನಿಜ ವೆಂದು ತಿಳಿದ ಮೇಲೆ ಮಾತ್ರ ನಿಮಗೆ ಮರಣದಂಡನೆ ಮಾತ್ರ ವಿಧಿಸಲ್ಪಡುವ ದಿಲ್ಲವೆಂಬದು ನಿಶ್ಚಯ." ಎಂದು ಮಹಾರಾಜರು ನುಡಿದು—"ಮಾನಾಜಿ ರಾಯರೆ, ಅಮೃತರಾಯರು ಹೇಳಿದಂತೆ ಕೆಲಸ ಮಾಡಬಹುದಷ್ಟೆ?"

"ಏನೂ ಅಡ್ಡಿಯಿಲ್ಲ; ಸಾವಂತನು ಸ್ವರಾಜ್ಯದ ಕಟ್ಟಾ ನಿಷ್ಠೆಯ ವೈರಿಯಾಗಿರು ವನು. ಚತುರೋಪಾಯಗಳಿಂದ ನಾವು ಕಾರ್ಯಸಾಧನೆ ಮಾಡಬೇಕು. ಅಮೃತರಾಯರಿಂದ ಪತ್ರ ಬರೆಯಿಸಿ ಅವರ ಸೇವಕನಿಂದಲೆ ಅದನ್ನು ಕಳುಹಿಸ ಬೇಕು." ಎಂದು ಮಾನಾಜಿರಾಯನು ಸಲಹೆ ಕೊಟ್ಟನು.

"ಒಳ್ಳೇದು. ನೀವು ಅಮೃತರಾಯರಿಂದ ಪತ್ರಬರೆಯಿಸಿ ಸಾವಂತನ ಕಡೆಗೆ ಕಳುಹಿಸುವ ವ್ಯವಸ್ಥೆ ಮಾಡಿರಿ." ಎಂದು ಮಹಾರಾಜರು ಹೇಳಿದರು.

ಮಾನಾಜಿರಾಯನು ಅಮೃತರಾಯನಿಂದ ಪತ್ರ ಬರೆಯಿಸಿ ಅವನ ಸೇವ ಕನ ಕೈಯಲ್ಲಿ ಕೊಟ್ಟು ಸಾವಂತನ ಕಡೆಗೆ ಕಳುಹಿಸಿದನು. ಅನಂತರದಲ್ಲಿ ಮಹಾರಾಜರ ಆಜ್ಞೆಯಮೇರೆಗೆ ಸೇವಕರು ಅಪರಾಧಿಯಾದ ಅಮೃತರಾಯ ನನ್ನು ಸೆರೆಮನೆಗೆ ಕರೆದೊಯ್ದರು.

ತರುವಾಯ ಹಂಬೀರರಾಯನು ಎದ್ದು ನಿಂತು ಕೈ ಜೋಡಿಸಿ-"ಮಹಾ ರಾಜರೆ, ಮುಂದಿನ ದಾಳಿಯಲ್ಲಿ ಭಾಗ ತೆಗೆದುಕೊಳ್ಳಲಿಕ್ಕೆ ನನಗೆ ಆಜ್ಞೆ ದೊರೆ ಯಬೇಕು."

ಹಂಬೀರರಾಯನ ಹುರುಪನ್ನು ನೋಡಿ ಮಹಾರಾಜರಿಗೆ ಸಂಭ್ರಮವಾ ಯಿತು. ಆಗ ಅವರು ನಸುನಗುತ್ತ:—"ನಿಮ್ಮ ತಾಯಿಯವರು ಈಗಲೆ ದಂಡಯಾತ್ರೆಗೆ ಅಪ್ಪಣೆ ಕೊಡುವರೆ?"

"ಕಾಕಾಸಾಹೇಬರು ಹೇಳಿದರೆ ಅವರು ಒಪ್ಪಿಗೆ ಕೊಡುವರು.

"ಮಾನಾಜಿರಾಯರ ಪಥಕದಲ್ಲಿಯೇ ನೀನು ಕೆಲಸ ಮಾಡುತ್ತಿರುವದ ರಿಂದ ನಿಮ್ಮ ತಾಯಿಯವರಾದರೂ ಒಪ್ಪುವರೆಂಬ ಭರವಸೆ ನನಗುಂಟು. ಆದರೂ ಈ ವಿಷಯದಲ್ಲಿ ಅವರ ಮನಃಪೂರ್ವಕ ಅಭಿಪ್ರಾಯವನ್ನು ಕೇಳಲೇ ಬೇಕು."

"ಸದ್ಯದ ಸಾವಂತನ ಪ್ರಕರಣದ ಪರಿಷ್ಕಾರವಾಗಲಿ. ಅನಂತರದಲ್ಲಿ

ಜಯಾಬಾಯಿಯವರ ಅಭಿಪ್ರಾಯ ತಿಳಿದುಕೊಂಡು ಇವನನ್ನು ರಾಜಗಡಕ್ಕೆ ಕರೆಯಿಸಿಕೊಳ್ಳೋಣ ಈಗಲೆ ಕರೆದುಕೊಂಡು ಹೋಗಬಹುದೆಂದು ಅವರು ಹೇಳಿದರೆ ಹಾಗೆ ಮಾಡಲಿಕ್ಕೂ ಅಡ್ಡಿಯಿಲ್ಲ." ಎಂದು ಮಾನಾಜಿ ರಾಯನು ಮಹಾರಾಜರಿಗೆ ಹೇಳಿದನು.

ಹಂಬೀರರಾಯನಿಗೆ ಪರಮಾನಂದವಾಯಿತು. ಸಂಧ್ಯಾಸಮಯವಾದುದರಿಂದ ಮಹಾರಾಜರೂ ಮಾನಾಜಿರಾಯನೂ ಹಂಬೀರರಾಯನೂ ದೇವೀ ನದಿಯ ತೀರಕ್ಕೆ ತಿರುಗಾಡಲು ಹೊರಟರು.

---

## ೧೦ ಹೆಣ್ಣು ಅಂದರೆ ಹುಣ್ಣು.

ಹಂಬೀರರಾಯನಂಥ ತೇಜಸ್ವಿಯಾದ ತರುಣನು ಸ್ವರಾಜ್ಯಸೇವೆಗಾಗಿ ದೊರೆತದ್ದರಿಂದ ಮಹಾರಾಜರಿಗೆ ಬಹಳೇ ಆನಂದವಾಗಿತ್ತು. ಅವರು ಜಯಾಬಾಯಿಯನ್ನು ಒಪ್ಪಂಬಡಿಸಿ ಆದಷ್ಟು ಬೇಗನೆ ಅವನನ್ನು ಕಾರ್ಯಪ್ರವೃತ್ತನನ್ನಾಗಿ ಮಾಡಬೇಕೆಂದು ಯೋಚಿಸಿದರು. ಹಂಬೀರರಾಯನನ್ನು ಅವನ ಆಪ್ತಸಂಬಂಧಿಕನಾದ ಮಾನಾಜಿರಾಯನ ಕೈಕೆಳಗೆ ಕೊಡಬೇಕೆಂದು ಮಹಾರಾಜರ ಮನಸ್ಸಿತ್ತು. ಮಾನಾಜಿರಾಯನಾದರೂ ಸಂತೋಷದಿಂದ ಈ ಮಾತಿಗೆ ಒಪ್ಪಿದ್ದನು. ಯುದ್ಧಾನುಭವವಿಲ್ಲದಂಥ ಮಗನನ್ನು ಒಮ್ಮೆಲೆ ದಂಡಯಾತ್ರೆಗೆ ಕಳಿಸಲು ಜಯಾಬಾಯಿಯು ಒಪ್ಪುವಳೋ ಇಲ್ಲವೋ ಎಂಬ ಸಂದೇಹವು ಮಾತ್ರ ಮಹಾರಾಜರನ್ನು ಬಾಧಿಸುತ್ತಿತ್ತು. ಯಾಕಂದರೆ ಹಂಬೀರರಾಯನು ಚಿಕ್ಕವನು, ಜಯಾಬಾಯಿಯ ಏಕಮಾತ್ರ ಪುತ್ರನು. ಆದುದರಿಂದ ತಾವೇ ಅವಳ ಮನೋಗತವನ್ನು ಅರಿತುಕೊಳ್ಳಲೇಬೇಕೆಂದು ಮಹಾರಾಜರು ಯೋಚಿಸಿದರು.

ಮಹಾರಾಜರು ತಮ್ಮ ಪರಿವಾರದೊಡನೆ ಊಟ-ಉಡಿಗೆ ತೀರಿಸಿಕೊಂಡು ಪ್ರಯಾಣ ಬೆಳೆಯಿಸುವವರಿದ್ದುದರಿಂದ ಜಯಾಬಾಯಿಯು ಅಡಿಗೆಯ ವ್ಯವಸ್ಥೆ ಮಾಡಿಸುವದರಲ್ಲಿ ತೊಡಗಿದ್ದಳು. ಅವಳ ಕೆಲಸಕ್ಕೆ ಆತಂಕವುಂಟಾಗಬಾರದೆಂದು ಮಾನಾಜಿರಾಯನೂ ಮಹಾರಾಜರೂ ಹಂಬೀರರಾಯನೊಡನೆ ಅಡಿಗೆಯ ಮನೆಗೇ ಹೋದರು. ಮಹಾರಾಜರು ಬಂದದ್ದು ನೋಡಿ ಜಯಾಬಾಯಿಗೆ ಆಶ್ಚರ್ಯವಾಯಿತು. ಅವಳು ಮಹಾರಾಜರಿಗೂ ಮಾನಾಜಿರಾಯನಿಗೂ ಮಣೆಗಳನ್ನು ಹಾಕಿ ಕುಳಿರಿಸಿದಳು. ಹಂಬೀರರಾಯನು ಮಾನಾಜಿ

ರಾಯನ ಬಳಿಯಲ್ಲಿ ನೆಲದ ಮೇಲೆಯೇ ಕುಳಿತುಕೊಂಡನು. ಅನಂತರದಲ್ಲಿ ಮಹಾರಾಜರು ಜಯಾಬಾಯಿಯನ್ನು ಕುರಿತು:—"ಜಯಾಬಾಯಿಯವರೆ, ಎರಡು ದಿನ ನಮ್ಮ ಆತಿಥ್ಯ ಮಾಡುವಾಗ ನೀವು ಬಹಳೇ ಪರಿಶ್ರಮ ವಹಿಸಿದಿರಿ. ನಿಮ್ಮ ಆತಿಥ್ಯದ ಮಾದರಿ ನೋಡಿ ನಾನು ಸಂತುಷ್ಟನಾದೆನು. ದುರ್ದೈವದಿಂದ ನೀವು ಜಹಾಗೀರಿಯನ್ನು ಕಳಕೊಂಡಿದ್ದರೂ, ನಿಮ್ಮ ವ್ಯವಸ್ಥೆಯು ಜಹಗೀರದಾರಿಯ ವ್ಯವಸ್ಥೆಯನ್ನೇ ಹೋಲುತ್ತಿದೆ."

ಮಹಾರಾಜರ ಪ್ರಶಂಸೆಯಿಂದ ಜಯಾಬಾಯಿಯು ಹಿಗ್ಗಿದಳು. ಆದರೂ ಆಗ ಅವಳಿಗೆ ತನ್ನ ಗತವೈಭವದ ನೆನಪಾಗಿ ಪರಕ್ಷಣದಲ್ಲಿ ಕಣ್ಣುಗಳು ನೀರಿನಿಂದ ತುಂಬಿದವು. ಮಹಾರಾಜರಿಗೆ ಅವಳ ಮನೋದಯವು ತಿಳಿಯದೆ ಇರಲಿಲ್ಲ. ಅವರು ಅವಳನ್ನು ಸಾಂತ್ವನಗೊಳಿಸುವದಕ್ಕಾಗಿ: –"ಜಯಾಬಾಯಿಯವರೆ, ನೀವು ಚಿಂತಿಸಬೇಡಿರಿ. ನಿಮ್ಮ ಪುತ್ರನಾದ ಈ ಹಂಬೀರರಾಯನು ತಂದೆಗಿಂತಲೂ ಪ್ರತಿಭಾಸಂಪನ್ನನಿರುವನು. ಇವನು ಗತವೈಭವವನ್ನು ಸಂಪಾದಿಸುವದಲ್ಲದೆ ಅದನ್ನು ಹೆಚ್ಚಾಗಿ ಅಭಿವೃದ್ಧಿಗೊಳಿಸುವನು. ಅಂಥ ವೈಭವದ ಕಾಲವನ್ನು ನೀವು ಬೇಗನೆ ಕಾಣುವಿರಿ."

ಜಯಾಬಾಯಿಯು ಮಹಾರಾಜರ ಆಶ್ವಾಸನರೂಪವಾದ ವಾಣಿಯಿಂದ ಸಂಭ್ರಮಗೊಂಡು:—"ಎಲ್ಲವೂ ತಮ್ಮ ಕೃಪೆ!" ಎಂದು ಉದ್ಗಾರ ತೆಗೆದಳು.

ಅನಂತರದಲ್ಲಿ ಮಾನಾಜಿರಾಯನು:-"ಜಯಾಬಾಯಿಯವರೆ, ಹಂಬೀರರಾಯನನ್ನು ಸ್ವರಾಜ್ಯ ಸೇವೆಗಾಗಿ ಕಳುಹಿಸಲು ನೀವು ಮನಃಪೂರ್ವಕವಾಗಿ ಒಪ್ಪುವಿರಲ್ಲವೆ?"

"ಮಾನಾಜಿರಾಯರೆ! ಇವನು ನನ್ನ ಮಗನಲ್ಲ, ನಿಮ್ಮ ಮಗನು ಎಂದು ಮೊದಲೇ ಹೇಳಿದ್ದೇನೆ. ನನಗೆ ಯಾವದು ಬೇಕಾಗಿತ್ತೋ ಅದನ್ನೆ ತಾವು ಹೇಳುವಿರಿ. ರೋಗಿ ಬಯಸಿದ್ದೂ ಅದೇ. ವೈದ್ಯ ಹೇಳಿದ್ದೂ ಅದೇ. ನಮ್ಮ ಹಂಬೀರನಿಂದ ಸ್ವರಾಜ್ಯಸೇವೆ ಘಟಿಸುತ್ತ ಹೋದರೆ ಅದೊಂದು ನನಗೆ ಆನಂದದ ಸಂಗತಿಯಾಗಿದೆ."

"ಶಾಬಾಸ್! ನೀವು ವೀರ ಮಾತೆಯರಿರುವಿರಿ. ನೀವು ನಿಮ್ಮ ಶೀಲಕ್ಕೆ ಸರಿಯಾಗಿ ಮಾತಾಡಿದಿರಿ." ಎಂದು ಮಹಾರಾಜರು ನುಡಿದು ಹಂಬೀರರಾಯನ ಕವಚ-ಖಡ್ಗಗಳಿಗಾಗಿ ಒಪ್ಪಿಗೆ ಕೊಟ್ಟ ಮೇರೆಗೆ ಐದು ನೂರು ರೂಪಾಯಿಗಳ ಚೀಲವನ್ನು ಮಾನಾಜಿರಾಯನ ಕೈಯಲ್ಲಿ ಕೊಟ್ಟು:—"ಇದನ್ನು

ಹಂಬೀರರಾಯನ ಸ್ವಾಧೀನ ಮಾಡಿರಿ."

ಮೊನಾಜಿರಾಯನು ಹಣವನ್ನು ಹಂಬೀರರಾಯನಿಗೆ ಕೊಟ್ಟು:--"ನಿನ್ನ ಜಮಾದಾರಿಕೆಯ ವಸ್ತ್ರ-ಶಸ್ತ್ರಗಳಿಗಾಗಿ ಈ ಹಣವನ್ನು ಮಹಾರಾಜರು ದಯ ಪಾಲಿಸಿದ್ದಾರೆ. ನಿನಗೆ ಯೋಗ್ಯವಾದ ರೀತಿಯಲ್ಲಿ ಎಲ್ಲ ಒಡವೆಗಳನ್ನು ಸಿದ್ಧ ಮಾಡಿಸಿಕೋ."

ಹಂಬೀರರಾಯನೂ ಜಂಬೂಬಾಯಿಯೂ ಆನಂದಗೊಂಡರು. ಮಹಾರಾಜರು ಕೊಟ್ಟ ಹಣವನ್ನು ಹಂಬೀರರಾಯನು ಸ್ವೀಕರಿಸಿ, ಅವರಿಗೂ ಮಾನಾಜಿರಾಯನಿಗೂ ಪ್ರಣಾಮ ಮಾಡಿದನು. ಅನಂತರದಲ್ಲಿ ಒಂದು ಅಧಿಕಾರ ಪತ್ರವನ್ನೂ ಮಹಾರಾಜರು ತಮ್ಮ ಹಸ್ತದಿಂದಲೇ ಹಂಬೀರರಾಯನಿಗೆ ಕೊಟ್ಟು: ನಿನ್ನನ್ನು ಮಾನಾಜಿರಾಯರ ಪಥಕದಲ್ಲಿ ಸದ್ಯಕ್ಕೆ ಜಮಾದಾರಿಕೆಯ ಸ್ಥಳದ ಮೇಲೆ ನಿಯಮಿಸಿದ ಅಧಿಕಾರಪತ್ರವಿದು. ಯುದ್ಧಾನುಭವವಾಗುತ್ತ ಹೋದ ಹಾಗೆ ನಿನಗೆ ಹೆಚ್ಚಿನ ಅಧಿಕಾರಗಳು ದೊರೆಯುವವು. ಕೆಲವು ದಿನಗಳಲ್ಲಿ ನೀನು ಹೆಚ್ಚಿಗೆ ಹೊಂದಿ ಮಾನಾಜಿರಾಯರಂತೆ ಸರದಾರಿಕೆಯ ಸ್ಥಳಲ್ಲಿ ವಿರಾಜಮಾನನಾಗುವೆ. ಈ ಸಮಯದಲ್ಲಿ ನಾನು ನಿನಗೆ ಎರಡು ಮಾತು ಹೇಳುವದು ಅತ್ಯಾವಶ್ಯಕವಿದೆ. ನೀನು ಎಂಥ ಪ್ರಸಂಗದಲ್ಲಿಯೂ ಕರ್ತವ್ಯಭ್ರಷ್ಟನಾಗಬೇಡ. ಅನ್ಯತರರಾಯನಂತೆ ಸ್ವಾರ್ಥಪರವಶನಾಗಿ ಮಾತೃಭೂಮಿಯ ಕತ್ತು ಕೊಯ್ಯುವಂಥ ವಿದ್ರೋಹತನ ಮಾಡಲು ಮನಸ್ಸು ಮಾಡಬೇಡ. ಯವನರು ನಮ್ಮ ಅಸ್ಥಿರ್ಯ್ಯನಿಗಳು. ಇಲ್ಲಿ ತಮ್ಮ ರಾಜ್ಯವು ಸ್ಥಿರವಾಗುವದಕ್ಕಾಗಿ ನಮ್ಮ ಜನರನ್ನು ಒಡೆದುಕೊಳ್ಳಲು ಅನೇಕ ಬಗೆಯಾಗಿ ಪ್ರಯತ್ನಿಸುವರು. ತೇಜಸ್ವಿಗಳೂ ಶಕ್ತಿಸಂಪನ್ನರೂ ಆದ ನಿಮ್ಮಂಥ ತರುಣರಿಗೆ ಹಣದ ಹಾಗೂ ಅಧಿಕಾರದ ಲಾಲಸೆ ತೋರಿಸಿ, ತಮ್ಮ ಕಡೆಗೆ ಎಳೆದುಕೊಳ್ಳುವ ಸಾಹಸ ಮಾಡುವರು. ಒಂದು ರಾಜ್ಯ ಸಿಂಹಾಸನವು ದೊರೆತರೂ ಸಹ ನಿನ್ನಿಂದ ರಾಷ್ಟ್ರದ್ರೋಹದ ಪಾತಕವು ಘಟಿಸಬಾರದು. ಈ ವಿಷಯದಲ್ಲಿ ಮಾತ್ರ ನೀನು ಬಹಳ ಜಾಗ್ರತೆಯಿಂದಿರತಕ್ಕದ್ದು. ನಿಮ್ಮಂಥ ತರುಣರೇ-ಹಿಂದು ಸ್ವರಾಜ್ಯದ ಆಧಾರ ಸ್ತಂಭರು. ನಿಮ್ಮಂಥವರನ್ನೇ ನಂಬಿ ನಾನು ಸ್ವರಾಜ್ಯ ಮಂದಿರವನ್ನು ಕಟ್ಟತೊಡಗಿರುವೆನು. ಜನತೆಯು ಈಗ ಸ್ವರಾಜ್ಯಸೋಪಾನವೇರತೊಡಗಿದೆ. ಜಗದಂಬೆಯ ಅನುಗ್ರಹದಿಂದ ಸ್ವೀಕೃತ ಕಾರ್ಯವು ಪೂರ್ಣವಾಗಬಹುದಾಗಿದೆ. ಹಂಬೀರರಾಯಾ, ನೀನು ದೇಹದಲ್ಲಿ ಪ್ರಾಣಸಂಚಾರವಿರುವ ವರೆಗೆ ಸ್ವದೇಶ

ಸ್ವಜನ ದ್ರೋಹ ಮಾಡಲಾರೆಯೆಂದು ನಂಬಿ ನಿನಗೆ ಜಮಾದಾರಿಕೆಯ ಅಧಿಕಾರವನ್ನು ಒಮ್ಮೆಲೆ ಕೊಟ್ಟುಬಿಟ್ಟಿದ್ದೇನೆ. ಕೆಲವೇ ದಿನಗಳಲ್ಲಿ ಸರದಾರಿಕೆಯೂ ದೊರೆಯುವದು; ಅಲ್ಲದೆ ನಿನ್ನ ಜಹಾಗೀರಿಯೂ ದೊರೆಯುವವೆಂದು ನಾನು ವಿಶ್ವಾಸಪೂರ್ವಕವಾಗಿ ಹೇಳುವೆನು."

ಜಯಾಬಾಯಿಯೂ ಗಂಭೀರರಾಯನೂ ಮಹಾರಾಜರ ಅಮೃತೋಪಮವಾದ ಮಾತುಗಳನ್ನು ಕೇಳಿ ಆನಂದ ಸಾಮ್ರಾಜ್ಯದಲ್ಲಿ ಮುಳುಗಿದರು. ಗಂಭೀರರಾಯನು ಏಕನಿಷ್ಠೆಯಿಂದ ಸ್ವರಾಜ್ಯಸೇವೆ ಮಾಡುವ ಬಗ್ಗೆ ಪ್ರತಿಜ್ಞೆ ಮಾಡಿದನು. ಅನಂತರದಲ್ಲಿ ಮಹಾರಾಜರು:—"ಜಯಾಬಾಯಿಯವರೇ, ಇಂದು ನಮ್ಮ ಪ್ರಯಾಣವಿದೆ."

"ಮಹಾರಾಜರೆ, ಇನ್ನೊಂದು ದಿನ ಈ ಬಡವಿಯ ಮನೆಯಲ್ಲಿ ನಿಲ್ಲುವದು ಸಾಧ್ಯವಿಲ್ಲವೆ?"

"ನಿಮ್ಮ ಆಗ್ರಹದ ಮೂಲಕ ಒಂದು ದಿನ ಹೆಚ್ಚು ನಿಂತೆನು. ಕಾರ್ಯ ಬಾಹುಲ್ಯಕ್ಕಾಗಿ ಹೆಚ್ಚು ದಿನ ನಿಲ್ಲಲು ನನಗೆ ಅವಕಾಶವಿಲ್ಲ. ಸಮಯ ದೊರೆತಾಗ ಮತ್ತೊಮ್ಮೆ ಬರುವೆನು. ನೀವು ಈ ವಿಷಯದಲ್ಲಿ ಯೋಚಿಸಬೇಡಿರಿ. ನೀವು ಮಾನಾಜಿರಾಯರ ಆಪ್ತರೆಂದ ಮೇಲೆ ನನಗೂ ಆಪ್ತರೇ. ಒಂದು ದಿನ ಹೆಚ್ಚು ನಿಲ್ಲಲು ಅವಕಾಶದೊರೆಯಬೇಕೆಂಬ ಉದ್ದೇಶದಿಂದ ಅಮೃತರಾಯನ ಸ್ವಾಮಿವಿಚಾರಣೆಯನ್ನು ಇಲ್ಲಿ ನಿಯಮಿಸಿದೆನು. ಇನ್ನು ನೀವು ನಿಲ್ಲುವ ಹಕ್ಕಾಗಿ ಆಗ್ರಹಪಡಬೇಡಿರಿ."

"ತಮ್ಮ ಇಷ್ಟ!" ಎಂದು ಜಯಾಬಾಯಿಯು ನುಡಿದು:—"ಗಂಭೀರರಾಯನನ್ನು ನಿಮ್ಮ ಸ್ವಾಧೀನಪಡಿಸುವೆನು. ಅವನ ದೈವವು ತೆರೆಯುವಂತೆ ಮಾಡುವದು ನಿಮ್ಮನ್ನೇ ಕೂಡಿದೆ."

"ಜಯಾಬಾಯಿಯವರೇ, ಅವರವರ ಕರ್ತವ್ಯಗಳೇ ಅವರವರ ದೈವವನ್ನು ತೆರೆಯಿಸುವವು. ಗಂಭೀರರಾಯನು ತರುಣನೂ ಪ್ರತಾಪಶಾಲಿಯೂ ಗುಣವಂತನೂ ಇದ್ದುದರಿಂದ ಅವನು ಅಭ್ಯುದಯ ಹೊಂದಿಯೇ ಹೊಂದುವನು" ಎಂದು ಮಹಾರಾಜರು ನುಡಿದು:—"ನಿಮ್ಮ ಮಗನನ್ನು ಮಾನಾಜಿರಾಯರ ಪಥಕದಲ್ಲಿ ಸೇರಲು ಎಂದು ಕಳುಹಿಸುವಿರಿ?"

'ತಮ್ಮ ಆಜ್ಞೆಯಾದಾಗ ಕಳುಹಿಸುವೆನು.'

"ಒಳ್ಳೇದು. ಅವನು ವಸ್ತ್ರ-ಶಸ್ತ್ರಗಳನ್ನು ಸಿದ್ಧಪಡಿಸಿಕೊಳ್ಳಲಿ. ಇನ್ನು ಒಂದು ವಾರದ ನಂತರ ಅವನು ಮಾನಾಜಿರಾಯರ ಪಥಕದಲ್ಲಿ ಸೇರತಕ್ಕದ್ದು."

ಜಯಾಬಾಯಿಯು ತನ್ನ ಮಗನನ್ನು ಸ್ವರಾಜ್ಯ ಸೇವೆಗಾಗಿ ತೊಡಗಿಸಲು ಆತುರಪಟ್ಟವಳಾಗಿದ್ದರೂ ಇಷ್ಟು ಬೇಗನೆ ಕೆಲಸಕ್ಕೆ ತೆಗೆದುಕೊಳ್ಳಬಹುದೆಂಬ ಕಲ್ಪನೆಯಿರಲಿಲ್ಲ. ಆದ್ದರಿಂದ ಅವಳ ಸಂಭ್ರಮಕ್ಕೆ ಎಣೆಯಿಲ್ಲದಾಯಿತು. ಅವಳು ಆನಂದಭರದಲ್ಲಿ:—"ಪ್ರಭುಗಳೆ, ನೀವು ನನಗೆ ದೇವತಾಸ್ವರೂಪರು. ಹಂಬೀರರಾಯನು ಅಭ್ಯುದಯ ಹೊಂದುವದಕ್ಕೆ ನೀವು ಬೇಕಾದ ಹಾಗೆ ಸಂಧಿಯನ್ನು ಕಲ್ಪಿಸಿಕೊಡಬಹುದು."

ಅನಂತರ ಮಹಾರಾಜರು ಹಂಬೀರರಾಯನಿಗೆ ನಾಲ್ಕು ಉಪದೇಶಪರ ಮಾತುಗಳನ್ನು ಹೇಳಿದರು. ಅನಂತರ ಸುಲಿಗೆಗಾರ ಧುಂಡಜಿಯನ್ನು ಕರೆಯಿಸಿ, ಹಂಬೀರರಾಯನ ಕೈಕೆಳಗಿದ್ದು ರಾಷ್ಟ್ರಸೇವೆ ಮಾಡುತ್ತ ಕಾಲಹರಣ ಮಾಡಬೇಕೆಂದು ಆಜ್ಞಾಪಿಸಿದರು. ಹಂಬೀರರಾಯನು ಶಂಭು, ಧುಂಡಜಿ, ಕಾಳು ಮೊದಲಾದ ಇಪ್ಪತ್ತೈದು ಸೈನಿಕರ ಮೇಲೆ ಜಮಾದಾರನಾಗಿ ನಿಯಮಿಸಲ್ಪಟ್ಟನು.

ತರುವಾಯ ಜಯಾಬಾಯಿಯು ಮಹಾರಾಜರನ್ನೂ ಅವರ ಜನರನ್ನೂ ಊಟಕ್ಕೆ ಕರೆದಳು. ಎಲ್ಲ ಜನರೂ ಆನಂದದಿಂದ ಊಟ ತೀರಿಸಿಕೊಂಡರು. ತಾಂಬೂಲಸೇವನೆಯಾದ ಕೂಡಲೆ ಮಹಾರಾಜರು ಕುದುರೆಗಳನ್ನು ಸಿದ್ಧಪಡಿಸುವದಕ್ಕಾಗಿ ಸೇವಕರಿಗೆ ಆಜ್ಞಾಪಿಸಿದರು. ಅವರು ಜಯಾಬಾಯಿಯ ಹಾಗು ಹಂಬೀರರಾಯನ ನಿರೋಪ ಹೊಂದಿ ಪ್ರಯಾಣ ಮಾಡಿದರು."

ಮಾರನೆಯ ದಿನವೇ ಶಂಭುವೂ ಹಂಬೀರರಾಯನೂ ಮಥುರಾದಾಸನ ಕಡೆಗೆ ಹೋಗಿ, ಅವನ ಹಣವನ್ನು ಕೊಟ್ಟು, ರತ್ನದ ಕಠಾರಿಯನ್ನು ಬಿಡಿಸಿಕೊಂಡು ಬಂದು ಜಯಾಬಾಯಿಯ ಸ್ವಾಧೀನಪಡಿಸಿದರು. ಮೊದಲನೆಯ ವಿಜಯವನ್ನು ಸಂಪಾದಿಸಿದ ಕೂಡಲೆ ಇದನ್ನು ನಿನ್ನ ಸ್ವಾಧೀನಪಡಿಸುವೆನೆಂದು ಜಯಾಬಾಯಿಯು ಹಂಬೀರರಾಯನಿಗೆ ಹೇಳಿದಳು.

ತರುವಾಯ ಹಂಬೀರರಾಯನು ಸರಂಜಾಮಿನ ಸಿದ್ಧತೆಗಾಗಿ ತೊಡಗಿದನು. ಅವನು ತನ್ನ ಕೈಕೆಳಗಿನ ಎಲ್ಲ ಸೈನಿಕರಿಗೂ ಶಸ್ತ್ರಾಸ್ತ್ರ ಕವಚಗಳ ಸಿದ್ಧತೆ ಮಾಡಿಸಿದನು. ಜಯಾಬಾಯಿಯು ಮಗನ ಈ ಎಲ್ಲ ಸಿದ್ಧತೆಯನ್ನು ನೋಡಿ ಆನಂದಬಟ್ಟಳು. ವೀರಪತ್ನಿಯೆನಿಸಿದ್ದ ತಾನು ಇನ್ನು ವೀರಮಾತೆಯಾಗುವೆನೆಂದು ಅವಳು ತನ್ನನ್ನು ತಾನೇ ಕೊಂಡಾಡತೊಡಗಿದಳು. ಅವಳು ಆ ಆನಂದಭರದಲ್ಲಿ ಮಗನನ್ನು ಬಿಗಿಹಪ್ಪಿ:—"ಹಂಬೀರ! ನಿನ್ನನ್ನು ನೋಡಿ

ನಾನು ಹಿಂದಿನ ಎಲ್ಲ ದುಃಖಗಳನ್ನು ಮರೆತೆನು. ನಿನ್ನಂಥ ಪ್ರತಾಪಿಯಾದ ಮಗನ ತಾಯಿಯಾದ ನಾನು ಬಡವೆಯಲ್ಲ. ನಿನ್ನಿಂದ ನಮ್ಮ ಗತವೈಭವವು ಮರಳಿ ಪ್ರಾಪ್ತವಾಗುವದರಲ್ಲಿ ಸಂದೇಹವಿಲ್ಲ."

"ಅಮ್ಮಾ!" ಹಂಬೀರರಾಯನು ಕೃತಜ್ಞತಾಬುದ್ಧಿಯಿಂದ: —"ನನ್ನ ಅಭ್ಯುದಯಕ್ಕೆ ಕಾಕಾಸಾಹೇಬರೇ ಕಾರಣರು. ಅವರು ಮಹಾರಾಜರಿಗೆ ನನ್ನ ಪರಿಚಯ ಮಾಡಿಕೊಡದಿದ್ದರೆ ಇಂಥ ಸುದಿನಗಳು ಪ್ರಾಪ್ತವಾಗುತ್ತಿರಲಿಲ್ಲ. ನಾವು ಆಜನ್ಮವಾಗಿ ಅವರಿಗೆ ಋಣಿಯಾಗಿರಲೇಬೇಕು."

"ನಿಜ. ಮಾನಾಜಿರಾಯರು ನಿನ್ನ ಸಲುವಾಗಿ ಬಹಳೇ ಸಾಹಸ ಮಾಡಿದರು." ಎಂದು ಜಯಾಬಾಯಿಯು ನುಡಿದು: —"ಹಂಬೀರ, ಇನ್ನು ಬೇಗನೆ ನೀನು ಮಾನಾಜಿರಾಯರ ಪಥಕದಲ್ಲಿ ಸೇರಲು ಹೋಗುವವನಿರುವೆ. ನಾಂದಗಾವಿಯ ನಿನ್ನ ಮಾವನನ್ನು ಭೆಟ್ಟಿಯಾಗಿ ಎಲ್ಲ ಸಂಗತಿಗಳನ್ನು ತಿಳಿಸಿ ಬಾ. ನಿನ್ನ ಅಭ್ಯುದಯದ ವಾರ್ತೆ ಕೇಳಿ ಯಶವಂತರಾಯರೂ ಹರುಷಗೊಳ್ಳುವರು; ಪುತ್ಥಳಿಗೂ ಸಂಭ್ರಮವಾಗುವದು."

ನಾಂದಗಾವಿಯು ದೇವಗಾಂವದ ಸಮೀಪದ ಒಂದು ಹಳ್ಳಿಯು. ಇಲ್ಲಿಯ ಇನಾಮದಾರನಾದ ದೇಶಮುಖ ಯಶವಂತರಾಯನಿಗೆ ಇಬ್ಬರು ಹೆಣ್ಣುಮಕ್ಕಳಿದ್ದರು. ಹಿರಿಯ ಮಗಳ ಹೆಸರು ಪುತ್ಥಳಿಯೆಂದಿತ್ತು; ಚಿಕ್ಕವಳ ಹೆಸರು ಕಮಲೆ. ಇವರಿಬ್ಬರೂ ಉಪವರ ಕನ್ಯೆಯರು. ಯಶವಂತರಾಯನಿಗೆ ಪುತ್ರಸಂತಾನವಿರಲಿಲ್ಲ. ಆದ್ದರಿಂದ ಈ ಇಬ್ಬರು ಕನ್ಯೆಯರ ಮೇಲೆ ಅವನು ಬಹಳೇ ವಾತ್ಸಲ್ಯವುಳ್ಳವನಾಗಿದ್ದನು. ಅವನ ಹೆಂಡತಿಯು ಹತ್ತೆಂಟು ವರ್ಷಗಳ ಹಿಂದೆ ಮಡಿದುದರಿಂದ ಯಶವಂತರಾಯನಿಗೆ ಈ ಕನ್ಯೆಯರ ವಿಷಯವಾಗಿ ಬಹಳೇ ಯೋಚನೆಯಾಗಿತ್ತು. ಇವರಿಬ್ಬರ ಲಗ್ನ ಮಾಡಿ ತನ್ನ ಮೇಲಿದ್ದ ದೊಡ್ಡ ಹೊರೆಯನ್ನು ಇಳಿಸಿಕೊಳ್ಳಬೇಕೆಂದು ಅವನು ಯೋಚಿಸಿದ್ದನು. ಪುತ್ಥಳಿಯು ಹಂಬೀರರಾಯನಲ್ಲಿ ಅನುರಾಗವುಳ್ಳವಳಾಗಿದ್ದಳು. ಹಂಬೀರರಾಯನಾದರೂ ಅವಳನ್ನು ಪ್ರೀತಿಸುತ್ತಿದ್ದನು. ಈ ಪ್ರಣಯಿಗಳ ಪ್ರೇಮಕ್ಕೆ ಜಯಾಬಾಯಿ-ಯಶವಂತರಾಯರ ಸಂಪೂರ್ಣ ಒಪ್ಪಿಗೆಯಿತ್ತು. ಯೋಗ್ಯಳಾದ ಸೊಸೆಯು ದೊರೆತಳೆಂದು ಜಯಾಬಾಯಿಯೂ, ತನ್ನ ಮಗಳಿಗೆ ಅನುರೂಪನಾದ ವರನು ದೊರಕಿದನೆಂದು ಯಶವಂತರಾಯನೂ ಸಂಭ್ರಮಗೊಂಡಿದ್ದರು. ದಂಡಯಾತ್ರೆಗೆ ಹೊರಟ ಮೇಲೆ ಬೇಗನೆ ತಿರುಗಿ ಬರುವದು

ಆಗಲಿಕ್ಕಿಲ್ಲೆಂದು ತಿಳಿದು, ಯಶವಂತರಾಯನ ಹಾಗು ಪುತ್ಥಳಿಯು ಭೆಟ್ಟಿಯಾಗಿ ಬರಬೇಕೆಂದು ಜಯಾಬಾಯಿಯು ಮಗನಿಗೆ ಆಜ್ಞಾಪಿಸಿದಳು.

ಹಂಬೀರರಾಯನಿಗೂ ಅಷ್ಟೇ ಬೇಕಾಗಿತ್ತು. ತನ್ನ ಮನಸ್ಸಿನಲ್ಲಿದ್ದದ್ದನ್ನೇ ತಾಯಿಯು ಹೇಳಿದಳೆಂದು ಅವನು ಸಂತೋಷಬಟ್ಟು, ಅಶ್ವಾರೋಹಿಯಾಗಿ ನಾಂದಗಾವಿಗೆ ಹೊರಟನು. ನಾಂದಗಾವಿಯು ಒಂದು ಗಳಿಗೆಯ ದಾರಿಯಲ್ಲಿತ್ತು. ಅವನ ಕೇಸರಿಯು ಅವನನ್ನು ಶೀಘ್ರವಾಗಿ ಅಲ್ಲಿಗೆ ತಲುಪಿಸಿತು. ಹಂಬೀರರಾಯನು ಯಶವಂತರಾಯನ ವಾಡಿಗೆ ಬಂದನು. ಆಗ ಯಶವಂತರಾಯನು ಮನೆಯಲ್ಲಿದ್ದಿಲ್ಲ. ಅವನ ಸೇವಕರು ಹಂಬೀರರಾಯನಿಗೆ "ರಾಮರಾಮ" ಮಾಡಿ ಅವನ ಕುದುರೆಯನ್ನು ಅಶ್ವಶಾಲೆಯಲ್ಲಿ ಕಟ್ಟಿದರು. ಪುತ್ಥಳಿಯೂ ಕಮಲೆಯೂ ಉದ್ಯಾನದಲ್ಲಿರುವರೆಂಬದು ಸೇವಕರಿಂದ ತಿಳಿದ ಕೂಡಲೆ ಅವನು ಅಲ್ಲಿಗೆ ಹೋದನು. ಪುತ್ಥಳಿಯು ಹಂಬೀರರಾಯನ ಆಗಮನದಿಂದ ಆನಂದಗೊಂಡಳು. ಕಮಲೆಯು ಹಂಬೀರರಾಯನನ್ನು ನೋಡಿ:— 'ಯಾವಾಗ ಬಂದಿರಿ ಹಂಬೀರರಾಯರೆ?" ಎಂದು ಕೇಳಿದಳು.

"ಇದೇ ಈಗ ಬಂದೆನು. ಮನೆಯಲ್ಲಿ ಯಶವಂತರಾಯರೂ ಇದ್ದಿಲ್ಲ; ನೀವೂ ಇರಲಿಲ್ಲ. ಆದ್ದರಿಂದ ಉದ್ಯಾನದ ಕಡೆಗೆ ತಿರುಗಾಡಿ ಬರೋಣವೆಂದು ಇತ್ತ ಬಂದೆನು."

"ನಾವು ಇಲ್ಲಿ ಇದ್ದುದರಿಂದಲೇ ತಿರುಗಾಡಲಿಕ್ಕೆ ಬರೋಣವಾಯಿತು. ಹಾಗಿಲ್ಲದಿದ್ದರೆ ಏಕೆ ಬಂದೀರಿ? ನಮ್ಮ ಅಕ್ಕನ ಭೆಟ್ಟಿಗೆ ಧಾವಿಸಿ ಬಂದು ಏನೋ ನೆವ ಹೇಳುತ್ತಿರುವಿರಿ. ನೋಡು ಅಕ್ಕಾ, ಹಂಬೀರರಾಯರು ಹೇಗೆ ಮೋಸ ಮಾಡುತ್ತಿರುವರು?"

ಪುತ್ಥಳಿಯು ನಸುನಕ್ಕು ಹಂಬೀರರಾಯನನ್ನು ಕುರಿತು:—"ಇದೇನು ಇಂದು ಒಳ್ಳೆಯ ಸಡಗರದ ಉಡುಪು ಧರಿಸಿಕೊಂಡು ಬರೋಣವಾಗಿದೆ?"

"ಮದುವಣಿಗರಂತಹ ಸುಂದರವಾದ ಉಡುಪು ಧರಿಸಿಯೇ ಬಂದಿರುವರು ಹಂಬೀರರಾಯರು." ಎಂದು ನಗುತ್ತ ಕಮಲೆಯು ನುಡಿದಳು.

"ಕಮಲೆ, ನೀನು ಮರುಳು. ಇದು ಮದುವಣಿಗರ ಉಡುಪಲ್ಲ; ಸ್ವರಾಜ್ಯ ಸೇವೆ ಮಾಡಲು ಸಿದ್ಧರಾದ ರಾಷ್ಟ್ರಭಕ್ತರ ಉಡುಪು."

"ಏನು? ಏನು ಹೇಳುವಿರಿ? ನೀವು ಹೇಳುವದು ನಿಜವೇ? ಮಹಾರಾಜರ ಸ್ವರಾಜ್ಯ ಸೇನೆಯಲ್ಲಿ ನೀವು ಸೇರಿರುವಿರಾ? ಮಹಾರಾಜರು ನಿಮ್ಮನ್ನು

ಯಾವ ಸ್ಥಳದಲ್ಲಿ ನಿಯಮಿಸಿರುವರು?" ಎಂದು ಪುತ್ಥಳಿಯು ಉತ್ಕಂಠೆಯಿಂದ ಕೇಳಿದಳು.

"ಪುತ್ಥಳಿ, ನಾನು ಹೇಳುವದು ಅಸತ್ಯವೆಂದು ಭಾವಿಸಬೇಡ. ನಿನ್ನೆದುರಿಗೆ ನಾನೆಂದಿಗಾದರೂ ಅನೃತ ಭಾಷಣಗಳನ್ನಾಡಿರುವೆನೆ? ನಾನು ನಿಜವಾಗಿಯೂ ಮಹಾರಾಜರ ಸೇನೆಯಲ್ಲಿ ಕೆಲಸಕ್ಕೆ ಹೊಂದಿದವನಾಗಿರುವೆನು. ಸರದಾರ ಪಾಕಡೆ ಮಾನಾಜಿರಾಯರ ಪಥಕದಲ್ಲಿ ನಾನು ಜಮಾದಾರನಾಗಿ ನಿಯಮಿಸಲ್ಪಟ್ಟಿರುವೆನು. ಯುದ್ಧಕಲೆಯ ಅನುಭವವು ಚನ್ನಾಗಿ ಆದ ಕೂಡಲೆ ಮಹಾರಾಜರು ನನ್ನನ್ನು ಸರದಾರನನ್ನಾಗಿ ಮಾಡತಕ್ಕವರಿರುವರು. ಅವರು ನಮ್ಮ ಮನೆಯಲ್ಲಿ ಎರಡು ದಿನ ಆತಿಥ್ಯ ಸ್ವೀಕಾರ ಮಾಡಿ ನಮ್ಮನ್ನು ಧನ್ಯರನ್ನಾಗ ಮಾಡಿದರು. ನನ್ನ ಪರೀಕ್ಷೆ ತೆಗೆದುಕೊಂಡರು. ಪರೀಕ್ಷೆಯಲ್ಲಿ ಅವರ ಸರದಾರನಾದ ಕಿಸನರಾಯನನ್ನು ನಾನು ಪರಾಭವಗೊಳಿಸಿದೆನು. ನನ್ನ ಕೆಲಸವನ್ನು ನೋಡಿ ಸಂತುಷ್ಟರಾದ ಮಹಾರಾಜರು ನನ್ನನ್ನು ಒಮ್ಮೆಲೆ ಜಮಾದಾರನನ್ನಾಗಿ ನಿಯಮಿಸಿದರು. ನಾನು ಇದೇ ವಾರದಲ್ಲಿ ಮಾನಾಜಿರಾಯರ ಪಥಕವನ್ನು ಸೇರಲು ಹೊರಡಲೇ ಬೇಕು. ಅಲ್ಲಿಗೆ ಹೋದ ಮೇಲೆ ಬೇಗನೆ ನಿಮ್ಮೆಲ್ಲರ ಭೆಟ್ಟಿಯಾಗುವ ಸಂಭವವಿಲ್ಲವಾದುದರಿಂದ ಇಲ್ಲಿಗೆ ಬಂದೆನು. ನಾನು ಇಂದೇ ದೇವಗಾವಿಗೆ ಹೊರಡಬೇಕು. ಹೆಚ್ಚು ಕಾಲ ಇಲ್ಲಿ ನಿಲ್ಲುವಂತಿಲ್ಲ."

ಹಂಬೀರರಾಯನ ಮಾತು ಕೇಳಿ ಪುತ್ಥಳಿಯು ಅನಿರ್ವಚನೀಯವಾದ ಆನಂದವನ್ನು ಹೊಂದಿದಳು. ಅವಳು ಮುಂದಹಾಸದಿಂದ ಹಂಬೀರರಾಯನ ಮುಖಾವಲೋಕನ ಮಾಡುತ್ತ:—"ಈಗ ಜಮಾದಾರರಾಗಿರುವದರಿಂದ ಕೇವಲ ಭೆಟ್ಟಿಯನ್ನು ಕೊಡಲಿಕ್ಕೆ ಬರೋಣವಾಯಿತು. ಮುಂದೆ ಸರದಾರರಾದ ಮೇಲೆ ಅದು ಕೂಡ ದುರ್ಮಿಳವಾಗಬಹುದು. ಈಗ ಎರಡು ದಿನ ನಿಲ್ಲಲು ಅವಕಾಶವೇ ಇಲ್ಲವೆಂದಹಾಗಾಯಿತು."

"ಪುತ್ಥಳಿ, ನನಗೆ ಅವಕಾಶವು ನಿಜವಾಗಿಯೂ ಇಲ್ಲ." ಎಂದು ಹಂಬೀರರಾಯನು ನುಡಿದು, ನಗುತ್ತಲೆ:—"ಈಗ ಜಮಾದಾರನಿರುವೆನೆಂದು ಭೆಟ್ಟಿಗಾಗಿ ಬರಲು ಮನಸ್ಸಾಯಿತು; ಮುಂದೆ ಸರದಾರನಾದ ಮೇಲೆ ನಿಮ್ಮಂಥವರ ಭೆಟ್ಟಿಯಾಗಬೇಕೆಂಬ ಮನಸ್ಸು ಹೇಗಾಗುವದು?"

"ಅದನ್ನೇ ನಾನು ಹೇಳಿದೆನು. ದೊಡ್ಡ ಪದವೀಧರರಾದ ಮೇಲೆ ದೊಡ್ಡ ಪದವೀಧರರ ಸ್ನೇಹ ಸಂಬಂಧಗಳನ್ನಿಡುವ ಪರಿಪಾಠವು ಸಹಜವಾದ

ದ್ದಾಗುವದು." ಎಂದು ಪುತ್ಥಳಿಯು ನಗುತ್ತಲೆ ನುಡಿದಳು.

"ಅಕ್ಕಾ, ಉತ್ಕರ್ಷ ಪಥವನ್ನು ಹಿಡಿದ ಇಂಥವರೊಡನೆ ಮಾತಾಡುತ್ತ ಕುಳಿತುಕೊಳ್ಳುವ ಕಾರಣವೇನು? ನಡೆ, ನಾವು ಮನೆಗೆ ಹೋಗೋಣ." ಎಂದು ಕಮಲೆಯು ಪುತ್ಥಳಿಗೆ ಹೇಳಿ:—"ಹೋಗಿ ಬನ್ನಿರಿ ಹಂಬೀರರಾಯರೆ, ನಿಮ್ಮ ಕೇಸರಿಯು ಸಿದ್ಧವಾಗಿಯೇ ನಿಂತಿರಬಹುದು. ಏರಿದ ಪರಕ್ಷಣದಲ್ಲಿ ಅದು ನಿಮ್ಮನ್ನು ವಿದ್ಯುದ್ವೇಗದಿಂದ ದೇವಗಾವಿಗೆ ತಲುಪಿಸಿಯೇ ತಲುಪಿಸು ವದು. ನಿಮ್ಮಂಥ ದೊಡ್ಡ ಜನರ ಸ್ನೇಹ-ಸಹವಾಸಗಳನ್ನು ನಾವಾದರೂ ಹೇಕೆ ಇಚ್ಛಿಸಬೇಕು?"

"ಕಮಲೆ, ಹಾಸ್ಯವಾಡಬೇಡ. ಪುತ್ಥಳಿ, ನೀನೂ ವಿಕಲ್ಪ ಭಾವಿಸಬೇಡ. ಈ ಹಂಬೀರರಾಯನು ಪ್ರಣಯಭಂಗ ಮಾಡುವಂಥ ಪಶುಕೋಟಿಯವನಲ್ಲ." ಎಂದು ಹಂಬೀರರಾಯನು ನುಡಿದು, ಪುತ್ಥಳಿಯನ್ನು ಬಳಿಯಲ್ಲಿ ಎಳೆದು ಕುಳ್ಳಿರಿಸಿಕೊಂಡು:-"ನಿನ್ನ ಆಗ್ರಹಕ್ಕಾಗಿ ಇಂದೊಂದು ದಿಶ ನಿಲ್ಲುವೆನು."

"ಎರಡು ದಿನಗಳನ್ನಾದರೂ ನೀವು ಇಲ್ಲಿ ಕಳೆಯಲೇ ಬೇಕು. ಅಷ್ಟರೊ ಳಗೆ ನಿಮಗೆ ನಿಶ್ಚಯವಾಗಿ ನಿರೋಪ ದೊರೆಯಲಾರದು." ಎಂದು ಪುತ್ಥಳಿಯು ನುಡಿದು:—"ನೀವು ಅವಸರದಿಂದ ಹೋಗುವದಿದ್ದರೆ ಬರಬೇಕೇಕೆ? ಈಗಲೆ ಹೋಗಿ ಬಿಡಿರಿ."

"ಆಗಲಿ, ನಿನ್ನ ಇಚ್ಛೆಯಂತೆ ಎರಡು ದಿನ ನಿಲ್ಲುವೆನು. ಈಗಲಾದರೂ ಆಯಿತೆ?"

"ಅಕ್ಕಸಾಲಿಗನೇ ಮುರುವು ಚುಚ್ಚಬೇಕು." ಕಮಲೆಯು ನಗುತ್ತ ನುಡಿದಳು.

ಅಷ್ಟರಲ್ಲಿ ಸೇವಕನು ಅಲ್ಲಿಗೆ ಬಂದು ಹಂಬೀರರಾಯನನ್ನು ಕುರಿತು— "ಧನೀಸಾಹೇಬರು ಬಂದಿರುವರು. ನಿಮ್ಮನ್ನು ಕರೆಯಲಿಕ್ಕೆ ನನಗೆ ಹೇಳಿದರು." ಎಂದು ತಿಳಿಸಿದನು.

"ತಂದೆಯವರು ಬಂದಿರುವರಂತೆ. ನಡೆಯಿರಿ, ಹಂಬೀರರಾಯರೇ, ಮನೆಗೆ ಹೋಗೋಣ." ಎಂದು ಕಮಲೆಯು ಹೇಳಿದಳು.

ತರುವಾಯ ಮೂವರೂ ಮನೆಗೆ ಹೋಗಿ ದಿವಾಣಖಾನೆಯನ್ನು ಸೇರಿ ದರು. ಯಶವಂತರಾಯನು ಹಂಬೀರರಾಯನನ್ನು ಸ್ವಾಗತಿಸಿ:—"ಮತ್ತೇನು? ಹಂಬೀರರಾಯಾ, ಎಲ್ಲವೂ ಸೌಖ್ಯವಾಗಿರುವದೆ?"

"ಎಲ್ಲವೂ ಸೌಖ್ಯವಿದೆ."

"ಮಹಾರಾಜರು ನಿಮ್ಮಲ್ಲಿ ಎರಡು ದಿನ ನಿಂತ ಸಂಗತಿ ತಿಳಿಯಿತು. ನಿನ್ನ ಇಚ್ಛೆಯಂತೆ ಕಾರ್ಯವಾಯಿತೆ?"

"ಮಾವನವರೆ, ಮನಸ್ಸಿನಲ್ಲಿದ್ದುದಕ್ಕಿಂತಲೂ ಹೆಚ್ಚಾದ ಕೆಲಸವಾಯಿತು. ಮೊದಲು ನನಗೆ ಸ್ವರಾಜ್ಯ ದಳದಲ್ಲಿ ಸಾಧಾರಣ ತರಗತಿಯ ಸೈನಿಕನಾಗಿ ಪ್ರವೇಶ ದೊರೆತರೆ ಸಾಕೆನಿಸಿತ್ತು; ಆದರೆ ನನಗೆ ಒಮ್ಮೆಲೆ ಜಮಾದಾರಿಕೆಯು ದೊರೆತುದಲ್ಲದೆ, ಬೇಗನೆ ಸರದಾರಿಕೆಯು ದೊರೆಯುವದೆಂಬ ಆಶ್ವಾಸನೆಯೂ ಸಿಕ್ಕಿತು. ಮಹಾರಾಜರು ನಿಜವಾಗಿಯೂ ಗುಣಗ್ರಾಹಿಗಳು. ಅವರ ಮಹಾನುಭಾವತೆಯನ್ನು ಎಷ್ಟು ಹೊಗಳಿದರೂ ಕಡಿಮೆಯಿದೆ; ಅವರು ಅಂತಹ ಪುಣ್ಯಶ್ಲೋಕಿಗಳಿರುವದರಿಂದಲೆ ಜನತೆಯು ಸ್ವರಾಜ್ಯ ಸೋಪಾನವನ್ನೇರತೊಡಗಿದೆ." ಹಂಬೀರಾಯನ ಮಾತುಗಳಿಂದ ಯಶವಂತರಾಯನಿಗೆ ಸಂತೋಷವಾಯಿತು. ಆಗ ಅವನು:-"ಹಂಬೀರರಾಯಾ, ನೀನು ಬೇಗನೆ ಸರದಾರಿಕೆಯನ್ನು ಹೊಂದುವದರಲ್ಲಿ ಸಂದೇಹವಿಲ್ಲ. ಅದು ಬೇಗನೆ ದೊರೆಯಲೆಂದು ನಿನಗೆ ನನ್ನ ಆಶೀರ್ವಾದವಿದೆ. ಹಾಗಾದರೆ ನಿನ್ನ ತಾಯಿಯವರಿಗೂ ನನಗೂ ಆನಂದವಾಗುವದು. ನಮ್ಮ ಪುತ್ಥಳಿಯೂ ಸ್ವಾನಂದಸಾಮ್ರಾಜ್ಯದಲ್ಲಿ ತೇಲಾಡುವಳು. ಮಹಾರಾಜರು ಬಂದಾಗ ಏನೇನು ನಡೆಯಿತೆಂಬದನ್ನು ಹೇಳು."

ಹಂಬೀರರಾಯನು ಎಲ್ಲ ಸಂಗತಿಯನ್ನು ಯಶವಂತರಾಯನಿಗೆ ವಿಶದವಾಗಿ ಹೇಳಿದನು. ತನ್ನ ಭಾವೀ ಅಳಿಯನು ಇಂಥ ಪ್ರಭಾವಶಾಲಿಯಿರುವನೆಂಬದು ಯಶವಂತರಾಯನಿಗೆ ಗೊತ್ತಿದ್ದಿಲ್ಲ; ಮಹಾಜರಾರ ಸರದಾರನಾದ ಕಿಸನರಾಯನನ್ನು ಪರಾಭವಗೊಳಿಸಿದ ಸಂಗತಿಯಿಂದ ಅವನು ಸಾನಂದಾಶ್ಚರ್ಯಗೊಂಡನು. ಅನಂತರದಲ್ಲಿ ಅವನು ಮಗಳ ಕಡೆಗೆ ನೋಡಿ:—"ಪುತ್ಥಳಿ, ನಿನ್ನ ಹಂಬಿರರಾಯನು ಎಂಥ ತೇಜಸ್ವಿಯಿರುವನೆಂಬವರ ನಂಬಿಗೆಯಾಯಿತೇ?"

ಪುತ್ಥಳಿಯು ಮಂದಸ್ಮಿತೆಯಾಗಿ ಮುಖಬಾಗಿಸಿದಳು. ಆಗ ಕಮಲೆಯು ನಗುತ್ತ:—"ಅಕ್ಕಾ, ವರಿಸಿದರೆ ಪರಾಕ್ರಮಿಗಳಾದ ಪುರುಷರನ್ನು ಸ್ತ್ರಿಯರು ವರಿಸಬೇಕೆಂದು ಅನ್ನುತ್ತಿದ್ದೆ. ಈಗ ನಿನ್ನ ಹಾರೈಕೆ ಕೈಗೂಡಿತೆ?"

"ನಾನು ನಿನ್ನ ಹಾಗೆ ಪರೀಕ್ಷಿಸದೆ ಪ್ರಣಯವುಳ್ಳವಳಾಗುವವಳಲ್ಲ." ಎಂದು ಪುತ್ಥಳಿಯು ಸ್ವಲ್ಪ ಸಿಟ್ಟಿನಿಂದ ನುಡಿದಳು.

ಕಮಲೆಯು ಲಜ್ಜೆಯಿಂದ ಮುಖವನ್ನು ಕಳಗೆ ಮಾಡಿದಳು. ಅವಳ

ಪ್ರಣಯದೇವನು ಯಾರೆಂಬದು ಹಂಬೀರರಾಯನಿಗೆ ಗೊತ್ತಿರದ್ದರಿಂದ ಆ ವಿಷಯವನ್ನು ತಿಳಿದುಕೊಳ್ಳುವ ಉತ್ಕಂಠೆಯಿಂದ:—"ಯಶವಂತರಾಯರೇ, ನಿಮ್ಮ ಕಮಲೆಯ ಪ್ರಣಯೇಶ್ವರನು ಯಾರು?"

"ಈ ವಿಷಯವಾಗಿ ಹಿಂದಿನಿಂದ ಮಾತಾಡೋಣ" ಎಂದು ಯಶವಂತ ರಾಯನು ಹಂಬೀರರಾಯನಿಗೆ ಹೇಳಿ, ಮಕ್ಕಳನ್ನು ಕುರಿತು:—"ಪುತ್ಥಳೀ, ಕಮಲೆ, ಹೋಗಿರಿ; ಹಂಬೀರರಾಯನು ಹಸಿದಿರುವನು. ಉಪಾಹಾರದ ವ್ಯವಸ್ಥೆಯನ್ನು ಮಾಡಿರಿ. ಉಪಾಹಾರ ತೀರಿದ ಮೇಲೆ ಮತ್ತೆ ಮಾತಾ ಡುತ್ತ ಕುಳಿತುಕೊಳ್ಳೋಣ."

ಪುತ್ಥಳಿಯೂ ಕಮಲೆಯೂ ಅಲ್ಲಿಂದ ಎದ್ದರು. ತರುವಾಯ ಯಶ ವಂತರಾಯನು ಹಂಬೀರರಾಯನನ್ನು ಕುರಿತು:—"ಫುಲವಾಡಿಯ ರಂಗ ರಾಯನನ್ನು ನೀನು ಬಲ್ಲೆಯಷ್ಟೆ?"

"ಗೊತ್ತಿರಿವೇನು? ಚೆನ್ನಾಗಿ ಬಲ್ಲೆನು" ಎಂದು ಹಂಬೀರರಾಯನು ನುಡಿದು, ತಿರಸ್ಕಾರದಿಂದ:—"ಅವನು ಅತ್ಯಂತ ಬಾಷ್ಕಳನಿರುವನು. ಮನೆ ತನವೇನೋ ದೊಡ್ಡದು. ರಂಗರಾಯನು ತನ್ನ ಮನೆತನದ ಗೌರವವನ್ನೇ ಕಳೆದು ಬಿಡುತ್ತಾನೆ. ಇನಾಮುದಾರ ಮನೆತನದವನಿದ್ದರೂ ಅವನು ಕೇವಲ ಕೀಳು ಜನರ ಸಹವಾಸದಲ್ಲಿಯೇ ಕಾಲಹರಣ ಮಾಡುತ್ತಾನೆ. ಇಂಥವರು ದೊಡ್ಡ ಮನೆತನದಲ್ಲಿ ಹುಟ್ಟಬಾರದು."

"ನಿನ್ನ ಮಾತು ನಿಜವು. ಅವನ ಬಾಷ್ಕಳತನಕ್ಕೆ ಬೇಸತ್ತು, ಕೊನೆಗೆ ಮನೆಗೆ ಬರಕೂಡದೆಂದು ನಿಷ್ಠುರವಾಗಿ ಹೇಳಬೇಕಾಗಿ ಪ್ರಸಂಗವೊದಗಿತು. ನಮ್ಮ ಕಮಲೆಯು ರಂಗರಾಯನೊಡನೆ ನಗುವದು-ಕೆಲೆಯುವದು ಮಾಡು ತ್ತಿರುತ್ತಾಳೆ. ಅವನು ಬಾರದಿದ್ದರೂ ಅವಳು ಅವನ ಮನೆಗೆ ಹೋಗು ತ್ತಿರುತ್ತಾಳೆ. ಆ ಬಾಷ್ಕಳ ರಂಗರಾಯನು ಇವಳಲ್ಲಿ ಪ್ರಣಯವಿಟ್ಟಂತೆ ತೋರುವದು. ಪರದೇಶಿ ಮಗಳೆಂದು ಅವಳ ಮನಸ್ಸಿನ ವಿರೋಧವಾಗಿ ನಡೆ ಯದೆ ಹೋದುದರ ಪರಿಣಾಮವು ಈ ವಿಧವಾಗಿದೆ. ರಂಗರಾಯನು ಸ- ದ್ಗುಣಿಯಾಗಿದ್ದರೆ ಅವಳ ಮನಸ್ಸಿನಂತೆ ನಡೆಯಬಹುದಾಗಿತ್ತು. ಇನಾಮು ದಾರನು ನೀಚನಿರುವನು. ಅಪ್ರಬುದ್ಧಳಾದ ನಿನ್ನನ್ನು ಮೋಸಗೊಳಿಸ ಬಹುದು ಮೊದಲಾಗಿ ನಾನು ಉಪದೇಶ ಮಾಡಿದರೂ, ನನ್ನ ಮಾತಿನ ಪರಿವೆ ಅವಳಿಗಿಲ್ಲ. ಅಚ್ಛೆಯ ಪರಿಣಾಮವು ಇವೇ ರೀತಿ ಆಗುವದೋ ಏನೋ!"

"ಇನ್ನೂ ಅನಭಿಜ್ಞ ಬಾಲಿಕೆಯವಳು. ಜಗತ್ತಿನ ವ್ಯವಹಾರ ರೀತಿಗಳ ಪರಿಚಯ ಅವಳಿಗಿಲ್ಲ. ಸಾಧುಭಾವವು ಹೀಗೆ ಮೋಸ ಹೋಗುವ ಸಂಭವವುಂಟು. ಅವಳಿಗೆ ನಾಲ್ಕು ಉಪದೇಶಪರ ಮಾತು ಹೇಳಿದರೆ ತಾನೇ ದಾರಿಗೆ ಬರುವಳು. ರಂಗರಾಯನು ಕಮಲೆಯಂಥ ಕನ್ಯೆಯನ್ನು ವರಿಸಲು ತೀರ ಅಪಾತ್ರನು. ಅವನ ಪ್ರಣಯವಾದರೂ ನಿಶ್ಚಲವಿರುವದೆಂಬುದನ್ನು ಹೇಗೆ ಗುರುತಿಸಬೇಕು? ಹಿಂದೆ ಒಬ್ಬಿಬ್ಬರು ಪ್ರಣಯಿನಿಗಳ ಪ್ರಣಯಭಂಗ ಮಾಡಿರುವವರಿಂದ ಅವನಲ್ಲಿ ಯಾವ ವಿಧವಾದ ವಿಶ್ವಾಸವಿಡಲೂ ಮಾರ್ಗವಿಲ್ಲ. ಕಮಲೆಯನ್ನು ವರಿಸುವ ಬಗ್ಗೆ ಅಭಿವಚನವನ್ನಾದರೂ ಕೊಡಲಿಕ್ಕೆ ಅವನು ಸಿದ್ಧನಿರುವನೋ ಹೇಗೆಂಬದನ್ನು ಮೊದಲು ತಿಳಿದುಕೊಳ್ಳಬೇಕು. ಅವನ ಪ್ರಣಯವು ಮೋಸಗಾರಿಕೆಯದಿದ್ದರೆ ಅವನು ನಾಲ್ಕು ಜನರೆದುರಿಗೆ ಎಂದೂ ವಚನ ಕೊಡಲಾರನು. ಹಾಗೆ ವಚನ ಕೊಡದಾದ ಮೇಲೆ ಅವನ ವರ್ತನದ ಬಗ್ಗೆ ಹಾಗು ಗುಣಗಳ ಬಗ್ಗೆ ಕಮಲೆಯ ತಲೆಯಲ್ಲಿ ಪ್ರಕಾಶ ಬೀಳುವದು. ಅನಂತರದಲ್ಲಿ ಯಾರ ಉಪದೇಶವೂ ಇಲ್ಲದೆ ಅವಳ ಮನಸ್ಸು ತಾನಾಗಿ ತಿರುಗುವದು." ಎಂದು ಹಂಬೀರರಾಯನು ತಿಳಿಸಿದನು.

"ಯೋಗ್ಯ ಉಪಾಯವಿದು." ಎಂದು ಯಶವಂತರಾಯನು ನುಡಿದು:- "ಪುತ್ಥಳಿ, ಉಪಹಾರದ ಸಿದ್ಧತೆಯಾಯಿತೆ?"

ಪುತ್ಥಳಿಯು ಹೊರಗೆ ಬಂದು:—"ಸಿದ್ಧತೆಯಾಗಿದೆ, ತೆಗೆದುಕೊಂಡು ಬರುವೆನು."

'ಕಮಲೆಯೆಲ್ಲಿ?' ಎಂದು ಯಶವಂತರಾಯನು ಉತ್ಕಂಠಿತನಾಗಿ ಕೇಳಿದನು.

"ಅವಳು ಆಗಲೆ ಹೊರಗೆ ಹೋದಳು. ಸ್ವಲ್ಪ ಕೆಲಸ ಮಾಡಿ ತನ್ನ ಪಾಲಿನ ಕೆಲಸ ತೀರಿತೆಂದು ಹೇಳಿ ಹೊರಟು ಹೋದಳು."

"ಬಹಳ ಮಾಡಿ ಅವಳು ರಂಗರಾಯನ ಮನೆಗೆ ಹೋಗಿರಬಹುದು." ಎಂದು ಯಶವಂತರಾಯನು ನುಡಿದು, ಖಿನ್ನವಾಣಿಯಿಂದ:"ಹಂಬೀರರಾಯಾ, ನೋಡಿದೆಯಾ, ಈಗಿನ ಹುಡುಗರ ಸ್ವೇಚ್ಛಾಪ್ರವೃತ್ತಿಯನ್ನು? ಅಚ್ಚೆಯ ದುಷ್ಪರಿಣಾಮವಲ್ಲವೆ ಇದು? ನೀನು ಇದೀಗ ಊರಿಂದ ಬಂದಿದ್ದು, ನಿನ್ನೊಡನೆ ನಾಲ್ಕು ಮಾತಾಡುವದನ್ನು ಬಿಟ್ಟು, ಊರಲ್ಲಿಯೇ ದಿನಾಲು ಕಣ್ಣಿಗೆ ಬೀಳುವಂಥ ಆ ರಂಗರಾಯನ ಭೆಟ್ಟಿಯ ಆವಶ್ಯತೆಯು ಈಗ ಏನಿತ್ತು? ಇಂಥ ಹುಡುಗರಿಗೆ ಏನು ಹೇಳಬೇಕು? ಹೇಳಿದರಾದರೂ ಏನು ಪ್ರಯೋಜನ?"

"ಹುಡುಗೆಯರು ಯೋಗ್ಯಸ್ಥಾನ ನೋಡಿ ಪ್ರಣಯ ಮಾಡಬೇಕು. ಹಾಗೆ ಮಾಡದೆ ಹೋದರೆ ಹಿಂದಿನಿಂದ ಪಶ್ಚಾತ್ತಾಪಪಡಬೇಕಾಗುವದು." ಎಂದು ಹಂಬೀರರಾಯನು ಯಶವಂತರಾಯನಿಗೆ ಹೇಳಿ, ಪುತ್ಥಳಿಯನ್ನು ಕುರಿತು:— "ನೀನು ಅವಳಿಗಿಂತ ಎಷ್ಟಾದರೂ ಹೆಚ್ಚು ತಿಳಿದವಳಿರುವೆ. ನೀನು ಅವಳಿಗೆ ಚನ್ನಾಗಿ ಬುದ್ಧಿಗಲಿಸಬಾರದೇಕೆ?"

"ಅವಳು ಮಹಾ ಚಂಡಿತನದವಳು. ಒಂದೆರಡು ಸಾರೆ ಹೇಳಿ ನೋಡಿದೆನು. ತಂದೆಯವರೂ ಸೂಕ್ಷ್ಮವಾಗಿ ತಿಳಿಸಿದ್ದಾರೆ. ಆ ಮೊಂಡಿಯು ನಮ್ಮ ಮಾತುಗಳನ್ನು ಲಕ್ಷ್ಯಕ್ಕೆ ತರುವದೇ ಇಲ್ಲ. 'ನೀನೇಕೆ ಪ್ರಣಯ ಮಾಡುತ್ತಿರುವೆ?' ಎಂದು ಎದುರು ವಾದಿಸುತ್ತಾಳೆ." ಎಂದು ಪುತ್ಥಳಿಯು ನಮ್ರತೆಯಿಂದ ಹಂಬೀರರಾಯನಿಗೆ ಹೇಳಿದಳು.

"ಒಳ್ಳೆದು, ಅವಳು ಬರಲಿ. ಹಿಂದಿನಿಂದ ಈ ವಿಷಯದ ಪರಿಷ್ಕಾರ ಮಾಡೋಣ. ಸದ್ಯಕ್ಕೆ ಉಪಹಾರ ತೆಗೆದುಕೊಂಡು ಬಾ" ಎಂದು ಯಶವಂತರಾಯನು ಪುತ್ಥಳಿಗೆ ಹೇಳಿದನು.

"ಕಮಲೆಯು ಈಗ ಬರಬಹುದು; ಸ್ವಲ್ಪ ತಡೆಯಿರಿ." ಎಂದು ಹಂಬೀರರಾಯನು ಹೇಳಿದನು.

"ಅವಳು ಈಗಲೇ ಬರುವಳೆಂಬದರ ನಿಯಮವಿಲ್ಲ. ನಾವು ಅವಳ ಮಾರ್ಗ ನಿರೀಕ್ಷಣೆ ಮಾಡುತ್ತ ಕುಳಿತರೆ ಗಳಿಗೆ ಎರಡು ಗಳಿಗೆ ಕುಳಿತುಕೊಳ್ಳಬೇಕಾದೀತು." ಎಂದು ಯಶವಂತರಾಯನು ಹಂಬೀರರಾಯನಿಗೆ ಹೇಳಿ, ಪುತ್ಥಳಿಯನ್ನು ಕುರಿತು:—"ಹೋಗು, ಉಪಹಾರದ ಸಾಮುಗ್ರಿಗಳನ್ನು ತೆಗೆದುಕೊಂಡು ಬಾ."

ಪುತ್ಥಳಿಯು ಉಪಹಾರ ಸಾಮುಗ್ರಿಗಳನ್ನು ತಂದು, ತಂದೆಗೂ ತನ್ನ ಪ್ರಣಯದೇವನಿಗೂ ಉಣಬಡಿಸಿದಳು. ಕಡೆಗೆ ಹಂಬೀರರಾಯನ ಆಗ್ರಹಕ್ಕಾಗಿ ಅವಳು ಉಪಹಾರಕ್ಕೆ ಕುಳಿತಳು. ಮೂವರೂ ಸಂತೋಷದಿಂದ ಮಾತಾಡುತ್ತ ಉಪಹಾರ ತೀರಿಸಿದರು. ಯಶವಂತರಾಯನು ಸ್ವರಾಜ್ಯಸೇವೆಯನ್ನು ಹೇಗೆ ಮಾಡಬೇಕೆಂಬದರ ಬಗ್ಗೆ ಹಂಬೀರರಾಯನಿಗೆ ನಾಲ್ಕು ಉಪದೇಶಪರ ಮಾತುಗಳನ್ನು ಹೇಳಿದನು. ಅನಂತರದಲ್ಲಿ ಅವನು:— "ಹಂಬೀರರಾಯಾ, ಪರದೇಶಿಗಳಾದ ಹುಡುಗೆಯರನ್ನು ಚಲೋ ಮನೆಗೆ ಕೊಟ್ಟು ಚಿಂತೆ ದೂರಮಾಡಿಕೊಳ್ಳಬೇಕೆಂಬ ಇಚ್ಛೆ ನನ್ನದಿರುವದು. ನೀನು

ಜಹಾಗೀರದಾರನಿದ್ದರೂ ಆ ವೈಭವವನ್ನು ಕಳೆದುಕೊಂಡಿರುವದರಿಂದ ನನಗೆ ವ್ಯಸನವಾಗಿತ್ತು. ಇನ್ನು ನಾನು ಪುತ್ಥಳಿಯ ಸಲುವಾಗಿ ಯೋಚನೆ ಮಾಡುವ ಕಾರಣವಿಲ್ಲ. ಈಗ ನನ್ನ ಅರ್ಧ ಚಿಂತೆ ಕಡಿಯಿತು. ಕಮಲೆಗೆ ಅನುರೂಪನಾದ ವರನೊಬ್ಬನು ದೊರೆತರೆ ನನ್ನ ಚಿಂತೆಯು ಪೂರ್ಣವಾಗಿ ತೊಲಗುವದು. 'ಹೆಣ್ಣು ಅಂದರೆ ಹುಣ್ಣು' ಎಂದೆನ್ನುವ ಮಾತು ಸುಳ್ಳಲ್ಲ."

"ದೇವರ ಅನುಗ್ರಹದಿಂದ ನಿಮ್ಮ ಚಿಂತೆಯು ಪೂರ್ಣವಾಗಿ ತೊಲಗುವದು. ನೀವು ಯೋಚಿಸಬೇಡಿರಿ" ಎಂದು ಹಂಬೀರರಾಯನು ಯಶವಂತರಾಯನಿಗೆ ಧೈರ್ಯ ಕೊಟ್ಟನು.

ಮೂವರೂ ಉಪಹಾರ ತೀರಿಸಿಕೊಂಡು ತಾಂಬೂಲ ಮೆದ್ದರು. ಇನ್ನೂ ಕಮಲೆ ಬಂದಿರಲೇ ಇಲ್ಲ. ಅದಕ್ಕಾಗಿ ಯಶವಂತರಾಯನು ಅವಳ ಮೇಲೆ ಸಂತಾಪಗೊಂಡನು.

---

## ೧೧ ಮೋಸದ ಪ್ರಣಯ.

ಯಶವಂತರಾಯನೂ ಹಂಬೀರರಾಯನೂ ಕಮಲೆಯ ಸಂಬಂಧವಾಗಿ ಮಾತಾಡುತ್ತ ಕುಳಿತಾಗ ಯಶವಂತರಾಯನ ಪುರೋಹಿತನಾದ ಹರಭಟ್ಟನು ಅಲ್ಲಿಗೆ ಬಂದನು. ಯಶವಂತರಾಯನು ಅವನನ್ನು ಸನ್ಮಾನಿಸಿ ಕುಳ್ಳಿರಿಸಿದ ಬಳಿಕ ಹರಭಟ್ಟನು:—"ಯಶವಂತರಾಯರೆ, ಈ ನಿಮ್ಮ ಅಳಿಯಂದಿರು ಎಂದು ಬಂದರು?" ಎಂದು ಕೇಳಿದನು.

"ಇಂದೇ ಬಂದನು." ಎಂದು ಯಶವಂತರಾಯನು ಹೇಳಿ-"ಹರಭಟ್ಟರೆ, ಹಂಬೀರರಾಯನಿಗೆ ಮಹಾರಾಜರ ಸ್ವರಾಜ್ಯ ಸಂಗ್ರಾಮದಲ್ಲಿ ಭಾಗ ವಹಿಸಲು ಸಂಧಿ ದೊರೆತಿದೆ. ಇವನು ಪಾಕಡೆ ಮಾನಾಜಿರಾಯನ ಕೈಕೆಳಗೆ ಜಮಾದಾರನಾಗಿ ನಿಯಮಿಸಲ್ಪಟ್ಟಿರುವನು."

"ಸಂತೋಷದ ವಿಷಯ." ಎಂದು ಹರಭಟ್ಟನು ನುಡಿದು:—"ನಿಮ್ಮ ಹಿರೇಮಗಳು ದೈವಶಾಲಿಯಿರುವಳು; ಆದರೆ ಕಮಲೆಯ ಪ್ರಾರಬ್ಧದಲ್ಲೇನಿರುವದೋ ನೋಡಬೇಕು. ನಿಮ್ಮ ಅತಿರೇಕವಾದ ವಾತ್ಸಲ್ಯವು ಅವಳನ್ನು ಮನಬಂದತ್ತ ಎಳೆಯತೊಡಗಿದೆ. ಆ ಮುಗ್ಧಬಾಲಿಕೆಯು ಮೋಸ ಹೋಗುವಳೆಂದು ನನ್ನ ಮನಸ್ಸಿಗೆ ಹೊಳೆಯತೊಡಗಿರುವದು. ಇನಾಮುದಾರ ರಂಗ

ರಾಯನು ನೀಚನಿರುವನು. ನಿಮ್ಮ ಮಗಳು ಅವನ ಬಲೆಯಲ್ಲಿ ಸಿಲುಕಿದ್ದು ಹಿತಕರವಾಗಲಾರದೆಂದು ನನಗೆ ತೋರುವದು. ರಂಗರಾಯನು ಹಿಂದೆ ಒಮ್ಮೆ ಒಬ್ಬ ತರುಣಿಯ ಪ್ರಣಯಭಂಗ ಮಾಡಿ ಅವಳ ಆಯುಷ್ಯವನ್ನೇ ದುಃಖ ಮಯ ಮಾಡಿದನು. ಇಂಥ ನರಾಧಮನಲ್ಲಿ ನಿಮ್ಮಂಥವರ ಮಗಳು ಪ್ರಣಯ ವುಳ್ಳವಳಾಗತೊಡಗಿದ್ದು ಶೋಚನೀಯವು. ಅವನು ದೊಡ್ಡ ಮನೆತನದವ ನೇನೋ ನಿಜವು; ಆದರೆ ನಿಮ್ಮೊಡನೆ ಸಂಬಂಧ ಮಾಡಲು ಹಾಗು ಕಮಲೆ ಯಂಥ ಗುಣಸಂಪನ್ನೆಯನ್ನು ವರಿಸಲು ಅವನು ತುಂಬಾ ಅನರ್ಹನಿರುವನು. ಅವನು ಕಮಲೆಯಲ್ಲಿ ಪ್ರಣಯವುಳ್ಳವನಾಗಿರುವನೆಂಬ ಮಾತಿನಲ್ಲಿ ಸಹ ಸಂಶ ಯವೇ ಇರುವದು. ಅವನು ಅತ್ಯಂತ ಮೋಸಗಾರನು. ಇಂದು ಕಮಲೆಯಲ್ಲಿ ಪ್ರೀತಿಯನ್ನು ತೋರಿಸುತ್ತಿದ್ದರೆ, ನಾಳೆ ಆವಳನ್ನು ಬಿಸುಟಿ ಮತ್ತೊಬ್ಬಳಲ್ಲಿ ಅನುರಕ್ತನಾಗುವದಕ್ಕೂ ಹಿಂಜರಿಯುವದಿಲ್ಲ. ಇಂಥ ನೀಚ ಇನಾಮದಾರ ನೊಡನೆ ಸಂಬಂಧ ಮಾಡಲೆಳಸುವದು ತುಂಬಾ ಘಾತಕವಿರುವದೆಂದು ನನ್ನ ಅಭಿಪ್ರಾಯ."

ಹರಭಟ್ಟರ ಅಭಿಪ್ರಾಯವು ಯಶವಂತರಾಯನಿಗೂ ಹಂಬೀರರಾಯ ನಿಗೂ ಸರಿದೋರಿತು. ರಂಗರಾಯನು ಎಂಥ ಮನುಷ್ಯನೇ ಇರಲಿ, ಅವನು ಕಮಲೆಯಲ್ಲಿ ನಿಜವಾದ ಪ್ರಣಯವುಳ್ಳವನಿರುವನೋ ಇಲ್ಲವೋ ಪರೀಕ್ಷಿಸ ಬೇಕೆಂದು ಹಂಬೀರರಾಯನು ಯೋಚಿಸಿದನು. ಕಮಲೆಯು ರಂಗರಾಯನ ಮನೆಯಲ್ಲಿರುವಾಗಲೇ ಅಲ್ಲಿಗೆ ಹೋಗಿರಬೇಕೆಂದು ಯೋಚಿಸಿ:—"ಯಶವಂತ ರಾಯರೆ, ನಾನೂ ಹರಭಟ್ಟರೂ ರಂಗರಾಯನ ಮನೆಗೆ ಹೋಗಿ ಕಮಲೆಯ ವಿಷಯವಾಗಿ ಅವನ ಹೃದಯವು ಹೇಗಿರುವದೆಂಬದನ್ನು ತಿಳಿದುಕೊಳ್ಳುವೆವು. ಅವನಲ್ಲಿ ನಿಷ್ಕಲವಾದ ಪ್ರಣಯವಿದ್ದರೆ ಕಮಲೆಯನ್ನು ಅವನಿಗೆ ಅರ್ಪಿಸುವದು ಘಾತಕವೆನಿಸಲಿಕ್ಕಿಲ್ಲ. ಹಾಗಿರದಿದ್ದರೆ ಅಪಾತ್ರಸ್ಥಳದಲ್ಲಿ ಪ್ರಣಯವುಳ್ಳವಳಾದು ದಕ್ಕೆ ಕಮಲೆಗೆ ಪಶ್ಚಾತ್ತಾಪವಾಗಬಹುದು."

ಯಶವಂತರಾಯನು ಹರಭಟ್ಟನಿಗೆ ಹಂಬೀರರಾಯನ ಸಂಗಡ ಹೋಗಗ ಹೇಳಿದನು. ಅಷ್ಟರಲ್ಲಿ ಪುತ್ಥಳಿಯು ಅಲ್ಲಿಗೆ ಬಂದು ಯಶವಂತರಾಯನನ್ನು ಕುರಿತು:—"ಅಪ್ಪಾ, ಕಮಲೆಯು ಇಷ್ಟು ವೇಳೆಯವರೆಗೆ ರಂಗರಾಯನೊಡನೆ ಅವನ ಉದ್ಯಾನದಲ್ಲಿ ಸರಸವಾಡುತ್ತಿದ್ದಳೆಂದೂ, ಇದೀಗ ಮಂದಿರವನ್ನು ಇಬ್ಬರೂ ಪ್ರವೇಶಿಸಿದರೆಂದೂ ನಮ್ಮ ದಾಸಿ ಚಂಪೆಯು ಹೇಳಿದಳು. ನಾನೂ

ಹಂಬೀರರಾಯರೊಡನೆ ಅಲ್ಲಿಗೆ ಹೋಗಿ ಅವಳನ್ನು ಕರೆದುಕೊಂಡು ಬರುವೆನು. ಈಗ ಅವಳ ಗೂಢ ಗೋಷ್ಟಿಗಳು ಹೊರಬೀಳುವವಿರುವದರಿಂದ ಒಬ್ಬಳೇ ಇಲ್ಲಿಗೆ ಬರಲು ನಾಚಬಹುದು. ನಾನು ಅವಳನ್ನು ಸಮಾಧಾನ ಪಡಿಸಿ ಕರೆತರುವೆನು. ಹಂಬೀರರಾಯರು ರಂಗರಾಯನ ನಿಜವಾದ ವೃತ್ತಿಯನ್ನು ಕಂಡುಹಿಡಿದು, ಕಮಲೆಗೆ ಉಪದೇಶ ಮಾಡುವರು. ಮುಂದೆ ಅವಳಿಂದ ಅವಿಚಾರದ ಕೃತ್ಯಗಳು ಎಂದೂ ಘಟಿಸಲಾರವು. ಕಮಲೆಯು ಅಪಾತ್ರದಲ್ಲಿ ಪ್ರಣಯವಿರಿಸಿ ಮೋಸ ಹೋಗಿರುವದು ನಿಜ; ಆದರೆ ಅವಳ ಪಾಪಿತ್ರ್ಯಕ್ಕೆ ಕುಂದುಂಟಾಗಿಲ್ಲ. ಈ ಸಂಧಿಯಲ್ಲಿ ನಾವು ಅವಳನ್ನು ಚನ್ನಾಗಿ ಎಚ್ಚರಿಸಲೇ ಬೇಕು."

ಪುತ್ಥಳಿಯ ಮಾತು ಕೇಳಿ ಯಶವಂತರಾಯನು ಸಮಾಧಾನಪಟ್ಟನು. ಆಗ ಅವನು ಮಗಳನ್ನು ಕುರಿತು:—"ಪುತ್ಥಳಿ, ನೀನು ನಿಜವಾಗಿ ಗುಣಾಢ್ಯಳಿರುವೆ. ಅಂತೆಯೆ ಹಂಬೀರರಾಯನಂಥ ತೇಜಸ್ವಿಯಾದ ತರುಣನನ್ನು ವರಿಸುವ ಭಾಗ್ಯವು ನಿನಗೆ ಲಭಿಸತಕ್ಕದ್ದಿದೆ. ತಾಯಿಯನ್ನು ಕಳೆದುಕೊಂಡ ನೀವಿಬ್ಬರೂ ಅಕ್ಕ-ತಂಗಿಯರು ವಾತ್ಸಲ್ಯದಿಂದ ಬೆಳೆದವರಾಗಿದ್ದರೂ, ಉಭಯತರ ಸ್ವಭಾವಗಳಲ್ಲಿ ವಿಪರ್ಯಾಸವುಂಟಾದದ್ದು ತುಂಬಾ ಆಶ್ಚರ್ಯಜನಕವಿದೆ. ನಿನ್ನ ಗುಣಗಳು ಕಮಲೆಯಲ್ಲಿದ್ದರೆ ನಾನು ನಿಶ್ಚಿಂತ ಮನಸ್ಕನಾಗಿ ಆಯುಷ್ಯಕ್ರಮಣ ಮಾಡುತ್ತಿದ್ದೆನು."

"ಅಪ್ಪಾ!" ಪುತ್ಥಳಿಯು ವಿನಯದಿಂದ:-"ನೀವು ಕಮಲೆಯಲ್ಲಿ ದೋಷಾರೋಪಣೆ ಮಾಡಲಾಗದು. ಅವಳು ಅವಿಚಾರಿಯಲ್ಲ ರಂಗರಾಯನು ಮೋಸಗಾರನಿರುವನೆಂಬದನ್ನು ಅರಿಯದವಳಾದ ಅವಳಿಂದ ಅನುಚಿತವು ಘಟಿಸುತ್ತಲಿದೆ. ಇಂದು ನಿಶ್ಚಯವಾಗಿ ಅವಳ ಹೃದಯಪರಿವರ್ತನೆಯಾಗುವದೆಂದು ನಂಬಿದ್ದೇನೆ. ನೀವು ಸರಳವೃತ್ತಿಯವಳಾದ ಕಮಲೆಯಲ್ಲಿ ಕ್ರೋಧಗೊಳ್ಳದೆ ನನ್ನ ಮೇಲಿಟ್ಟಂತೆಯೆ ಅವಳಲ್ಲಿಯೂ ಪ್ರೇಮವಿಡಬೇಕೆಂದು ಪ್ರಾರ್ಥಿಸುವೆನು. ಅವಳು ಜಗತ್ತಿನ ಅನುಭವವಿಲ್ಲದ ಅಪ್ರಬುದ್ಧ ಬಾಲಿಕೆ. ಅಜ್ಞತನದಿಂದ ಅಲ್ಪವಾದ ಪ್ರಮಾದಗಳು ಘಟಿಸಿದ್ದರೂ ಅವು ಕ್ಷಮಾರ್ಹವಿರುವವು ನೀವು ಅವಳನ್ನು ಎಷ್ಟೂ ತಿರಸ್ಕರಿಸಕೂಡದು."

ಮಗಳ ಬುದ್ಧಿಮತ್ತೆಯನ್ನೂ ಹೃದಯದ ಕೋಮಲತೆಯನ್ನೂ ಭಗಿನೀ ಪ್ರೇಮವನ್ನೂ ನೋಡಿ ಯಶವಂತರಾಯನಿಗೂ ಹಂಬೀರರಾಯನಿಗೂ

ಸಂಭ್ರಮಾಯಿತು. ಯಶವಂತರಾಯನು ಕಮಲೆಯ ಅಪರಾಧಗಳನ್ನು ಕ್ಷಮಿಸುವ ಬಗ್ಗೆ ಆಶ್ವಾಸನೆ ಕೊಟ್ಟನು. ಅನಂತರದಲ್ಲಿ ಹಂಬೀರರಾಯ, ಹರಭಟ್ಟ, ಪುತ್ಥಳಿ ಈ ಮೂವರು ರಂಗರಾಯನ ಮಂದಿರದ ಕಡೆಗೆ ನಡೆದರು.

ರಂಗರಾಯನ ಬಾಗಿಲ ಬಳಿಯಲ್ಲಿ ಒಬ್ಬ ಕಾವಲುಗಾರನು ಕಾವಲಿನ ಕೆಲಸ ಮಾಡುತ್ತ ನಿಂತಿದ್ದನು. ಹಂಬೀರರಾಯ, ಹರಭಟ್ಟ, ಪುತ್ಥಳಿ ಈ ಮೂವರೂ ಅಲ್ಲಿಗೆ ಬಂದ ಕೂಡಲೆ ಅವನು:-"ನೀವು ಯಾರು?" ಎಂದು ಕೇಳಿದನು.

"ನಾವು ಯಶವಂತರಾಯರ ಮನೆಯವರು. ರಂಗರಾಯರು ಒಳಗೆ ಇರುವರೇನು?" ಎಂದು ಹಂಬೀರರಾಯನು ನುಡಿದನು.

"ಇದ್ದಾರೆ. ಈಗ ಅವರು ಕೆಲಸದಲ್ಲಿದ್ದಾರೆ. ಯಾರನ್ನೂ ಒಳಗೆ ಬಿಡ ಕೂಡದೆಂದು ಅವರು ನನಗೆ ಹೇಳಿದ್ದಾರೆ."

"ರಂಗರಾಯರ ಕಡೆಗೆ ಅತ್ಯಂತ ಮಹತ್ವದ ಕೆಲಸವಿರುವ ಮೂಲಕ ನಾವು ಅವರನ್ನು ಭೆಟ್ಟಿಯಾಗಬೇಕಾಗಿದೆ."

"ನಾಳೆ ಮುಂಜಾನೆ ಬರ್ರಿ. ಈಗ ನಿಮ್ಮನ್ನು ಒಳಗೆ ಬಿಟ್ಟರೆ ಧನಿಯರು ನನಗೆ ಸಿಟ್ಟು ಮಾಡುವರು."

"ನಾವು ಒಳಗೆ ಹೋಗಬೇಕಾಗಿರುವದರಿಂದ ನಿನ್ನ ಪ್ರತಿಬಂಧವನ್ನು ಲಕ್ಷಿಸುವದಿಲ್ಲ." ಎಂದು ಹಂಬೀರರಾಯನು ಹೇಳಿ, ಒಳಗೆ ಹೋಗಲುದ್ಯುಕ್ತನಾದನು. ಕೂಡಲೆ ಕಾವಲುಗಾರನು ತನ್ನ ಬಡಿಗೆಯನ್ನೆತ್ತಿ ಹಂಬೀರರಾಯನನ್ನು ಹೊಡೆಯ ಹೋದನು.

"ನಿನಗೆ ಜೀವವು ಬೇಡವಾಗಿದೆ!" ಎಂದು ಹಂಬೀರರಾಯನು ನುಡಿದು, ತನ್ನ ಖಡ್ಗವನ್ನು ಒರೆಯಿಂದ ಹಿರಿದನು. ಕೂಡಲೆ ಕಾವಲುಗಾರನು ಹಿಂದೆ ಸರಿದು:—"ಸರದಾರರೆ, ಕ್ಷಮಿಸಿರಿ. ಧನಿಯರ ಕಟ್ಟಾಜ್ಞೆಯಿದ್ದುದರಿಂದ ನಿಮಗೆ ಪ್ರತಿಬಂಧವನ್ನುಂಟು ಮಾಡಿದೆನು."

ಕಾವಲುಗಾರನ ಮಾತುಗಳನ್ನು ಕೇಳುತ್ತ ನಿಲ್ಲದೆ ಹಂಬೀರರಾಯನು ಒಳಗೆ ಹೋದನು. ಪುತ್ಥಳಿಯೂ ಹರಭಟ್ಟನೂ ಹಿಂದೆ ನಡೆದರು. ಅವರು ದಿವಾಣಖಾನೆಯ ಬಾಗಿಲಿಗೆ ಬರುತ್ತಲೆ ಕೆಳಗಿನಂತೆ ಭಾಷಣವು ಅವರಿಗೆ ಕೇಳಿಸಿತು.

"ನೀವು ನನ್ನನ್ನು ಮೋಸಗೊಳಿಸುವದಿಲ್ಲವಷ್ಟೆ? ತಂದೆಯವರು ನಿಮ್ಮ ವೃತ್ತಿಯ ಮೇಲೆ ಸಂಶಯಗೊಂಡಂತೆ ತೋರುವದು. ನೀವು ನನ್ನನ್ನು ನಿಜ

ವಾಗಿ ಪ್ರೀತಿಸುತ್ತಿದ್ದರೆ ನಿಮ್ಮ ಇಚ್ಛೆಯಂತೆ ನಡೆಯಲು ನಾನು ಸಿದ್ಧಳಿದ್ದೇನೆ. ನಿಮ್ಮ ಪ್ರೇಮದ ಬಗ್ಗೆ ತಂದೆಯವರಿಗೆ ನಂಬಿಗೆ ಮಾಡಿಕೊಟ್ಟು, ನಿಮಗೆ ನನ್ನನ್ನು ಲಗ್ನಮಾಡಿಕೊಡಲು ಸ್ಪಷ್ಟವಾಗಿ ಹೇಳುವೆನು."

"ಕಮಲೆ, ಲಗ್ನದ ವಿಷಯವಾಗಿ ಅಷ್ಟೊಂದು ಅವಸರವೇಕೆ? ನೀನು ನನ್ನವಳಾದೆಯೆಂದರೆ ಲಗ್ನವು ಬೇಕಾದಾಗ ನೆರವೇರುವದು. ನಿನ್ನ ತಂದೆಯು ನನ್ನ ಮೇಲೆ ನಿರರ್ಥಕವಾದ ದೋಷಾರೋಪಣೆ ಮಾಡುತ್ತಿರುವನು. ನನ್ನ ನಿನ್ನ ಪ್ರಣಯದ ಬಗ್ಗೆ ಇತರರಿಗೆ ಹೇಗೆ ಗೊತ್ತುವಾಯಾಗಬೇಕು? ಜೀವಂತ ನಾಗಿರುವವರೆಗೆ ನಾನು ನಿನ್ನ ಮೇಲಿನ ಪ್ರೇಮಕ್ಕೆ ಯಾವ ಕಾರಣದಿಂದಲೂ ಬಾಧೆ ತರಲಾರೆನು."

"ಇದು ನಿಮ್ಮ ಪ್ರತಿಜ್ಞಾವಾಕ್ಯವೆ?"

"ಮಾತಿನಲ್ಲಿ ವಿಶ್ವಾಸವಿಲ್ಲದ್ದಕ್ಕಾಗಿ ಹೀಗೆ ಪ್ರಶ್ನೆ ಮಾಡುವೆಯೇನು ಕಮಲೆ?"

"ಅವಿಶ್ವಾಸವಿಲ್ಲ; ಅಬಲೆಯರು ಭೀರು ಸ್ವಭಾವದವರು. ಅವರು ಸ್ವಾಭಾವಿಕವಾಗಿ ದುರ್ಬಲ ಹೃದಯದವರಿರುವದರಿಂದ ಅವರಲ್ಲಿ ಅನೇಕ ಸಂದೇಹಗಳು ತಲೆದೋರುವವು. ಪ್ರಣಯಿಗಳ ಪ್ರೇಮವು ಧ್ರುವತಾರೆಯಂತೆಯೂ ಹಿಮಾಚಲದಂತೆಯೂ ಅಚಲವಿರಬೇಕು. ಆ ಪ್ರೇಮಕ್ಕೆ ಚಾಂಚಲ್ಯವುಂಟಾದರ ಅವರು ಉಪಹಾಸಕ್ಕೀಡಾಗುವರಲ್ಲದೆ, ಆಯುಷ್ಯದೊಳಗಿನ ಸುಖವೂ ಹಾಳಾಗಿ ಹೋಗುವದು. ರಾಯರೆ, ನಿಮ್ಮಲ್ಲಿ ನನ್ನ ವಿಷಯವಾಗಿ ದೃಢವಾದ ಪ್ರೇಮವಿದ್ದ ಬಗ್ಗೆ ಆಶ್ವಾಸನೆ ದೊರೆತರೆ ನನ್ನ ತಂದೆಯವರ ಮನಸ್ಸಿನ ವಿರುದ್ಧವಾಗಿ ಸಹ ನಾನು ನಿಮ್ಮನ್ನು ವರಿಸಬಲ್ಲೆನು."

'ಪ್ರಿಯೆ, ನೀನು ಈ ವಿಷಯದಲ್ಲಿ ಯೋಚಿಸಬೇಡ. ಮತ್ತೇನುಹೇಳಲಿ?'

"ಪರಮಾತ್ಮನನ್ನು ಸ್ಮರಿಸಿ ಹೇಳಿರಿ."

"ಛೇ! ಇಷ್ಟು ಸಣ್ಣ ಮಾತಿಗಾಗ್ಯಿ ಆಣೆ-ಚೂರಿಗಳೇಕೆ?"

ಇಷ್ಟು ವೇಳೆಯವರೆಗೆ ಕಮಲೆ-ರಂಗರಾಯರ ಸಂಭಾಷಣ ಕೇಳುತ್ತ ನಿಂತ ಹಂಬೀರರಾಯ, ಹರಭಟ್ಟ, ಪುತ್ಥಳಿಯರು ಕೂಡಲೆ ಒಳಗೆ ಪ್ರವೇಶಿಸಿದರು. ಆಗ ಹಂಬೀರರಾಯನು:—"ಕಮಲಾತಾಯಿ, ಇಷ್ಟು ಸಣ್ಣ ಮಾತಿಗಾಗಿ ನೀನು ಆಣೆ-ಚೂರಿ ಮಾಡಿಸುವ ಅಗತ್ಯವಿಲ್ಲ. ಪ್ರಣಯಿಗಳ ವಿವಾಹವೆಂದರೆ ಅದೊಂದು ಗೊಂಬೆಯ ಮದುವೆ, ಕ್ಷಣಿಕವಾದ ಘಟನೆ, ನಿಮಿಷ

ಕಾಲದ ಸಂಬಂಧ. ಇಷ್ಟಕ್ಕಾಗಿ ಆಣೆ-ಆಶ್ವಾಸನೆಗಳೇಕೆ?" ಎಂದು ಕಮಲೆಗೆ ಹೇಳಿ ರಂಗರಾಯನನ್ನು ಕುರಿತು:—"ನಿಮ್ಮ ಅಭಿಪ್ರಾಯವು ಇಷ್ಟೇ ಇರುವ ದಲ್ಲವೆ ರಂಗರಾಯರೆ?"

ಈ ಆಕಸ್ಮಿಕವಾದ ಘಟನೆಯಿಂದ ರಂಗರಾಯನು ಗಾಬರಿಯಾದನು. ಆವನು ಧೈರ್ಯ ತೆಗೆದುಕೊಂಡು ಸಿಟ್ಟಿನಿಂದ:—"ನಿಮ್ಮನ್ನು ಇಲ್ಲಿ ಯಾರು ಕರಯಿಸಿದರು? ದ್ವಾರದ ಕಾವಲುಗಾರನು ನಿಮ್ಮನ್ನು ಹೇಗೆ ಒಳಗೆ ಬಿಟ್ಟನು? ಪ್ರಣಯಿಗಳು ಏಕಾಂತದಲ್ಲಿದ್ದಾಗ ಹೀಗೆ ಆಕಸ್ಮಿಕವಾಗಿ ಬರುವದು ಅಸಭ್ಯ ತನದ ಲಕ್ಷಣವಲ್ಲವೆ?"

"ರಂಗರಾಯಾ, ನಮ್ಮನ್ನು ಇಲ್ಲಿಗೆ ಯಾರೂ ಕರೆಯಿಸಿಲ್ಲ; ನಾವೇ ಬಂದಿ ರುವೆವು. ನಿಮ್ಮ ಕಾವಲುಗಾರನ ಅಡ್ಡಿ-ಆತಂಕಗಳನ್ನು ಕೇಳದೆ ಬಂದೆವು. ಪ್ರಣಯಿಗಳ ಪ್ರಣಯವು ದೃಢವಾಗಿರುವದೋ ಹೇಗೆಂಬದನ್ನು ನಿರೀಕ್ಷಿಸುವ ದಕ್ಕಾಗಿ ಬರುವದು ಅಸಭ್ಯತನವಲ್ಲ."

"ಹಂಬೀರರಾಯಾ, ಇಲ್ಲಿ ನಿನ್ನ ಕೆಲಸವಿಲ್ಲ. ಕಮಲೆಯು ಪ್ರಬುದ್ಧಳಿರು ವಳು. ಅವಳ ಸುಖ-ದುಃಖಗಳ ಕಲ್ಪನೆ ಅವಳಿಗಿದೆ. ನೀನೇನು ಅವಳ ಆಪ್ತ ಕೋಟಿಯೊಳಗಿನವನಲ್ಲ. ಕ್ಷಣವೂ ನಿಲ್ಲದೆ ಇಲ್ಲಿಂದ ಹೊರಟು ಹೋಗು. ನಾನೊಬ್ಬ ಮಾನ್ಯ ಮನುಷ್ಯನಿರುವೆನು ತಿಳಿಯಿತೆ?"

"ರಂಗರಾಯಾ, ನಿನ್ನ ಬೆದರಿಕೆಗೆ ನಾನೇನೂ ಬೆದರುವದಿಲ್ಲ. ಕಮಲೆ ಯಂಥ ಸರಳವೃತ್ತಿಯ ಹಾಗು ಸಾಧುಭಾವದ ಬಾಲಿಕೆಯನ್ನು ಸಹಜವಾಗಿ ಮೋಸಗೊಳಿಸುವಂಥ ನೈಪುಣ್ಯವು ನಿನ್ನಲ್ಲಿರುವದು. ನಾನು ಇವಳ ಆಪ್ತ ಕೋಟಿಯೊಳಗಿನವನಿರುವೆನೆಂದೇ ಅವಳ ಹಿತದ ಬಗ್ಗೆ ಯೋಚನೆ ಮಾಡ ಬೇಕಾಗಿದೆ. ರಂಗರಾಯಾ, ನೀನು ಎಂಥ ಮನುಷ್ಯನೆಂಬದರ ಕಲ್ಪನೆಯು ಕಮಲೆಗೆ ಇರಲಾರದು; ಆದರೆ ಈ ಗ್ರಾಮದ ಪ್ರಬುದ್ಧ ಜನರಿಗೆಲ್ಲ ನಿನ್ನ ಸ್ವಭಾವ ಪರಿಚಯವಿರುವ ಮೂಲಕ ನಿನ್ನ ಆತ್ಮಪೌರುಷದಿಂದ ಯಾರೂ ಮೋಸ ಹೋಗಲಾರರು."

ರಂಗರಾಯನು ಸಿಟ್ಟಿನಿಂದ ಹುಚ್ಚಾದನು. ಕಮಲೆಯು ಮಾತ್ರ ಈ ಘಟನೆಯಿಂದ ನಾಚಿದಳು. ರಂಗರಾಯನ ಸ್ವಭಾವವು ದುಷ್ಟವಿರುವದೋ ಇಲ್ಲವೋ ಎಂಬ ಕಲ್ಪನೆಯು ಸಹ ಅವಳಲ್ಲಿ ಹುಟ್ಟಿತು. ಅವಳ ಮನಸ್ಸು ಅನೇಕ ವಿಧದ ವಿಚಾರದಲ್ಲಿ ಮಗ್ನವಾಯಿತು. ಮುಖ ಬಾಗಿ ನಿಂತ ಕಮ

ಲೆಯ ಬಳಿಗೆ ಪುತ್ಥಳಿಯು ಹೋಗಿ:—"ತಂಗೀ, ನೀನು ಬೆಳ್ಳಗಿದ್ದದ್ದನ್ನೆಲ್ಲ ಹಾಲೆಂದು ನಂಬಬೇಡ. ನಿನಗಿಂತಲೂ ತಂದೆಯವರಿಗೆ ರಂಗರಾಯರ ಸ್ವಭಾವ ಪರಿಜ್ಞಾನವು ಚನ್ನಾಗಿದೆ."

ಕಮಲೆಯು ಮಾತಾಡಲಿಲ್ಲ. ರಂಗರಾಯನು ಸುಮ್ಮನಿರದೆ ಕ್ರೋಧೋನ್ಮತ್ತನಾಗಿ:—"ಪುತ್ಥಳಿತಾಯಿ, ನೀನು ಮಾತ್ರ ಈ ಹಂಬೀರರಾಯನೊಡನೆ ಪ್ರಣಯಕೇಳಿಯಾಡಬಹುದು; ಆದರೆ ಈ ನಿನ್ನ ತಂಗಿಯು ಮಾತ್ರ ನನ್ನ ಸಂಗಡ ಪ್ರೇಮಲೀಲೆಯಾಡಲು ನಿನ್ನ ಹಾಗು ನಿನ್ನ ತಂದೆಯ ಅಡ್ಡಿಯುಂಟು. ನಿಮ್ಮ ತಂದೆಯು ತನ್ನ ಮಕ್ಕಳ ವಿಷಯವಾಗಿ ಈ ಬಗೆಯ ವೈಷಮ್ಯ ಭಾವನೆಯುಳ್ಳವನಾಗಿದ್ದದ್ದು ಆಶ್ಚರ್ಯವು."

"ನೀವು ಕಮಲೆಯನ್ನು ನಿಜವಾಗಿ ಪ್ರೀತಿಸುವಿರಾ? ಇವಳನ್ನು ವರಿಸುವ ಬಗ್ಗೆ ನೀವು ಸಂಕಲ್ಪ ಮಾಡಿಕೊಂಡಿರುವದಾದರೂ ನಿಜವೆ?" ಪುತ್ಥಳಿಯು ಕೇಳಿದಳು.

"ಈ ಮಾತಿನ ಉತ್ತರವನ್ನು ನಿನ್ನ ತಂಗಿಯೇ ಕೊಡುವಳು." ಎಂದು ರಂಗರಾಯನು ಆಧ್ಯಾತೆಯಿಂದ ನುಡಿದನು.

"ಉತ್ತರವು ನಿನ್ನ ಕುಬಾಯಿಂದ ಬೇಕಾಗಿದೆ. ಕಮಲೆಯ ಉತ್ತರದ ಮೇಲೆ ನಮ್ಮ ವಿಶ್ವಾಸವಿಲ್ಲ." ಹಂಬೀರರಾಯನು ತೀಕ್ಷ್ಣವಾದ ಧ್ವನಿಯಿಂದ ಮಾತಾಡಿದನು.

"ಹಂಬೀರರಾಯರೆ, ನನ್ನನ್ನು ವರಿಸುವ ಬಗ್ಗೆ ಇವರು ಒಪ್ಪಿರುವರು." ಕಮಲೆಯು ಮುಖಬಾಗಿಸಿ ಹೇಳಿದಳು.

"ನಿಜವೇನು ರಂಗರಾಯಾ?"

"ಒಣ ಉಸಾಬರಿ ನಿನಗೇಕೆ ಬೇಕು? ಕಮಲೆಯು ಹೇಳಿದ ಮಾತುಗಳ ಅರ್ಥವಾಗುವದಿಲ್ಲವೆ ನಿನಗೆ?" ರಂಗರಾಯ ಹೇಳಿದನು.

"ಯೋಗ್ಯ ಉತ್ತರ ದೊರೆಯದಿದ್ದರೆ ನಿನ್ನ ಅವಸ್ಥೆ ಒಳಿತಾಗಲಾರದು. ಎಚ್ಚರದಿಂದ ಮಾತಾಡು!" ಎಂದು ಹಂಬೀರರಾಯನು ಗರ್ಜಿಸಿದನು.

"ದಿವಾಣಖಾನೆಯಲ್ಲಿ ರಣಭೂಮಿ ಮಾಡಬೇಕೆಂದು ನಿನ್ನ ಮನಸ್ಸಿರುವದೇನು?"

"ಮನಬಂದಂತೆ ಮಾತಾಡಿದರೆ ನಿನ್ನ ವ್ಯವಸ್ಥೆ ಮಾಡಿಯೆ ಮುಂದೆ ಸಾಗಬೇಕಾಗುವದು." ಎಂದು ಹಂಬೀರರಾಯನು ಗರ್ಜಿಸಿದನು.

"ಹಂಬೀರರಾಯರೆ, ಸುಮ್ಮನೆ ಮಾತು ಬೆಳೆಯಿಸಬೇಡಿರಿ. ನಮ್ಮ ವಿವಾಹವು ನಿರ್ಧರವಾಗಿದೆ." ಎಂದು ಮುಖಬಾಗಿಸಿ ಕಮಲೆ ಉಸುರಿದಳು.

ಕಮಲೆಯು ಹೀಗೆ ನುಡಿದ ಕೂಡಲೆ ಹರಭಟ್ಟನು:—"ರಂಗರಾಯಾ, ನೀನು ಕಮಲೆಯನ್ನು ವರಿಸುವೆಯಾ? ನಾನು ನಿನ್ನ ಮನೆತನದ ಪುರೋಹಿತನಿರುವೆನು. ನನ್ನ ಮುಂದೆ ಮಾತ್ರ ಸುಳ್ಳಾಡಬೇಡ."

"ಇವರ ಪಾದಗಳನ್ನು ಮುಟ್ಟಿ ನಿಜವಾದ ಸಂಗತಿ ತಿಳಿಸು." ಎಂದು ಹಂಬೀರರಾಯನು ಹರಭಟ್ಟರ ಕಾಲಕಡೆಗೆ ಬೆರಳು ತೋರಿಸಿ ನುಡಿದನು.

"ನಿಮ್ಮ ಹೇಳಿಕೆಯಂತೆ ನಡೆಯಲು ನಾನೇನು ನಿಮ್ಮ ಮನೆಯ ಆಳಲ್ಲ. ತಿಳಿಯಿತೆ?"

"ನೀವು ನನ್ನನ್ನು ವರಿಸುವದು ನಿಜವಿದ್ದರೆ ಬ್ರಾಹ್ಮಣರ ಪಾದಸ್ಪರ್ಶ ಮಾಡಿ ಹೇಳಲಿಕ್ಕೆ ಅನುಮಾನ ಮಾಡುವವೇಕೆ? ನಿಮ್ಮ ಮಾತಿನಲ್ಲಿ ವಿಶ್ವಾಸ ಪಡದೆ ಹೋದ ಜನರಿಗೆಲ್ಲ ನಂಬಿಗೆಯಾಗಲಿ." ಎಂದು ಕಮಲೆಯು ರಂಗರಾಯನಿಗೆ ಹೇಳಿದಳು.

"ಕಮಲೆ, ನೀನು ಹುಚ್ಚಿಯಿರುವೆ. ಇಂಥ ಹಾದೀ ಹೋಗುವ ಜನರಿಗೆಲ್ಲ ಇಷ್ಟು ಮಹತ್ವ ಕೊಡುತ್ತ ಹೋದರೆ ನನ್ನ ಗೌರವವು ಉಳಿಯಲಿಕ್ಕಿಲ್ಲ."

"ರಂಗರಾಯಾ!" ಹರಭಟ್ಟನು ತೀಕ್ಷ್ಣವಾಣಿಯಿಂದ:-"ಇದರಲ್ಲಿ ಹಾದೀ ಹೋಗುವ ಜನರಾರೂ ಇಲ್ಲ. ನಾನು ನಿನ್ನ ಕುಲಪುರೋಹಿತನು; ಹಂಬೀರರಾಯನು ಪುತ್ಥಳಿತಾಯಿಯ ಛಾಪೀ ಪತಿಯು; ಹಾಗು ಯಶವಂತ ರಾಯರ ಪ್ರತಿನಿಧಿಯಾಗಿ ಬಂದವನು. ನೀನು ಪ್ರತಿಜ್ಞಾಪೂರ್ವಕನಾಗಿ ಹೇಳಿದರೆ ಕಮಲೆಯನ್ನು ವರಿಸುವ ದೃಢಸಂಕಲ್ಪವು ಯಶವಂತರಾಯನಿಗೆ ಆಗಿ ವಿವಾಹ ಕಾರ್ಯವು ಸುಸೂತ್ರವಾಗಿ ನೆರವೇರುವದು."

"ನಾವು ಗುಪ್ತವಾಗಿಯೇ ವಿವಾಹಕಾರ್ಯ ನೆರವೇರಿಸಿಕೊಂಡು ಯಶವಂತರಾಯರಿಗೆ ನಮಸ್ಕಾರ ಮಾಡಲು ಬರುವೆವು." ಎಂದು ರಂಗರಾಯನು ಆಡಂಬರಯುಕ್ತ ವಾಣಿಯಿಂದ ಹೇಳಿದನು.

"ಇಷ್ಟು ದೃಢನಿಶ್ಚಯವಿದ್ದ ಮೇಲೆ ಕಮಲೆಯನ್ನು ವರಿಸುವದು ನಿಜವೆಂದು ಪ್ರತಿಜ್ಞಾಪೂರ್ವಕವಾಗಿ ಹೇಳಲು ಅಡ್ಡಿಯೇನು? ನೀನು ಹಾಗೆ ಹೇಳಿದರೆ ಕಮಲೆಯು ಮೋಸ ಹೋಗುವದಿಲ್ಲವೆಂಬ ನಂಬಿಗೆಯು ಯಶವಂತರಾಯರಿಗೆ ಆಗುವದು." ಎಂದು ಹಂಬೀರರಾಯನು ಹೇಳಿದನು.

"ಇತರರ ನಂಬಿಗೆಯು ಅವಶ್ಯಕತೆಯು ಇಲ್ಲಿಲ್ಲ. ಮುಖ್ಯವಾಗಿ ಕಮಲೆಯು ನನ್ನನ್ನೂ ನಾನು ಕಮಲೆಯನ್ನೂ ನಂಬಿರುವೆವು; ಇಷ್ಟೇ ಸಾಕು. ಹಾಗೆ ಹೀಗೆ ಎಂದು ಆಜ್ಞೆವಿಧಿಸಲು ನೀನು ಎಷ್ಟರವನು? ಪುತ್ರಿಯನ್ನು ವರಿಸುವ ಸಂಕಲ್ಪ ಮಾಡಿದ್ದಕ್ಕಾಗಿ ನಿನಗೆ ದೊಡ್ಡ ಅಧಿಕಾರವೇ ಪ್ರಾಪ್ತವಾಯಿತೆಂದು ತಿಳಿಯಬೇಡ." ಎಂದು ರಂಗರಾಯನು ಮರ್ಮಭೇದಕವಾಗಿ ನುಡಿದನು.

"ನಿನ್ನ ಈ ಉನ್ಮತ್ತನದ ಪ್ರಾಯಶ್ಚಿತ್ತವು ಬೇಗನೆ ದೊರೆಯುವದು" ಎಂದು ಹಂಬೀರರಾಯನು ರಂಗರಾಯನಿಗೆ ಹೇಳಿ, ಕಮಲೆಯನ್ನು ಕುರಿತು: "ಕಮಲೆ, ನೀನು ನಿನ್ನ ತಂದೆಯ ಆಜ್ಞೆ ಮೀರಿ ಮನಸೋಕ್ತಳಾಗಿ ನಡೆಯುವದಕ್ಕೆ ಸಿದ್ಧಳಿರುವೆಯಾ? ಈ ರಂಗರಾಯನು ಮಹಾ ಕಪಟಿಯೂ ನೀಚನೂ ಇರುವದರಿಂದ ಇವನನ್ನು ನೀನು ವರಿಸಬಾರದೆಂದು ನಿನ್ನ ತಂದೆಯವರ ಇಚ್ಛೆಯುಂಟು. ಒಂದು ವೇಳೆ ನೀನು ಇವನಲ್ಲಿ ಪ್ರಣಯಯುಕ್ತಳಾಗಿದ್ದುದಾದರೆ ನಿನ್ನನ್ನು ವರಿಸುವ ಬಗ್ಗೆ ವಚನ ಕೊಟ್ಟರೆ ಮಾತ್ರ ನೀನು ಇವನ ಮನೆಯಲ್ಲಿ ಹೆಜ್ಜೆಯಿಡಬಹುದು. ನಿನ್ನ ಇಚ್ಛೆ ಏನಿದೆ? ನೀನು ಇವನ ಮೋಸದ ಮಾತುಗಳಿಗೆ ಒಳಗಾಗಿ ವಿವೇಕವನ್ನು ಕಳೆದುಕೊಂಡರೆ ಪಶ್ಚಾತ್ತಾಪ ಹೊಂದುವ ಪ್ರಸಂಗವು ನಿನಗೆ ತಪ್ಪಿದ್ದಲ್ಲವೆಂದು ಸೆರಗಿಗೆ ಗಂಟು ಹಾಕಕೋ!"

ಕಮಲೆಯು ಹಂಬೀರರಾಯನ ಮಾತುಗಳಿಂದ ಗೊಂದಲದಲ್ಲಿ ಬಿದ್ದಳು. ರಂಗರಾಯನು ಜನರ ತಿಳುವಳಿಕೆಯ ಪ್ರಕಾರ ಮೋಸಗಾರನೇ ಇರಬಹುದೇನೆಂಬ ವಿಚಾರವು ಅವಳಲ್ಲಿ ಹುಟ್ಟಿತು. ಅವಳು ಸ್ವಲ್ಪ ಹೊತ್ತು ವಿಚಾರಿಸಿ ರಂಗರಾಯನನ್ನು ಕುರಿತು: "ನೀವು ನನ್ನನ್ನು ವರಿಸಲು ಸಿದ್ಧರಿದ್ದುದೇ ಆದರೆ ಹಾಗೆ ವಚನ ಕೊಡಲಿಕ್ಕೆ ಅಡ್ಡಿಯಿಲ್ಲವೆಂದು ನನ್ನ ಅಭಿಪ್ರಾಯ."

"ಕೇವಲ ವಚನವನ್ನಷ್ಟೇ ಪ್ರಮಾಣವೆಂದು ಭಾವಿಸಲು ಬರುವಂತಿಲ್ಲ. ನಾಳಿನ ನವಮಿಯ ದಿನ ಲಗ್ನದ ಮುಹೂರ್ತವಿದೆ 'ಅಂದು ಸುಮುಹೂರ್ತೆ ಸಾವಧಾನಃ' ಆಗಿ ಬಿಡತಕ್ಕದ್ದು. ಆ ಮುಹೂರ್ತದ ವರೆಗೆ ಕಮಲೆ-ರಂಗರಾಯರು ಪರಸ್ಪರರನ್ನು ಭೆಟ್ಟಿಯಾಗತಕ್ಕದ್ದಲ್ಲ." ಎಂದು ಹರಭಟ್ಟರು ಹೇಳಿದರು.

"ಇಷ್ಟೆಲ್ಲ ಕಟ್ಟಳೆಗಳಿಗೊಳಗಾಗಲಿಕ್ಕೆ ನಾನೇನೂ ಹುಚ್ಚನಲ್ಲ. ಇನ್ನಾವುದಾದರೂ ನನ್ನನ್ನು ಈ ಕಮಲೆಗಿಂತ ಹೆಚ್ಚಿನ ಗುಣರೂಪಸಂಪನ್ನೆಯರು ವರಿಸಲಿಕ್ಕೆ ಸಿದ್ಧರಿರುವರು; ಅವರಿನ್ನೂ ದೂರದಲ್ಲಿರುವರು; ಸಮೀಪಕ್ಕೆ ಬರಬಹುದು."

"ಹೀಗೆ ಏನು?" ಎಂದೆಂದು ಹಂಬೀರರಾಯನು ವ್ಯಂಗ್ಯವಾಗಿ ನಕ್ಕು-"ಆ ಗುಣರೂಪ ಸಂಪನ್ನೆಯರು ದೂರದಲ್ಲಿರುವ ಮೂಲಕ ಅವರು ಸಮೀಪಕ್ಕೆ ಬರುವವರೆಗೆ ಕಮುಲೆಯು ಬಳಿಯಲ್ಲಿರಲಿ; ಅವರು ಸಮೀಪಕ್ಕೆ ಬಂದ ಕೂಡಲೆ ಸಮೀಪದ ಕಮುಲೆಯನ್ನು ದೂರ ಮಾಡಲಿಕ್ಕೆ ಬರುವದೆಂದು ನಿನ್ನ ಮನೀಷೆ ಯಿರುವದಲ್ಲವೆ ರಂಗರಾಯಾ?"

"ನಿನ್ನಂಥ ವಿತಂಡ ವಾದಿಗೆ ಏನನ್ನೂ ಹೇಳುವದಕ್ಕೆ ನನ್ನ ಇಚ್ಛೆಯಿಲ್ಲ." ರಂಗರಾಯನು ನಿಷ್ಠೂರವಾಗಿ ಹೇಳಿದನು.

"ಕೇಳಿದೆಯಾ ಕಮುಲೆ? ನೀನು ಎಂಥ ಸ್ಥಳದಲ್ಲಿ ನಂಬಿಗೆಯಿಟ್ಟಿರುವೆ ಯೆಂಬದರ ಪರೀಕ್ಷೆಯಾಯಿತೆ?"

"ರಂಗರಾಯರೆ!" ಕಮುಲೆಯು ದೈನ್ಯದಿಂದ:—"ನೀವು ಜನರಂದಂತೆ ಮಾಡುವಿರಿ. ನನ್ನಲ್ಲಿ ನಿಮ್ಮ ಪ್ರೇಮವಿದ್ದುದೇ ನಿಜವಾದರೆ, ವಚನ ಕೊಡಲಿಕ್ಕೆ ಅಡ್ಡಿಯೇನು? ಇಲ್ಲಿ ವಚನ ಕೊಡಲಿಕ್ಕೆ ನಿಮ್ಮ ಮಾನವಂತ ಮನಸ್ಸು ಒಪ್ಪ ದಿದ್ದರೆ ತಂದೆಯವರೆದುರಿಗಾದರೂ ವಚನ ಕೊಡಲಿಕ್ಕೆ ಅಡ್ಡಿಯೇನು? ನಡೆ ಯಿರಿ, ಮನೆಗೆ ಹೋಗೋಣ. ಎಲ್ಲ ಮಾತು-ಕತೆಗಳೂ ಅಲ್ಲಿಯೇ ನಡೆಯಲಿ."

"ಕಮುಲೆ, ಪ್ರಿಯಕರೆ!" ರಂಗರಾಯನು ಪ್ರೇಮಾಭಿನಯ ಮಾಡುತ್ತ: "ನಿನಗೆ ಹುಚ್ಚು ಹಿಡಿದಿರುವದೇನು? ನನ್ನ ನಿನ್ನ ಪ್ರೇಮಸಂಬಂಧದಲ್ಲಿ ಪ್ರವೇಶ ಮಾಡಲಿಕ್ಕೆ ಈ ಹಂಬೀರರಾಯನಿಗೆ ಅಧಿಕಾರವೇನಿದೆ? ನಮ್ಮಿಬ್ಬರ ಪ್ರೇಮದ ಅರಿವು ಪರಸ್ಪರರಿಗೆ ಇದ್ದೇ ಇರುವದು. ಯಶವಂತರಾಯರಿಗೆ ಸಹ ಇಂಥವರೇ ಏನೇನೋ ದುರುಪದೇಶ ಮಾಡಿ ತಲೆ ತಿರುಗಿಸಿರುವರು. ನೀನು ಮನೆಗೆ ಹೋಗುವದೇ ಬೇಡ. ನಾವಿಬ್ಬರೂ ವಿವಾಹಾನಂತರದಲ್ಲಿಯೇ ಯಶವಂತರಾ ಯರ ಆಶೀರ್ವಾದ ಪಡೆಯಲು ಹೋಗೋಣ. ಈಗಾದರೂ ಆಯಿತೆ?"

"ವಿವಾಹವಾಗುವವರೆಗೆ ಕಮುಲೆಯು ನಿನ್ನಲ್ಲಿರಲು ಸಾಧ್ಯವಿಲ್ಲ. ಕೊನೆಗೆ ವಿಧಿಪೂರ್ವಕವಾದ ವಾಙ್ನಿಶ್ಚಯವಂತು ಆಗಲೇಬೇಕು." ಎಂದು ಸಿಟ್ಟಿನಿಂದ ಹಂಬೀರರಾಯನು ನುಡಿದನು.

"ಈ ಮಾತಿಗಾದರೂ ನೀವು ಒಪ್ಪಿರಿ." ಎಂದು ಕಮುಲೆಯು ವಿನಯ ದಿಂದ ರಂಗರಾಯನಿಗೆ ಬೇಡಿಕೊಂಡಳು.

"ನಾನು ಈ ಉನ್ಮತ್ತನ ಯಾವ ಮಾತುಗಳನ್ನೂ ನಡೆಯಿಸಲು ಒಪ್ಪುವ ದಿಲ್ಲ." ಎಂದು ರಂಗರಾಯನು ಕಮುಲೆಗೆ ಹೇಳಿ:—"ನಾನೇನು ನಿನ್ನ ಆಳಲ್ಲ;

ನೀನೇನು ನನ್ನ ಧನಿಯಲ್ಲ. ಸುಮ್ಮನೆ ಇಲ್ಲಿಂದ ಹೊರಟು ಹೋಗು!" ಎಂದು ಹಂಬೀರರಾಯನನ್ನು ಕುರಿತು ಗರ್ಜಿಸಿದನು.

"ಒಳ್ಳೇದು; ಹೋಗುವದಾದರೆ ನಿನ್ನ ಇತ್ಯರ್ಥ ಮಾಡಿಯೇ ಮುಂದೆ ಹೋಗುವೆನು. ಒಬ್ಬ ಅಬಲೆಯನ್ನು ಮೋಸಗೊಳಿಸಿ ಅವಳ ಪಾವಿತ್ರ್ಯಭಂಗ ಗೊಳಿಸಲು ಸಿದ್ಧನಾಗಿರುವೆಯಾ ನೀಚಾ!" ಎಂದು ಹಂಬೀರರಾಯನು ಗರ್ಜಿಸಿ, ಹರಭಟ್ಟನನ್ನು ಕುರಿತು:—"ಹರಭಟ್ಟರೆ, ನೀವು ಈ ಪುತ್ಥಳಿ-ಕಮಲೆಯರನ್ನು ಕರೆಕೊಂಡು ಹೊರಗೆ ಹೋಗಿರಿ. ನಾನು ಇವನ ಸೊಕ್ಕನ್ನು ಇಳಿಸಿಯೇ ಬರುವೆನು." ಎಂದು ನುಡಿದು, ಖಡ್ಗವನ್ನು ಒರೆಯಿಂದ ಹಿರಿದು ಝಳಪಿಸತೊಡಗಿದನು.

"ರಕ್ತಪಾತ ಮಾಡುವೆಯಾ? ನನ್ನ ಕೊಲೆ ಮಾಡುವೆಯಾ?" ಎಂದು ರಂಗರಾಯನು ಗಾಬರಿಗೊಂಡು ನುಡಿದು:—"ಹಂಬೀರರಾಯಾ, ಈ ಯಃಕಶ್ಚಿತ ಹುಡುಗೆಯ ಸಲುವಾಗಿ ಜೀವವನ್ನು ಕಳೆಕೊಳ್ಳಲಿಕ್ಕೆ ನಾನೇನು ಹುಚ್ಚನಲ್ಲ. ಇವಳನ್ನು ಕರೆಕೊಂಡು ಹೋಗಬಹುದು. ನಾನು ಇವಳನ್ನು ಮದುವೆಯಾಗಲು ವಚನ ಕೊಡುವದಕ್ಕೆ ಸಿದ್ಧನಿಲ್ಲ. ಇವಳಿಗಿಂತ ರೂಪವತಿಯು ದೊರೆತರೆ, ಇವಳನ್ನು ವಿವಾಹವಾಗುವ ಆವಶ್ಯಕತೆಯೇನು? ನೀನು ಇವಳನ್ನು ಕರೆಕೊಂಡು ಹೋಗು."

"ಈಗ ನಿಜವನ್ನು ಹೇಳಿದೆ." ಹಂಬೀರರಾಯನು ನುಡಿದು, ಕಮಲೆಯನ್ನು ಕುರಿತು:—"ಕೇಳಿದೆಯಾ ಕಮಲೆ? ನಿನ್ನ ಪ್ರಣಯದೇವನ ಮನೋದಯವು ಈಗಲಾದರೂ ನಿಚ್ಚಳವಾಗಿ ತಿಳಿಯಿತೆ?"

"ಇದೇನು ರಂಗರಾಯರೇ? ನೀವು ವಿನೋದಕ್ಕೆ ಹೀಗೆ ಆಡುವಿರೋ, ನಿಜವಾಗಿಯೇ ನುಡಿಯುವಿರೋ? ನನ್ನ ಮೇಲಿನ ಪ್ರೇಮದಿಂದ ಹುಚ್ಚರಾದಂತೆ ನನಗೆ ಭಾಸವಾಗುತ್ತಿತ್ತು. ಒಂದು ಕ್ಷಣವಾದರೂ ನನ್ನನ್ನಗಲಿರಲಾರದೆ ಚಡಪಡಿಸುತ್ತಿರುವಂತೆ ತೋರುತ್ತಿತ್ತು. ಹೀಗಿದ್ದು, ಈಗ ಹೀಗೇಕೆ ವಿಚಿತ್ರ ಮಾತಾಡತೊಡಗಿರುವಿರಿ?" ಎಂದು ಕಮಲೆಯು ಗಾಬರಿಗೊಂಡು ನುಡಿದಳು.

"ನಿನ್ನ ಸಲುವಾಗಿ ನಾನು ನನ್ನ ಸ್ವಾತಂತ್ರ್ಯ ಕಳೆಕೊಳ್ಳಲಾರೆನು. ಒಂದು ವೇಳೆ ನಿನಗಿಂತ ರೂಪವತಿಯರು ಭೆಟ್ಟಿಯಾದರೆ ನಿನ್ನ ಆವಶ್ಯಕತೆಯೇನು? ನಿನಗಿಂತ ಸಾವಿರಾರು ಪಾಲು ಚಲುವೆಯರಾದ ಸಾವಿರಾರು ತರುಣಿಯರು ನನ್ನ ಸಲುವಾಗಿ ಮೀಸಲಾಗಿರಬಹುದು. ಏನೋ ಬಹಳೇ ದೈನ್ಯದಿಂದ ಪ್ರೇಮ

ಯೋಚನೆ ಮಾಡಿದ್ದರಿಂದ ನಿನ್ನ ಸಮಾಧಾನಕ್ಕಾಗಿ ಕೆಲ ದಿನಗಳಾದರೂ ಪ್ರೇಮ ಮಾಡೋಣವೆಂದು ಹಾಗೆ ವರ್ತಿಸಬೇಕಾಯಿತಲ್ಲದೆ, ಕೇವಲ ನಿನ್ನ ಸಲುವಾಗಿಯೆ ನಾನೇನು ತಪಾಚರಣೆ ಮಾಡುತ್ತಿರುವದಿಲ್ಲ. ನಿನ್ನಂಥವಳ ಆವಶ್ಯಕತೆ ನನಗಿಲ್ಲ. ನೀನು ಈ ಹಂಬೀರರಾಯನೊಡನೆ ಹೊರಟು ಹೋಗಬಹುದು."

ಕಮಲೆಯು ಸಿಟ್ಟಿನಿಂದ ಹುಚ್ಚಳಾದಳು. ರಂಗರಾಯನು ಈ ವಿಧದ ನೀಚವೃತ್ತಿಯುವನಿರುವನೆಂನು ಅವಳು ತಿಳಿದಿರಲಿಲ್ಲ. ಅವನ ವಿಷಯುವಾಗಿ ಹಲಕೆಲವು ದುಷ್ಟ ಆಖ್ಯಾಯಿಕೆಗಳು ಅವಳ ಕಿವಿಗೆ ಬಿದ್ದಿದ್ದರೂ, ಎಲ್ಲರೂ ಸರ್ವಾಂಗ ಸುಂದರರಿರುವದಿಲ್ಲ. ಎಲ್ಲರಲ್ಲಿಯೂ ಒಂದಿಲ್ಲೊಂದು ವಿಧದ ಲೋಪದೋಷಗಳಿದ್ದೇ ಇರುತ್ತವೆ; ಮುಂತಾಗಿ ವಿಚಾರಿಸಿ, ಮನಸ್ಸಿಗೆ ಸಮಾಧಾನವನ್ನುಂಟು ಮಾಡಿಕೊಳ್ಳುತ್ತಿದ್ದಳು. ಕೆಲವು ಕ್ಷಣಗಳಲ್ಲಿಯೆ ಅವನ ನಿಜವಾದ ಮನೋವೃತ್ತಿಯ ಪ್ರಕಾಶ ಬಿದ್ದದರಿಂದ ಅವಳಿಗೆ ಹೇಳಕೂಡದಷ್ಟು ವಿಸ್ಮಯವಾಯಿತು: ಸಂತಾಪವೂ ಹುಟ್ಟಿತು. ಸಂತಾಪದ ಭರದಲ್ಲಿ ಅವಳು ರಂಗರಾಯನನ್ನು ಕುರಿತು:—"ನರಾಧಮಾ! ನೀನು ಈ ವಿಧದ ಮನುಷ್ಯನಿರುವೆಯೆಂದು ನಾನು ಇದುವರೆಗೂ ತಿಳಿದಿದ್ದಿಲ್ಲ. ಹಂಬೀರರಾಯರು ಸಮಯಕ್ಕೆ ದೇವರಂತೆ ಬಂದು ನನ್ನನ್ನು ಕಾಪಾಡಿದರು. ಬಂದ ವೇಳೆ ಇವರು ಬರದಿದ್ದರೆ, ನಾನು ನಿನ್ನ ಮೋಸಗಾರಿಕೆಗೆ ತುತ್ತಾಗಿ ಆಯುಷ್ಯವನ್ನು ಹಾಳು ಮಾಡಿಕೊಳ್ಳುತ್ತಿದ್ದೆನು." ಎಂದು ನುಡಿದು, ಹಂಬೀರರಾಯನನ್ನು ಕುರಿತು:—"ಹಂಬೀರರಾಯರೆ, ನೀವು ನನಗೆ ದೇವತಾಸ್ವರೂಪರಾಗಿ ಪರಿಣಮಿಸಿದಿರಿ. ಇಲ್ಲಿ ಇನ್ನು ಕ್ಷಣ ಸಹ ನಿಲ್ಲುವ ಕಾರಣವಿಲ್ಲ. ಈ ನರಪಿಶಾಚಿಯ ಮುಖಾವಲೋಕನೆ ಮಾಡುವದಕ್ಕೆ ಸಹ ನನಗೆ ಹೇಸಿಕೆಯೆನಿಸುವದು.''

"ಈಗಲಾದರೂ ನಿನಗೆ ಬುದ್ಧಿಬಂದದ್ದು ವಿಹಿತವೇ ಆಯಿತು." ಎಂದು ಹಂಬೀರರಾಯನು ನುಡಿದು—"ಪುತ್ಥಳಿ, ಹರಭಟ್ಟರೆ, ನಡೆಯಿರಿ; ಇನ್ನು ಇಲ್ಲಿ ನಮ್ಮ ಕೆಲಸವಿಲ್ಲ."

ಎಲ್ಲರೂ ಮನೆಗೆ ಬಂದು ಯಶವಂತರಾಯನಿಗೆ ಭೆಟ್ಟಿಯಾದರು. ಹಂಬೀರರಾಯನೂ ಹರಭಟ್ಟರೂ ಎಲ್ಲ ಸಂಗತಿಯನ್ನು ಅವನಿಗೆ ತಿಳಿಸಿದರು. ರಂಗರಾಯನಂಥ ನರಾಧಮನ ಬೆನ್ನು ಹತ್ತಿದ್ದಕ್ಕಾಗಿ ಅವನು ಕಮಲೆಯ ಮೇಲೆ ಸಿಟ್ಟಾದನು; ಆದರೆ ಹಂಬೀರರಾಯನೂ ಹರಭಟ್ಟನೂ ಅವನನ್ನು ಸಮಾಧಾನಪಡಿಸಿದರು ಕಮಲೆಯಾದರೂ ತನ್ನ ಅನುಚಿತ ಕೃತ್ಯದ ಬಗ್ಗೆ ತಂದೆಯಲ್ಲಿ

ಕ್ಷಮಾಯಾಚನೆ ಮಾಡಿದಳು. ಹಂಬೀರರಾಯನು ಕಮಲೆಗೆ ನಾಲ್ಕು ಹಿತೋಪದೇಶ ಹೇಳಿ, ಅನಂತರದಲ್ಲಿ ಯಶವಂತರಾಯನನ್ನು ಸಾಂತ್ವನಪಡಿಸಿದನು.

ಹಂಬೀರರಾಯನು ಎರಡು ದಿನ ಭಾವೀ ಮಾವನ ಮನೆಯಲ್ಲಿ ನಿಂತು, ಅವನ ಹಾಗು ಪುತ್ಥಳಿ-ಕಮಲೆಯರ ನಿರೋಪ ಹೊಂದಿ ದೇವಗಾವಿಗೆ ತೆರಳಿದನು. ಕಮಲೆಗೆ ಅನುರೂಪನಾದ ವರನನ್ನು ತರುವೆನೆಂದು ಅವನು ಯಶವಂತರಾಯನಿಗೆ ತಿಳಿಸಿಯೆ ಹೊರಟನು. ಅವನ ಆಶ್ವಾಸನೆಯಿಂದ ಕಮಲೆಯು ಕೃತಕೃತ್ಯಳಾದಳು.

---

## ೧೨ ಸುಂದರಗಡ.



ಹಂಬೀರರಾಯನು ನಾಂದಗಾವಿಯಿಂದ ಬಂದೊಡನೆಯೆ ಜಯಾಬಾಯಿಯು ಅಲ್ಲಿಯ ಸುಖಸಮಾಚಾರಗಳನ್ನು ವಿಚಾರಿಸಿದಳು. ಹಂಬೀರರಾಯನು ಅಲ್ಲಿಯ ಎಲ್ಲ ಸಂಗತಿಯನ್ನು ತಿಳಿಸಿ, ಕಮಲೆಯ ಸಂಬಂಧವಾದ ವಿಷಯವನ್ನು ಹೇಳಿದನು. ಆ ಅಪ್ರಬುದ್ಧ ಬಾಲಿಕೆಯು ಮೋಸಗಾರನಾದ ರಂಗರಾಯನ ಕೈಯೊಳಗಿಂದ ಪಾರಾದುದಕ್ಕಾಗಿ ಅವಳಿಗೆ ಆನಂದವಾಯಿತು. ಯಶವಂತರಾಯನು ಪುತ್ಥಳಿಯನ್ನು ತನ್ನ ಮಗನಿಗೆ ಕೊಡುವ ನಿಶ್ಚಯವನ್ನು ವ್ಯಕ್ತಪಡಿಸಿದ ಸಂಗತಿಯನ್ನು ಕೇಳಿಯಂತು ಅವಳಿಗೆ ಮಹದಾನಂದವಾಯಿತು. ಪುತ್ಥಳಿಯ ಪ್ರಣಯವಾದರೂ ತನ್ನ ಮಗನಲ್ಲಿ ವರ್ಧಮಾನಸ್ಥಿತಿಯಲ್ಲಿದ್ದುದನ್ನು ಅವಳು ಸೂಕ್ಷ್ಮವಾಗಿ ತಿಳಿದುಕೊಂಡಳು. ಒಟ್ಟಿನ ಮೇಲೆ ಎಲ್ಲ ವಿಧದಿಂದಲೂ ಅನುಕೂಲ ಕಾಲವೇ ಬಂದೊದಗಿದ್ದರಿಂದ ಅವಳು ಹಿಂದಿನ ದುಃಖವನ್ನು ಮರೆತು, ಕೃತಾರ್ಥಳಾದೆನೆಂದು ಹಿಗ್ಗಿದಳು.

ಹಂಬೀರರಾಯನು ಪ್ರಯಾಣದ ಎಲ್ಲ ಸಿದ್ಧತೆಯನ್ನು ಮಾಡಿದ್ದನು. ತನ್ನ ಕೈಕೆಳಗಿನ ಸೇವಕರಿಗೆ ಆಜ್ಞಾಪತ್ರ ಬಂದ ಕೂಡಲೆ ಹೊರಡುವ ಸಿದ್ಧತೆಯಲ್ಲಿರಬೇಕೆಂದು ಸೂಚಿಸಿದ್ದನು. ಈಗ ಅವನು ಮಾನಾಜಿರಾಯನ ಆಜ್ಞಾಪತ್ರದ ನಿರೀಕ್ಷಣೆ ಮಾಡತೊಡಗಿದ್ದನು.

ಹಂಬೀರರಾಯನು ತಾಯಿಯೊಡನೆ ಉಪ್ಪರಿಗೆಯ ಮೇಲೆ ಕುಳಿತು ಮಾತಾಡತೊಡಗಿದ್ದನು. ಸಂಧ್ಯಾಸಮಯವಾಗುತ್ತ ಬಂದಿತ್ತು. ಅಸ್ತಮಾನ ಸೂರ್ಯನ ತಾಮ್ರವರ್ಣದ ಕಿರಣಗಳನ್ನೂ ಪಶ್ಚಿಮಾಂಗನೆಯ ಆರಕ್ತ

ಮುಖಮುದ್ರೆಯನ್ನೂ ನಿರೀಕ್ಷಿಸುತ್ತ ಅವರು ಮಾತು ನಡೆಸಿದ್ದರು. ಅಷ್ಟರಲ್ಲಿ ಕುದುರೆಯ ಸವಾರನೊಬ್ಬನು ಶೀಘ್ರಗತಿಯಿಂದ ಬರುತ್ತಿರುವದು ಅವರ ಕಣ್ಣಿಗೆ ಬಿತ್ತು. ಅವನ ಉಡುಪು ನೋಡಿದೊಡನೆಯೆ ಅವನು ಶಿವಪ್ರಭುಗಳ ಸ್ವರಾಜ್ಯಸೇವಾದಳದ ಸೈನಿಕನೆಂಬವರ ಗುರುತನ್ನು ಅವರು ಹಿಡಿದರು. ಬಹಳವಾಡಿ ಆ ಸೇವಕನು ಮಹಾರಾಜರಿಂದಾಗಲಿ, ಮಾನಾಜಿರಾಯನಿಂದಾಗಲಿ ಆಜ್ಞಾಪತ್ರ ತೆಗೆದುಕೊಂಡು ಬಂದಿರಬಹುದೆಂದು ಅವರು ನಿಶ್ಚಯಿಸಿದರು. ಸ್ವಲ್ಪವೇಳೆಯಲ್ಲಿ ಸೇವಕನು ವಾಡಿಯ ಮಹಾದ್ವಾರದ ಬಳಿಗೆ ಬಂದನು. ಕೂಡಲೆ ಹಂಬೀರರಾಯನ ಸೇವಕನು ಅವನ ಕುದುರೆಯನ್ನು ಅಶ್ವಾಲಯದಲ್ಲಿ ಕಟ್ಟಿ, ಅವನನ್ನು ಕರೆದುಕೊಂಡು ಉಪ್ಪರಿಗೆಯ ಮೇಲೆ ಬಂದನು. ಮಾನಾಜಿರಾಯನ ಸೇವಕನು ಹಂಬೀರರಾಯನಿಗೆ ನಮಸ್ಕಾರ ಮಾಡಿ ಪತ್ರ ಕೊಟ್ಟನು. ಹಂಬೀರರಾಯನು ಪತ್ರವನ್ನೋದಿ, ತಾಯಿಯನ್ನು ಕುರಿತು:- "ಕಾಕಾಸಾಹೇಬರ ಪತ್ರ ಬಂದಿದೆ. ಈ ಪತ್ರ ಮುಟ್ಟಿದೊಡನೆಯೆ ಹೊರಟು ಬರಬೇಕೆಂದು ಆಜ್ಞೆಮಾಡಿದ್ದಾರೆ."

ಜಯಾಬಾಯಿಯು ಮಾನಾಜಿರಾಯನ ಆಜ್ಞಾಪತ್ರ ಬಂದದ್ದು ನೋಡಿ ಹರ್ಷನಿರ್ಭರಳಾದಳು. ಇನ್ನು ಮುಂದೆ ತನ್ನ ಮಗನ ಪರಾಕ್ರಮವು ಬೆಳಕಿಗೆ ಬರುವ ಕಾಲವಿದೆಯೆಂದು ಸಂತುಷ್ಟಳಾಗಿ, ಮಗನನ್ನು ಕುರಿತು:—"ಹಂಬೀರ, ಮಾನಾಜಿರಾಯರು ನಿನ್ನ ಹಿತಚಿಂತನೆಗಾಗಿ ಹೇಗೆ ಪ್ರಯತ್ನಿಸುತ್ತಿರುವರು ನೋಡಿದೆಯಾ? ಹಿರಿಯರನ್ನು ಕಳೆದುಕೊಂಡವನಾದ ನೀನು ಮಾನಾಜಿರಾಯರ ಕೃಪೆಗೂ ಹೊರತಾಗಿದ್ದರೆ, ನಿನ್ನ ಯಾವ ಗುಣಗಳೂ ಪ್ರಕಟವಾಗಲು ಸಂಧಿಯೇ ದೊರೆಯುತ್ತಿರಲಿಲ್ಲ. ಮಹಾರಾಜರ ಮನಸ್ಸು ಎಳೆದು, ಅವರನ್ನು ಇಲ್ಲಿಯವರೆಗೆ ಕರೆತಂದು, ನಿನ್ನನ್ನು ಅವರ ಮೆಚ್ಚುಗೆಗೆ ಪಾತ್ರನಾಗುವಂತೆ ಮಾಡಿದ ಮಾನಾಜಿರಾಯರ ಉಪಕಾರವು ತೀರಿಸಲಾರದಂತಹದು."

"ಅವ್ವಾ, ನಿಮ್ಮ ಮಾತುಗಳು ನಿಜವಾದವುಗಳಿರುವವು. ತಂದೆಯವರನ್ನು ಕಳೆದುಕೊಂಡ ನನ್ನ ಮೇಲೆ ಮಾನಾಜಿರಾಯರ ಕೃಪಾಛತ್ರವಿರದಿದ್ದರೆ ನಾನು ಇಷ್ಟು ಹೊತ್ತಿಗೆ ಯಾವ ಅವಸ್ಥೆಗೆ ಗುರಿಯಾಗುತ್ತಿದ್ದೆನೆಂಬದನ್ನು ಊಹಿಸಲಾರೆನು. ಒಬ್ಬ ನೀಚ ಅಪರಾಧಿಯಂತೆ ಮಹಂತನ ಸೆರೆಯಲ್ಲಿ ಇಡೀ ಆಯುಷ್ಯವನ್ನು ಕಳೆಯಬೇಕಾಗಿ ಬರುತ್ತಿತ್ತೆಂದು ಹೇಳಲು ಅಡ್ಡಿಯೇನು? ನಮ್ಮ ಪ್ರಾಕ್ತನವು ಒಳ್ಳೆಯದಿರುವದರಿಂದ ದೇವರು ಒಳ್ಳೇದನ್ನೇ ಮಾಡಿ

ಹನು." ಹಂಬೀರರಾಯನು ಹೇಳಿದನು.

"ಒಳ್ಳೇದು; ಹಂಬೀರ, ನೀನು ನಾಳೆಗೆ ಸುಂದರಗಡಕ್ಕೆ ಹೊರಡುವೆಯಲ್ಲವೆ?"

"ವೃಥಾ ಕಾಲಕ್ಷೇಪ ಮಾಡುವಂತಿಲ್ಲ. ಮಾನಾಜಿರಾಯರು ಶೀಘ್ರ ಬರುವದಕ್ಕಾಗಿ ನನಗೆ ಪತ್ರ ಬರೆದಿರುವರು. ಮಹಾರಾಜರು ಬಹಳೇ ಮಹತ್ವದ ಕಾರ್ಯಕ್ಕೆ ಕೈಹಾಕಿರುವರು. ಈ ಕಾರ್ಯದಲ್ಲಿ ಮಾನಾಜಿರಾಯರು ಮುಖ್ಯವಾಗಿ ಭಾಗ ವಹಿಸಿರುವರು. ಆ ಕಾರ್ಯದಲ್ಲಿ ಪ್ರತಾಪ ಪ್ರದರ್ಶನ ಮಾಡಲು ನನಗೆ ಸಂಧಿಯಿದೆ. ಇಂಥ ಮಹತ್ವದ ಸಂಧಿಯಲ್ಲಿ ಕಾಲಕ್ಷೇಪ ಮಾಡುತ್ತ ಕುಳಿತುಕೊಳ್ಳುವದು ಅನಿಷ್ಟವು."

"ನಿನ್ನ ಇಚ್ಛೆಯಂತೆ ಇಂದೇ ಹೊರಡಬಹುದು." ಎಂದು ಜಯಾಬಾಯಿಯು ಹೇಳಿ, "ಶಂಭೂ, ಕಾಳು ಮೊದಲಾದ ನಿನ್ನ ಸೇವಕರು ಬೇಕಾದಾಗ ಹೊರಡಲು ಸಿದ್ಧರಿರುವರಲ್ಲವೆ?"

"ಅವರು ನನ್ನ ಆಜ್ಞೆಯಾದ ಕೂಡಲೆ ಹೊರಡಲು ಸಿದ್ಧರೇ ಇದ್ದಾರೆ." ಎಂದು ಹಂಬೀರರಾಯನು ಹೇಳಿ, ತನ್ನ ಪಥಕದೊಳಗಿನ ಎಲ್ಲ ಜನರನ್ನು ಕರೆದುಕೊಂಡು ಬರುವದಕ್ಕಾಗಿ ಸೇವಕನನ್ನು ಕಳುಹಿಸಿದನು.

ಸ್ವಲ್ಪ ವೇಳೆಯಲ್ಲಿ ಎಲ್ಲರೂ ಕೂಡಿದರು. ಹಂಬೀರರಾಯನು ಎಲ್ಲ ಜನರೊಡನೆ ಊಟ-ಉಡಿಗೆ ತೀರಿಸಿಕೊಂಡು ಸುಂದರಗಡಕ್ಕೆ ಹೊರಡಲು ಸಿದ್ಧನಾದನು. ಜಯಾಬಾಯಿಯು ಮಗನಿಗೆ ಶುಭಾಶೀರ್ವಾದವಿತ್ತಳು. ಅವನು ತಾಯಿಯ ಹಾಗು ಸ್ವಜನರ ನಿರೋಪ ತೆಗೆದುಕೊಂಡು ತನ್ನ ಕೈಕೆಳಗಿನ ಸೈನಿಕರೊಡನೆ ಸುಂದರಗಡದ ದಾರೀ ಹಿಡಿದನು. ಅವನ ಕೇಸರಿ ಕುದುರೆಯು ವಾಯುವೇಗದಿಂದ ಸಾಗಿತ್ತು. ಹಂಬೀರರಾಯನು ತನ್ನ ಜನ್ಮಭೂಮಿಯಾದ ದೇವಗಾವಿಯ ಕಡೆಗೆ ಹೊರಳಿ ನೋಡುತ್ತಲಿದ್ದನು. ಎಂದೂ ಗ್ರಾಮವನ್ನು ಬಿಡದ ಅವನ ಮನಸ್ಸು ಇಂದು ಒಂದು ತರಹವಾಗಿತ್ತು. ದೇವಗಾವಿಯೂ ಅವನ ವಾಡಿಯೂ ಊರ ಹೊರಗಿದ್ದ ಮಹಂತನ ಮಠವೂ ಒಂದೊಂದು ವಿಧವಾಗಿ ಅವನ ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡುತ್ತಲಿದ್ದವು. ಜನ್ಮಭೂಮಿಯೂ ಕ್ರೀಡಾಭೂಮಿಯೂ ಆದ ದೇವಗಾವಿಯನ್ನು ಬಿಡಬೇಕಾದರೆ ಅವನಿಗೆ ವ್ಯಸನವಾದದ್ದು ಸಹಜವು. ಭಾವೀ ಅಭ್ಯುದಯದ ಕಡೆಗೆ ದೃಷ್ಟಿಯಿಟ್ಟು ಅವನು ಊರು ಬಿಟ್ಟು ಹೊರಟಿದ್ದನು. ಕೆಲವು ದಾರಿ ಕ್ರಮಿಸಿದ ಮೇಲೆ

ದೇವಗಾವಿಯೂ ಮರೆಯಾಯಿತು; ಅವನ ವಾಡೆಯೂ ಕಾಣದಾಯಿತು; ಮಹಂತನ ಮಠವೂ ತೋರದಾಯಿತು. ಮುಂದೆ ಒಂದು ಅರಣ್ಯವನ್ನು ಸೇರಿದ್ದರಿಂದ ಅವನಿಗೆ ಅವನ ಜನ್ಮಭೂಮಿಯು ಮರೆಯಾಗಿ ಹೋಯಿತು!

ಆ ಅರಣ್ಯ ಮಾರ್ಗವಾಗಿ ಕ್ರಮಿಸುತ್ತಿರುವಾಗ ಹಂಬೀರರಾಯನ ಬಳಿ ಯಿಂದ ಒಂದು ಬಾಣವು 'ಸೂ ಸೂ" ಎಂದು ಶಬ್ದ ಮಾಡುತ್ತ ಹೋಯಿತು. ಕೂಡಲೆ ಅವನು ಬಾಣ ಬಂದ ಕಡೆಗೆ ಹೊರಳಿ ನೋಡಿದನು. ಎಲ್ಲ ಸೈನಿಕರ ಲಕ್ಷ್ಯವೂ ಅತ್ತಕಡೆಗೆ ಹೋಯಿತು. ಅಲ್ಲಿ ಯಾರೂ ಕಾಣಲಿಲ್ಲ. ಅಷ್ಟರಲ್ಲಿ ಮತ್ತೊಂದು ಬಾಣವು ಸುಯ್ಗುಡುತ್ತ ಒಂದು ಹಂಬೀರರಾಯನ ಬಳಿಯಲ್ಲಿ ಹಾಯ್ದು ಹೋಯಿತು. ಆಗ ಶಂಭುವು ಹಂಬೀರರಾಯನಿಗೆ:—"ಧನಿಯರೆ, ಕುದುರೆಯನ್ನು ವೇಗವಾಗಿ ನಾಗಿಸಿರಿ. ಈ ಅಡವಿಯನ್ನು ಬಿಟ್ಟು ಬೈಲುಸೀಮೆಗೆ ಹೋಗುವವರೆಗೆ ಗಂಡಾಂತರವಿದೆ. ಯಾರೋ ಶತ್ರುಗಳು ನಿಮ್ಮನ್ನು ಹೊಡೆಯಲು ಸಿದ್ಧರಾಗಿ ಈ ಅಡವಿಯಲ್ಲಿ ಗುಪ್ತರೀತಿಯಿಂದ ಕುಳಿತಿದ್ದಾರೆ. ಅವರು ನಮ್ಮನ್ನು ಬೆನ್ನಟ್ಟುವ ಸಂಭವವಿದೆ. ಆದರೂ ಬೈಲುಪ್ರದೇಶವನ್ನು ಮುಟ್ಟಿದ ಮೇಲೆ ಅವರ ಭಯವಿಲ್ಲ. ಈಗ ಶತ್ರುಗಳು ಮರೆಯಾಗಿ ಬಾಣ ಹೊಡೆಯುತ್ತಿರುವದರಿಂದ ಅಪಘಾತವಾಗುವ ಸಂಭವವಿದೆ."

"ಶಂಭು, ಓಡಿ ಹೋಗಲಿಕ್ಕೆ ನಾನು ಹೇಡಿಯೆ? ಶತ್ರುಗಳನ್ನು ಶೋಧಿಸಿ ಅವರ ಹಾರುಪತ್ಯಗೊಳಿಸಬೇಕು." ಹಂಬೀರರಾಯನು ಹೇಳಿದನು.

"ಅರಣ್ಯದಲ್ಲಿ ಶತ್ರುಗಳು ಕೈಗೆ ಸಿಗುವದು ಕಠಿಣವು. ನೀವು ಈಗ ಇಲ್ಲಿಂದ ಬೇಗನೆ ಕಾಲ್ದೆಗೆಯದಿದ್ದರೆ ಗಂಡಾಂತರವೊದಗುವದು ನಿಶ್ಚಿತವು." ಎಂದು ಶಂಭುನು ಹೇಳಿದನು.

"ಶತ್ರುಗಳಿಗಂಜಿ ಓಡಿ ಹೋಗುವದು ಶೂರ ಸೈನಿಕರಿಗೆ ಲಜ್ಜಾಸ್ಪದವು."

ಹಂಬೀರರಾಯನು ಹೀಗೆ ನುಡಿಯುವಷ್ಟರಲ್ಲಿ ಬಾಣಗಳ ಮೇಲೆ ಬಾಣಗಳು ಬರತೊಡಗಿದವು. ನಾಲ್ಕೆಂಟು ಬಂದವು; ಹತ್ತಿಪ್ಪತ್ತು ಬಂದವು; ನೂರಾರು ಬಂದವು; ಬಾಣಗಳ ಮಳೆಯೇ ಪ್ರಾರಂಭವಾಯಿತು. ಒಂದು ಬಾಣವು ಕೇಸರಿಯ ಕಾಲಿಗೆ ತಾಗಿತು. ಕೂಡಲೆ ಅದು ವಾಯುವೇಗದಿಂದ ಓಡಹತ್ತಿತು. ಉಳಿದವರೂ ಅದರ ಹಿಂದೆ ಕುದುರೆಗಳನ್ನೋಡಿಸಿದರು. ಎಲ್ಲರೂ ಬೈಲು ಪ್ರದೇಶಕ್ಕೆ ಬಂದರು. ಬೈಲುಸೀಮೆಗೆ ಬಂದೊಡನೆಯೆ ಕೇಸರಿಯು ನಿಂತಿತು. ಆಗ ಹಂಬೀರರಾಯನು:—"ಕೇಸರಿ, ನೀನು ನನಗೆ ಮಣಿಯದೆ ಓಡಿ ಬಂ

ದೆಯಾ? ಶತ್ರುಗಳಿಗೆ ಈ ಪರಿಯಾಗಿ ಬೆದರುವದು ನಿನ್ನ ಶೀಲವಲ್ಲ." ಎಂದು ಹಂಬೀರರಾಯನು ತನ್ನ ಕುದುರೆಯನ್ನು ಕುರಿತು ಮಾತಾಡಿದನು.

"ಧನಿಯರೆ, ಕೇಸರಿಯು ಭೀರುವಲ್ಲ. ಅರಣ್ಯದಲ್ಲಿ ಮೋಸವಾಗುವ ಸಂಭವವಿದ್ದುದರಿಂದ ಓಡಿತು. ಈಗ ಬೈಲು ಸೀಮೆಗೆ ಬಂದದ್ದರಿಂದ ಶತ್ರುಗಳಿಗೆ ಎದುರಾಗಲು ಸಿದ್ಧವಾಯಿತು. ನಿಮ್ಮ ಕೇಸರಿಯು ಸುವಿಚಾರಿಯಿದೆ." ಎಂದು ಶಂಭುವು ಕೇಸರಿಯನ್ನು ಪ್ರಶಂಶಿಸಿದನು.

ಕೇಸರಿಯು ನಿಂತೊಡನೆಯೆ ಎಲ್ಲರ ಕುದುರೆಗಳೂ ನಿಂತವು. ಅಷ್ಟರಲ್ಲಿ ದೂರದಿಂದ ಎಷ್ಟೋ ಸಶಸ್ತ್ರ ಅಶ್ವಾರೋಹಿಗಳು ಧಾವಿಸಿ ಬರುವದು ಹಂಬೀರರಾಯನಿಗೆ ಕಂಡಿತು. ಆಗ ಅವನು ತನ್ನ ಸೇವಕರಿಗೆ ಜಾಗ್ರತೆಯಿಂದ ಕಾದಲು ಆಜ್ಞಾಪಿಸಿದನು. ಸ್ವಲ್ಪವೇಳೆಯಲ್ಲಿ ಶತ್ರುಗಳು ಹಂಬೀರರಾಯನ ಹಾಗು ಅವನ ಸೈನಿಕರ ಮೇಲೆ ಬಾಣಗಳನ್ನು ಬಿಡತೊಡಗಿದರು. ಹಂಬೀರರಾಯನ ಸೈನಿಕರಾದರೂ ಶತ್ರುಗಳ ಮೇಲೆ ಬಾಣವೃಷ್ಟಿಗರೆಯತೊಡಗಿದರು. ಉಭಯ ಪಕ್ಷಗಳಲ್ಲಿ ಯಾರೂ ಗತಾಸುವಾಗದಿದ್ದರೂ ಕೆಲವರಿಗೆ ಸಣ್ಣ-ಪುಟ್ಟಗಾಯಗಳಾಗವೆ ಇರಲಿಲ್ಲ. ಈ ಅವಧಿಯಲ್ಲಿ ಶತ್ರು ಸೈನಿಕರು ಹಂಬೀರರಾಯನ ಸೈನಿಕರ ಆವೇಶದ ಹೊಡತಕ್ಕೆ ಜರ್ಜರಿತರಾದರು. ಕಡೆಗೆ ಹಂಬೀರರಾಯನು ತನ್ನ ಸೈನಿಕರನ್ನು ಮುಂದೆ ದೂಡಿ ಖಡ್ಗಯುದ್ಧವನ್ನು ಪ್ರಾರಂಭಿಸಿದನು. ಖಡ್ಗಯುದ್ಧದಲ್ಲಿ ಶತ್ರುಸೈನಿಕರಲ್ಲಿ ಕೆಲವರು ಭೂಮಿಗೆ ಬಿದ್ದು ಗತಾಸುವಾದರು. ತನ್ನ ಸೈನಿಕರು ಜರ್ಜರಿತರಾಗತೊಡಗಿದ್ದನ್ನು ಕಂಡು ಆ ತಂಡದ ನಾಯಕನು ಮುಂದೆ ಬಂದು:—"ಹಂಬೀರರಾಯಾ! ಪೂರ್ವ ವಿಜಯದಿಂದ ಉಬ್ಬಬೇಡ. ನಾನು ನಿನಗೆ ಮೃತ್ಯುರೂಪಿಯಾಗಿಯೆ ಬಂದಿರುವೆನು."

ತಂಡದ ನಾಯಕನನ್ನು ಹಂಬೀರರಾಯನು ಗುರತಿಸಿದನು. ಅವನು ಮತ್ತಾರೂ ಇರದೆ ನೀಚ ಇನಾಮುದಾರನಾದ ರಂಗರಾಯನೇ ಎಂಬದು ತಿಳಿದೊಡನೆಯೆ ಇವನು ಸಂತಪ್ತನಾಗಿ:—"ನರಾಧಮಾ! ನಿನ್ನ ಹೊಟ್ಟೆಯಕಿಚ್ಚಿಗಾಗಿ ಅಶನಾರ್ಥಿಗಳಾದ ಈ ಸೈನಿಕರನ್ನು ಏಕೆ ವಧೆ ಮಾಡತೊಡಗಿರುವೆ? ಸಾಮರ್ಥ್ಯವಿದ್ದರೆ ಖಡ್ಗಪಾಣಿಯಾಗಿ ಮುಂದೆ ಬಾ. ನನ್ನ ಸೇವಕರೂ ನಿನ್ನ ಸೇವಕರೂ ಸ್ವಸ್ಥವಾಗಿ ನಿಂತು ಸಮರ ಕೌತುಕ ನೋಡಲಿ."

"ಹಂಬೀರರಾಯಾ!" ಆಢ್ಯತೆಯಿಂದ ರಂಗರಾಯನು—"ನಿನ್ನ ಮೈಸೊಕ್ಕನ್ನು ಈಗಲೆ ಇಳಿಸುವೆನು. ನನ್ನ ಸೈನಿಕರು ಹಣ್ಣಾಗಿರುವರೆಂದು ತಿಳಿ

ಎರುವಿಯೇನು? ನಿನ್ನ ರುಂಡವನ್ನು ಹಾರಿಸಿದರೆ ಒಂದು ಸಾವಿರ ರೂಪಾಯಿ ಬಹುಮಾನ ಕೊಡುವವಾಗಿ ಸೈನಿಕರಿಗೆ ಹೇಳಿದ್ದೇನೆ. ನನ್ನೊಡನೆ ಕಾದುವ ಮಾತು ಇರಲಿ; ನೀನು ನನ್ನ ಸೈನಿಕರ ಕೈಯೊಳಗಿಂದ ಪಾರಾಗು ನೋಡೋಣ."

"ಅಡಗಿಕೊಂಡು ಬಾಣ ಹೊಡೆಯುವ ಹೇಡಿ ರಂಗರಾಯಾ, ಸುಮ್ಮನೆ ಈ ನಿನ್ನ ಒಡ ಜನರನ್ನು ಹಿಂಸೆಪಡಿಸಲಾರೆನು. ನಿನ್ನಂಥ ರಣಹೇಡಿಯ ಬೆನ್ನ ಹತ್ತಿ ಇವರು ವ್ಯರ್ಥವಾಗಿ ಪ್ರಾಣ ಕಳೆದುಕೊಳ್ಳತೊಡಗಿದ್ದಾರೆ. ನಿನ್ನಲ್ಲಿ ಎಷ್ಟರಮಟ್ಟಿಗೆ ಪೌರುಷವಿರುವವೆಂಬದನ್ನು ನಾನು ಬಲ್ಲೆ. ನೀನು ನನ್ನೊಡನೆ ಖಡ್ಗಯುದ್ಧ ಮಾಡುವೆಯೊ, ಬಾಣಯುದ್ಧ ಮಾಡುವೆಯೊ, ಮಲ್ಲಯುದ್ಧಕ್ಕೆ ಬರುವಿಯೋ? ಹೇಳು. ನನ್ನ ಹಾಗು ನಿನ್ನ ಜನರು ಇಬ್ಬರ ಸತ್ವವನ್ನೂ ಪರೀಕ್ಷಿಸಲಿ." ಎಂದು ಹಂಬೀರರಾಯನು ಗರ್ಜಿಸಿ, ತನ್ನ ಖಡ್ಗವನ್ನು ಝಳಪಿಸ ತೊಡಗಿದನು

"ಯಾಕೆ ಸುಮ್ಮನೆ ನಿಲ್ಲುವಿರಿ? ಎಲ್ಲರೂ ಒಮ್ಮೆಲೆ ಸಾಗಿ ಈ ಮದಾಂಧನ ರುಂಡವನ್ನು ಕೊಯ್ಯಿರಿ!" ರಂಗರಾಯನು ತನ್ನ ಸೈನಿಕರಿಗೆ ಗರ್ಜಿಸಿದನು.

"ಆಗಲಿ. ನಿನ್ನ ಆಜ್ಞೆಯನ್ನು ಪಾಲನೆ ಮಾಡುವ ಇಚ್ಛೆಯಿದ್ದವರು ಅವಶ್ಯ ಮುಂಬೆ ಬರಬಹುದು." ಎಂದು ಹಂಬೀರರಾಯನು ನುಡಿದು, ಶಂಭು ಮೊದಲಾದ ತನ್ನ ಅನುಚರರನ್ನು ಕುರಿತು: –"ಇನ್ನು ಕಾಳಗವು ಪ್ರಾರಂಭವಾಗಲಿ."

ಕೆಲವು ನಿಮಿಷ ಸಂಗ್ರಾಮ ನಡೆಯುವಷ್ಟರಲ್ಲಿ ರಂಗರಾಯನ ಸೈನಿಕರು ಹತಾಶರಾದರು. ಅವರು ಓಡಿ ಹೋಗುವ ಸಾಹಸಕ್ಕೆ ತೊಡಗಿದೊಡನೆಯೆ ರಂಗರಾಯನು ಕಾಲಿಗೆ ಬುದ್ಧಿಹೇಳಿದನು. ಆಗ ಶಂಭುವು:—"ಓಡಿ ಹೋಗುವೆಯಾ ಜೀವಗಳ್ಳಾ!" ಎಂದು ನುಡಿದು ಬಿಲ್ಲಿಗೆ ಬಾಣ ಹೂಡಿದನು. ಆಗ ಹಂಬೀರರಾಯನು ಶಂಭುವನ್ನು ತಡೆದು, ಪಲಾಯನ ಮಾಡುವವರನ್ನು ವಧಿಸಬಾರದೆಂದು ಬುದ್ಧೀ ಹೇಳಿದನು. ರಂಗರಾಯನು ಓಡತೊಡಗಿದ ಮೇಲೆ ಅವನ ಸೈನಿಕರೂ ಕಾಲ್ದೆಗೆದರು.

ಸುಲಿಗೆಗಾರರು ಓಡಿ ಹೋದ ಮೇಲೆ ಹಂಬೀರರಾಯನು ತನ್ನ ಸೈನಿಕರ ಕಾರ್ಯವನ್ನು ಪ್ರಶಂಶಿಸಿ, ಸ್ವರಾಜ್ಯ ಸೇವೆಯ ಕಾರ್ಯದಲ್ಲಿ ಹೀಗೆಯೆ ಪರಾಕ್ರಮದಿಂದ ಹೋರಾಡಬೇಕೆಂದು ಬೋಧಿಸಿದನು. ಅವನು ತನ್ನ ಎಲ್ಲ ಸೇವಕರಿಗೆ ಶಿವಪ್ರಭುಗಳ ಸದ್ಯದ ಕಾರ್ಯ ಹಾಗು ಅವರ ಸ್ವರಾಜ್ಯ ಸ್ಥಾಪ

ನೆಯ ಉದ್ದೇಶ, ಪ್ರಾಪ್ತ ಪರಿಸ್ಥಿತಿಯಲ್ಲಿ ಹಿಂದುಗಳ ಕರ್ತವ್ಯ ಮೊದಲಾದ ವಿಷಯಗಳ ಬಗ್ಗೆ ಸರಳವಾದ ಭಾಷೆಯಲ್ಲಿ ಚೆನ್ನಾಗಿ ತಿಳಿಸಿ ಹೇಳಿದನು. ಸ್ವರಾಜ್ಯಸೇವೆಗಾಗಿ ಆತ್ಮಬಲಿದಾನ ಮಾಡುವದೆಂದರೆ ಅದೊಂದು ದೊಡ್ಡ ಪುಣ್ಯಸಾಧನೆಯೆಂದು ಅವರ ಭಾವನೆಯಾಯಿತು. ಆಗ ಅವರು ಸ್ವರಾಜ್ಯ ಸೇವೆಯನ್ನು ಏಕನಿಷ್ಠೆಯಿಂದ ಮಾಡುವ ಬಗ್ಗೆ ಪ್ರತಿಜ್ಞಾಬದ್ಧರಾದರು. ಅನಂ ತರದಲ್ಲಿ ಅವರು ಸುಂದರಗಡದ ಮಾರ್ಗವನ್ನು ಹಿಡಿದು ನಡೆದರು.

ವಸತಿಯ ಮೇಲೆ ವಸತಿ ಮಾಡುತ್ತ ಹಂಬೀರರಾಯನು ತನ್ನ ಸೈನಿಕ ರೊಡನೆ ಸುಂದರಗಡದ ಹೊರಸುತ್ತಿನ ಕೋಟೆಯ ಮಹಾದ್ವಾರದ ಬಳಿಗೆ ಬಂದನು. ಅಲ್ಲಿಂದ ಮುಖ್ಯ ದುರ್ಗವು ಕೆಲವು ಅಂತರದ ಮೇಲೆ ಇತ್ತು. ಕೋಟೆಯ ಬಾಗಿಲಿಗೆ ಬಂದ ಕೂಡಲೆ ಹಂಬೀರರಾಯನು ಕಾವಲುಗಾರರಿಗೆ ತನ್ನ ಪರಿಚಯವನ್ನು ತಿಳಿಸಿ, ಕೋಟೆಯನ್ನು ಪ್ರವೇಶಿಸಲು ಅಪ್ಪಣೆಯನ್ನು ಕೇಳಿದನು. ಅವನ ಪರಿಚಯವು ಅಲ್ಲಿ ಯಾರಿಗೂ ಇದ್ದಿಲ್ಲ. ಆಗ ಮುಖ್ಯ ಕಾವಲುಗಾರನು ಅವನನ್ನು ಸನ್ಮಾನಿಸಿ ತಕ್ಕ ಸ್ಥಳದಲ್ಲಿ ಕುಳ್ಳಿರಿಸಿ, ಒಂದು ವಿಧವಾದ ಸಂಜ್ಞೆಯ ಕೊಂಬನ್ನೂದಿದನು. ಅನಂತರ ಕೆಲವೇ ನಿಮಿಷಗಳಲ್ಲಿ ಕೂಗಳತೆ ಅಂತರದ ಮೇಲೆ ಮತ್ತೊಂದು ಕೊಂಬು ಊದಲ್ಪಟ್ಟಿತು. ಮುಂದೆ ಸ್ವಲ್ಪ ವೇಳೆಯ ಮೇಲೆ ಮತ್ತೊಂದು ಕೊಂಬು ಅಸ್ಪಷ್ಟವಾಗಿ ಕೇಳಿಸಿತು. ತರುವಾಯ ಹೌದೋ ಅಲ್ಲವೋ ಎನ್ನುವಂತೆ ಇನ್ನೊಂದು ಕೊಂಬು ಕೇಳಿತು. ಬಳಿಕ ಕೆಲವು ನಿಮಿಷ ಏನೂ ಸಪ್ಪಳವಾಗಲಿಲ್ಲ. ಆ ಮೇಲೆ ಒಂದು ಅಸ್ಪಷ್ಟವಾದ ಕೊಂಬು ಕೇಳಿತು; ತರುವಾಯ ಅದಕ್ಕಿಂತ ಸ್ಪಷ್ಟವಾದ ಕೊಂಬು ಕೇಳಿತು; ಅನಂತರದಲ್ಲಿ ಒಂದು ವಿಲಕ್ಷಣವಾದ ಸಂಜ್ಞೆಯ ಮತ್ತೊಂ ದು ಕೊಂಬು ಸ್ಪಷ್ಟವಾಗಿ ಕೇಳಿತು. ಆಗ ಮುಖ್ಯ ಕಾವಲುಗಾರನು ಹಂಬೀರ ರಾಯನಿಗೆ ನಮ್ರತೆಯಿಂದ ಪ್ರಣಾಮ ಮಾಡಿ:—"ಸರದಾರ ಸಾಹೇಬರ ಆಜ್ಞೆದೊರೆಯಿತು. ನೀವು ನಿರಾತಂಕವಾಗಿ ದುರ್ಗವನ್ನು ಪ್ರವೇಶಿಸಬಹುದು." ಎಂದು ಹೇಳಿದನು.

ಕೊಂಬಿನ ಸಂಜ್ಞೆಯಿಂದ ಬೇಕಾದಷ್ಟು ದೂರ ವಾರ್ತೆ ತಿಳಿಸುವ ಈ ಪದ್ಧತಿಯನ್ನು ನೋಡಿ ಹಂಬೀರರಾಯನಿಗೆ ಆಶ್ಚರ್ಯವಾಯಿತು. ಶಂಭು, ಕಾಳು ಮೊದಲಾದವರೂ ವಿಸ್ಮಿತರಾದರು. ಅವರು ಈ ವಿಷಯದ ಬಗ್ಗೆ ಮಾತಾಡುತ್ತ ದುರ್ಗದ ಕಡೆಗೆ ನಡೆದರು. ಮುಂದೆ ಯಾವ ದ್ವಾರದಲ್ಲಿಯೂ

ಆವರಿಗೆ ಅಡ್ಡಿ-ಆತಂಕಗಳುಂಟಾಗಲಿಲ್ಲ. ಅವರು ದುರ್ಗದ ಮುಖ್ಯ ದ್ವಾರವನ್ನು ಪ್ರವೇಶಿಸಿ, ಅದರ ಮಧ್ಯದಲ್ಲಿದ್ದ ದೊಡ್ಡ ಬುರುಜಿನ ಕಡೆಗೆ ನಡೆದರು. ಅಷ್ಟರಲ್ಲಿ ಇಬ್ಬರು ಸೇವಕರು ಅಲ್ಲಿಗೆ ಬಂದು ಅವರನ್ನು ಕರೆದುಕೊಂಡು ಸರದಾರ ಮಾನಾಜಿರಾಯನ ಮಂದಿರದ ಕಡೆಗೆ ನಡೆದರು. ಆ ಮಂದಿರದ ಬಳಿಯಲ್ಲಿ ಅಶ್ವಶಾಲೆಯಿತ್ತು. ಸೇವಕರು ಹಂಬೀರರಾಯನ ಕುದುರೆಯನ್ನು ಅಲ್ಲಿ ಕಟ್ಟಿದರು. ಅವನ ಸೇವಕರೂ ತಮ್ಮ ಕುದುರೆಗಳನ್ನು ಕಟ್ಟಿದರು. ಒಬ್ಬ ಸೇವಕನು ಹಂಬೀರರಾಯನ ಸೇವಕರನ್ನು ಕರೆದುಕೊಂಡು ಸೈನಿಕರ ನಿವಾಸದ ಕಡೆಗೆ ನಡೆದನು. ಮತ್ತೊಬ್ಬನು ಹಂಬೀರರಾಯನನ್ನು ಕರೆದುಕೊಂಡು ಮಾನಾಜಿರಾಯನ ಬಳಿಗೆ ನಡೆದನು.

ಮಾನಾಜಿರಾಯನ ಕೈ ಕೆಳಗಿನ ಶಿಲೇದಾರನು ಹಂಬೀರರಾಯನ ಸೇವಕರನ್ನು ಸನ್ಮಾನಿಸಿ, ಅವರ ಊಟ-ಉಪಚಾರಗಳ ವ್ಯವಸ್ಥೆ ಮಾಡಿಸಿದನು. ದುರ್ಗದೊಳಗಿನ ಈ ಎಲ್ಲ ವ್ಯವಸ್ಥೆಯನ್ನು ನೋಡಿ ಶಂಭು, ಕಾಳು ಮೊದಲಾದ ಜನರಿಗೆ ಬಹಳ ಆನಂದವಾಯಿತು. ಕೆಲವು ವೇಳೆಯಲ್ಲಿ ಮಾನಾಜಿರಾಯನು ಅಲ್ಲಿಗೆ ಬಂದು ಹಂಬೀರರಾಯನ ಸೇವಕರ ಸಮಾಚಾರವನ್ನು ತೆಗೆದುಕೊಂಡು ತನ್ನ ಮಂದಿರಕ್ಕೆ ನಡೆದನು.

ಹಂಬೀರರಾಯನು ಬಂದ ಕೂಡಲೆ ಮಾನಾಜಿರಾಯನು ಅವನನ್ನು ಅಲ್ಲಿಯೆ ಕುಳ್ಳಿರಿಸಿ, ಅವನ ಸೇವಕರ ಸಮಾಚಾರವನ್ನು ತೆಗೆದುಕೊಳ್ಳಲಿಕ್ಕೆ ಸೈನಿಕರ ವಸತಿಗೃಹಕ್ಕೆ ಬಂದಿದ್ದನು. ಹಂಬೀರರಾಯನ ಸೈನಿಕರು ಯೋಗ್ಯತೆಯುಳ್ಳವರಿರುವರೆಂಬವನ್ನು ಅವರನ್ನು ನೋಡಿದೊಡನೆಯೆ ಮಾನಾಜಿರಾಯನಿಗೆ ನಂಬಿಗೆಯಾಯಿತು. ಅನಂತರದಲ್ಲಿ ಅವನು ಹಂಬೀರರಾಯನ ಬಳಿಗೆ ಬಂದು ಅವನ ಹಾಗು ಜಯಾಬಾಯಿಯ ಕ್ಷೇಮ ಸಮಾಚಾರವನ್ನು ವಿಚಾರಿಸಿದನು. ಹಂಬೀರರಾಯನು ಹಸಿದಿದ್ದರಿಂದ ಮೊದಲು ಅವನ ಊಟ-ಉಪಚಾರಗಳ ವ್ಯವಸ್ಥೆ ಮಾಡಿಸಬೇಕೆಂದು ತನ್ನ ಜಮಾದಾರನಿಗೆ ಆಜ್ಞೆವಿಧಿಸಿದನು.

ಊಟ-ಉಡಿಗೆಗಳಾದ ಮೇಲೆ ಮಾನಾಜಿರಾಯನು ಹಂಬೀರರಾಯನೊಡನೆ ಮಾತಾಡುತ್ತ ಕುಳಿತನು ಅವನು ಎಲ್ಲ ಸಮಾಚಾರವನ್ನು ಕೇಳಿ ತಾನು ನಾಂದಗಾವಿಗೆ ಹೋದಾಗ ಧುಂಡಜಿಯೂ ಅವನ ಹೆಂಡತಿಯೂ ಎಲ್ಲಿಯೋ ಹೊರಟುಹೋಗಿರುವರೆಂದು ಹಂಬೀರರಾಯನು ಹೇಳಿದನು. ಸುಲಿಗೆಗಾರನಾದವನು ಒಬ್ಬರ ಅಂಕೆಯಲ್ಲಿದ್ದು ಕೆಲಸ ಮಾಡಲಾರನೆಂದು

ಮಾನಾಜಿಯು ಹೇಳುತ್ತಿರಲು, ಧುಂಡಜಿಯು ಒಳಗೆ ಪ್ರವೇಶಿಸಿ ಮಾನಾಜಿ ರಾಯನಿಗೂ ಹಂಬೀರರಾಯನಿಗೂ ನಮಸ್ಕಾರ ಮಾಡಿ:—"ಸರದಾರ ಸಾಹೇಬರೆ, ಗುರುಮಹಾರಾಜರೆ, ಈ ಸೇವಕನ ವಿಷಯವಾಗಿ ತಾವು ಕನಸು ಮನ ನಲ್ಲೂ ವಿಕಲ್ಪ ಭಾವಿಸಬಾರದು. ಒಬ್ಬರ ಅಂಕೆಯಲ್ಲಿದ್ದು ಕೆಲಸ ಮಾಡುವ ರೂಢಿ ನನಗಿಲ್ಲವಾದರೂ ನಾನು ಮೋಸಗಾರನಲ್ಲ; ವಿಶ್ವಾಸಘಾತಕಿಯಲ್ಲ. ಸ್ವರಾಜ್ಯ ದ್ರೋಹಿಯಲ್ಲ. ನಾನು ಸಾವಂತಗಡಕ್ಕೆ ಹೋಗಿ ಅಲ್ಲಿಯ ಎಲ್ಲ ಸಂಗತಿಗಳನ್ನು ತಿಳಿದುಕೊಂಡು ಬಂದಿರುವೆನು. ಸಾವಂತನು ಜಯಗಡಕ್ಕೆ ದಂಡೆತ್ತಿ ಹೊರಡುವ ಸಿದ್ಧತೆಯನ್ನು ಪೂರೈಸಿದ್ದಾನೆ. ಮಹಾರಾಜರಾದರೂ ತಕ್ಕ ವ್ಯವಸ್ಥೆಯನ್ನು ಮಾಡಿದ್ದಾರೆ."

ಮಾನಾಜಿರಾಯನು ಧುಂಡಜಿಯ ಮಾತಿನಿಂದ ಆಶ್ಚರ್ಯಗೊಂಡನು. ಆಗ ಅವನು:—"ಧುಂಡಜಿ, ನೀನು ಸಾವಂತಗಡದಲ್ಲಿ ಹೇಗೆ ಪ್ರವೇಶಿಸಿದೆ? ಅಲ್ಲಿಯ ಸಂಗತಿಗಳು ನಿನಗೆ ಹೇಗೆ ತಿಳಿದವು?"

"ಸರದಾರರೆ, ನಾನು ಸುಲಿಗೆಗಾರರ ಕೆಲಸ ಮಾಡುತ್ತಿದ್ದಾಗ ಸಾವಂತ ಮೊದಲಾದವರೆಲ್ಲರೂ ನನಗೆ ಆಶ್ರಯದಾತರು. ನಾನು ಸುಲಭವಾಗಿ ಯಾವ ಶತ್ರುರಾಜ್ಯದಲ್ಲಾದರೂ ಪ್ರವೇಶಿಸಬಲ್ಲೆನು. ಶಾಹೀರಾಜ್ಯದಲ್ಲಾದರೂ ಸೇರಿ, ಅಲ್ಲಿಯ ಕಾರಸ್ಥಾನಗಳನ್ನು ಸುಲಭವಾಗಿ ತಿಳಿದುಕೊಳ್ಳಬಲ್ಲೆನು."

"ನೀನು ನನ್ನ ಆಜ್ಞೆಯಿಲ್ಲದೆ ನಮ್ಮ ಸುಂದರಗಡವನ್ನು ಹೇಗೆ ಪ್ರವೇಶಿಸಿದೆ?"

ಆಗ ಧುಂಡಜಿಯು ಶಿವಾಜಿಮಹಾರಾಜರ ರಾಜಮುದ್ರೆಯ ಆಜ್ಞಾಪತ್ರವನ್ನು ಕೊಟ್ಟು "ನಿಮ್ಮ ಕಟ್ಟಳೆಯಂತೆ ನನಗೆ ಪ್ರವೇಶ ದೊರೆತಿದೆ. ಮಹಾರಾಜರ ಮುದ್ರೆಯ ಪತ್ರವಿದ್ದವರನ್ನು ಪ್ರತಿಬಂಧಿಸಕೂಡದೆಂದು ನೀವು ನಿಮ್ಮ ಕಾವಲುಗಾರರಿಗೆ ಆಜ್ಞೆ ವಿಧಿಸಿರುವಿರಷ್ಟೆ? ಈ ಸಂಗತಿಯು ನನಗೆ ಗೊತ್ತಿದ್ದದರಿಂದ ನಾನು ಶಿವಾಜಿ ಮಹಾರಾಜರಿಂದ ಆಜ್ಞಾಪತ್ರವನ್ನು ಸಂಪಾದಿಸಿ ಇಟ್ಟುಕೊಂಡಿರುವೆನು. ಈ ಪತ್ರದ ಆಧಾರದಿಂದ ನಾನು ಯಾವ ದುರ್ಗವನ್ನಾದರೂ ನಿರಾತಂಕವಾಗಿ ಪ್ರವೇಶಿಸಬಲ್ಲೆನು."

"ಶಾಬಾಸ್! ಧುಂಡಜಿ! ಸುಲಿಗೆಗಾರನಾದ ನೀನು ಮಹಾರಾಜರ ಪ್ರೀತಿ-ವಿಶ್ವಾಸಗಳನ್ನು ಬಹು ಬೇಗನೆ ಗಳಿಸಿಕೊಂಡೆ." ಎಂದು ಹಂಬೀರರಾಯನು ನಗುತ್ತ ನುಡಿದನು.

"ಗುರುಮಹಾರಾಜರೆ! ಇನ್ನೂ ನನಗೆ ಸುಲಿಗೆಗಾರನೆಂಬ ಹೆಸರು ತಪ್ಪಲಿಲ್ಲವಲ್ಲ! ಎಂದು ಖೇದವಾಗುವದು." ಎಂದು ಧುಂಡಜಿಯು ವ್ಯಾಕುಲತೆಯಿಂದ ನುಡಿದನು.

"ನಿನ್ನ ಆ ಹೆಸರಿನಲ್ಲಿಯೆ ವಿಲಕ್ಷಣವಾದ ಮಹತ್ವವಿದೆ. ಸುಲಿಗೆಗಾರನಾಗಿದ್ದವನು ಅದ್ವಿತೀಯ ರಾಜನಿಷ್ಠನಾದುದನ್ನು ಒರೆಹಚ್ಚಲಿಕ್ಕೆ ನಿನ್ನ ಆ ಅಡ್ಡಹೆಸರು ಬಹಳೇ ಅನುಕೂಲವಿವೆ." ಎಂದು ಮಾನಾಜಿರಾಯನು ನಗುನಗುತ್ತಲೇ ನುಡಿದನು.

ಅನಂತರದಲ್ಲಿ ಧುಂಡಜಿಯು ಜಯಗಡದಲ್ಲಿಯ ಸಿದ್ಧತೆ, ಮಹಾರಾಜರ ಯೋಜನೆ ಮೊದಲಾದವುಗಳ ಬಗ್ಗೆ ತನಗೆ ತಿಳಿದ ಮಟ್ಟಿಗೆ ಸಂಗತಿ ತಿಳಿಸಿದನು. ತರುವಾಯ ಮಾನಾಜಿರಾಯನು ಧುಂಡಜಿಗೂ ಹಂಬೀರರಾಯನಿಗೂ ರಾಜಕಾರಣದ ಮಹತ್ವದ ಸಂಗತಿಗಳನ್ನು ತಿಳಿಸಿದನು. ಶತ್ರುಗಳ ಮೇಲೆ ಹೇಗೆ ದಾಳಿ ಮಾಡಬೇಕು, ಶತ್ರುಗಳ ಭೇದವನ್ನು ಹೇಗೆ ಕಂಡು ಹಿಡಿಯಬೇಕು, ಯಾವದೊಂದು ಪ್ರದೇಶದ ಮೇಲೆ ದಾಳಿ ಮಾಡಬೇಕಾದರೆ ಅಲ್ಲಿಯ ನದಿ ಕೊಳ್ಳ ಗುಡ್ಡ ಕಂದರದ ಗೊತ್ತುವಳಿಯ ಅಭ್ಯಾಸವು ಹೇಗೆ ಹೇಗೆ ಇರಬೇಕು? ಮೊದಲಾದ ಸಂಗತಿಗಳನ್ನು ತಿಳಿಸಿದನು. ನೀರಿನಲ್ಲಿ ಬೀಳದೆ ಹೇಗೆ ಈಸು ಬರುವದಿಲ್ಲವೋ ಹಾಗೆಯೆ ಪ್ರತ್ಯಕ್ಷ ಕೆಲಸ ಮಾಡದೆ ಯುದ್ಧ ವಿದ್ಯೆಯ ಅಭ್ಯಾಸವಾಗುವದಿಲ್ಲವಾದ್ದರಿಂದ, ಒಳ್ಳೆಯ ನಿಷ್ಠೆಯಿಂದ ಪ್ರತಿಯೊಂದು ವಿಷಯದ ಬಗ್ಗೆ ಕೆಲಸ ಮಾಡುತ್ತ ಅಭ್ಯಾಸ ಮಾಡಬೇಕೆಂದು ತಿಳಿಸಿದನು. ಅನಂತರದಲ್ಲಿ ಧುಂಡಜಿಯು ಮಾನಾಜಿರಾಯನನ್ನು ಕುರಿತು: "ಹಂಬೀರರಾಯರು ನಿಮ್ಮ ಬಳಿಗೆ ಬಂದಿರುವರೋ ಇಲ್ಲವೋ ತಿಳಿದುಕೊಂಡು ಬರುವದಕ್ಕಾಗಿ ಮಹಾರಾಜರು ಆಜ್ಞಾಪಿಸಿದ್ದಾರೆ. ಇಲ್ಲಿಂದ ಹೋದ ಮೇಲೆ ಅವರು ಜಯಗಡದ ಅಮೃತರಾಯರ ಚಲನವಲನವನ್ನು ನಿರೀಕ್ಷಿಸುವದಕ್ಕಾಗಿ ನನ್ನನ್ನು ಅಲ್ಲಿಗೆ ಕಳುಹಿಸತಕ್ಕವರಿದ್ದಾರೆ."

"ಧುಂಡಜಿ, ನೀನು ಮಹಾ ಸಾಹಸಿಯು. ಇಷ್ಟು ಬೇಗನೆ ನೀನು ಮಹಾರಾಜರ ಕೃಪೆಗೆ ಪಾತ್ರನಾಗುವೆಯೆಂದು ನಾನು ತಿಳಿದಿರಲಿಲ್ಲ. ನೀನು ಮಹಾರಾಜರ ಕೈಯಲ್ಲಿಯೆ ಕೆಲಸ ಮಾಡುವವನಿರುವೆಯೆಂದಂತಾಯಿತು. ಧುಂಡಜಿ, ನಿನ್ನ ಗುರುಮಹಾರಾಜರನ್ನು ಇಷ್ಟು ಬೇಗನೆ ಮರೆಯುವೆಯೆಂದು ನಾನು ಭಾವಿಸಿರಲಿಲ್ಲ." ಎಂದು ಮಾನಾಜಿರಾಯನು ನುಡಿದನು.

"ಸರದಾರ ಸಾಹೇಬರೆ, ಜಯಗಡದ ವ್ಯವಸ್ಥೆಯಾಗುವವರೆಗೆ ನಾನು ಹಂಬೀರರಾಯರ ಸೇವೆಯಲ್ಲಿರಲು ಸಾಧ್ಯವಿಲ್ಲ. ಹೀಗೆ ಮಹಾರಾಜರೇ ಆಜ್ಞಾಪಿಸಿರುವರು. ಈ ಕೆಲಸವಾದ ಮೇಲೆ ನಮ್ಮ ಗುರುಮಹಾರಾಜರು ದೇವಗಾವಿಯ ಸರದಾರರಾಗುವದು ಖಂಡಿತ. ಅನಂತರ ನಾನು ಅವರ ಜಹಾದಾರನಾಗಿ ಕೆಲಸ ಮಾಡುತ್ತ ಹೋಗುವೆನು."

"ಒಳ್ಳೇದು, ನಿನ್ನ ಇಚ್ಛೆಯಿದ್ದಂತಾಗಲಿ." ಎಂದು ಮಾನಾಜಿರಾಯನು ನುಡಿದನು. ಅನಂತರದಲ್ಲಿ ಧುಂಡಜಿಯು ಮಾನಾಜಿರಾಯನ ಹಾಗು ಹಂಬೀರರಾಯನ ಅಪ್ಪಣೆ ಪಡೆದುಕೊಂಡು ಅಲ್ಲಿಂದ ಪ್ರಯಾಣ ಮಾಡಿದನು.

ತರುವಾಯ ಮಾನಾಜಿರಾಯನು ಸುಂದರಗಡದ ದಕ್ಷಿಣಕ್ಕಿರುವ ಜಯಗಡ ದುರ್ಗವನ್ನು ತೋರಿಸಿದನು; ಹಾಗು ಸುತ್ತುಮುತ್ತಲಿನ ಸಣ್ಣದೊಡ್ಡ ದುರ್ಗಗಳ ಪರಿಚಯ ಮಾಡಿಕೊಟ್ಟನು. ಅಷ್ಟರಲ್ಲಿ ಸಂಧ್ಯಾಸಮಯವಾಯಿತು; ಕೋಟೆಯಲ್ಲಿಯ ಧಾನ್ಯಸಂಗ್ರಹ, ಮದ್ದು-ಗುಂಡು, ಶಸ್ತ್ರಾಸ್ತ್ರಗಳ ಸಂಗ್ರಹ, ಅಶ್ವಶಾಲೆ, ಸೈನಿಕರ ವಸತಿಗೃಹ ಮೊದಲಾದವುಗಳನ್ನು ಹಂಬೀರರಾಯನಿಗೆ ತೋರಿಸುವದಕ್ಕಾಗಿ ಅವನನ್ನು ಕರೆದುಕೊಂಡು ಮಾನಾಜಿರಾಯನು ಅಲ್ಲಿಂದ ಹೊರಟನು.

---

# ೧೩ ಅಪೂರ್ವ ಸಾಹಸ.

ಮಾನಾಜಿರಾಯನು ಹಂಬೀರರಾಯನಿಗೆ ಯುದ್ಧದ ವಿಷಯವಾಗಿ ಅನೇಕ ಸಂಗತಿಗಳನ್ನು ಹೇಳಿದ್ದಲ್ಲದೆ, ದುರ್ಗದಲ್ಲಿ ಆಯಕಟ್ಟಿನ ಸ್ಥಳ, ಗುಪ್ತಸ್ಥಳ ಮೊದಲಾದವುಗಳ ಗೊತ್ತುವಳಿ ಮಾಡಿಕೊಟ್ಟನು. ಸುಂದರಗಡದೊಳಗಿನ ನೆಲಮಾರ್ಗ ಹಾಗು ನೆಲಮನೆ ಮೊದಲಾದವುಗಳನ್ನು ತೋರಿಸಿಕೊಂಡು ಬಂದನು. ಇವುಗಳ ಉಪಯೋಗವನ್ನು ಯಾವ ಯಾವ ಕಾಲಕ್ಕೆ ಹೇಗೆ ಹೇಗೆ ಮಾಡಬೇಕೆಂಬದನ್ನು ತಿಳಿಸಿದನು. ಅನಂತರದಲ್ಲಿ ಅವರಿಬ್ಬರೂ ದಿವಾಣಖಾನೆಗೆ ಬಂದು ಮಾತಾಡುತ್ತ ಕುಳಿತುಕೊಂಡರು. ಮುಂದೆ ಬೇಗನೆ ಒದಗಬಹುದಾದ ಸಾವಂತನ ಮೇಲಿನ ದಂಡಯಾತ್ರೆಯಲ್ಲಿ ಪರಾಕ್ರಮವನ್ನು ಪ್ರಕಟಿಸಿ ಮಹಾರಾಜರ ಕೃಪೆಗೆ ಪಾತ್ರನಾಗಬೇಕೆಂದು ಮಾನಾಜಿರಾಯನು ಹಂಬೀರರಾಯನಿಗೆ ಹೇಳಿದನು. ಅಷ್ಟರಲ್ಲಿ ಮಾನಾಜಿರಾಯನ ಚಿಟಿಣೀಸನು

ತಿಳಿಸಿದನು:—"ಸರದಾರ ಸಾಹೇಬರೆ, ಘಾತವಾಯಿತು. ಒಳಗಿನ ಪೆಟ್ಟಿಗೆಯಲ್ಲಿದ್ದ ರಾಜಕಾರಣದ ಕಾಗದ ಪತ್ರಗಳ ಒಂದು ಕಟ್ಟು ಇಲ್ಲದಾಗಿದೆ. ಅದರಲ್ಲಿ ಸಾವಂತನ ವಿಷಯದ ಕೆಲವು ಕಾಗದ-ಪತ್ರಗಳಿದ್ದವು. ಪೆಟ್ಟಿಗೆಯ ಕೀಲಿ ಮುರಿದು ಬಿದ್ದಿತ್ತು. ಒಳಗಿನ ಕಾವಲುಗಾರನಾದ ಧೋಂಡು ಸಿಪಾಯಿಯು ಕಾಣದಂತಾಗಿರುವನು. ಅವನು ಸಾಮಾನ್ಯ ಸಿಪಾಯಿಯಾಗಿರದೆ ಶತ್ರುಗಳ ಗುಪ್ತಚರನಿರಬಹುದೆಂದೂ, ಅವನಿಂದಲೇ ಈ ಕಾರ್ಯವು ನಡೆದಿರಬೇಕೆಂದೂ ಸಂಶಯ ಬಂದಿದೆ."

ಈ ಸಂಗತಿಯನ್ನು ಕೇಳಿದ ಕೂಡಲೆ ಮಾನಾಜಿರಾಯನು ಲಗುಬಗೆಯಿಂದೆದ್ದನು. ಅವನ ಹಿಂದೆ ಚಿಟಣೀಸನೂ ಹಂಬೀರರಾಯನೂ ಎದ್ದರು. ಎಲ್ಲರೂ ಒಳಗಿನ ಪೆಟ್ಟಿಗೆಯೊಳಗಿನ ಕಾಗದ-ಪತ್ರಗಳನ್ನು ಶೋಧಿಸಿದರು. ಜಯಗಡ ಮುಂತಾದ ವಿಷಯವಾಗಿ ನಡೆದ ಕಾಗದ-ಪತ್ರಗಳ ಕಟ್ಟೇ ಇಲ್ಲದಂತಾಗಿತ್ತು. ಕೂಡಲೆ ಮಾನಾಜಿರಾಯನು ಬಹಳ ಗೊಂದಲಕ್ಕೊಳಗಾದನು. ಆಗ ಅವನು ಚಿಟಣೀಸನನ್ನು ಕುರಿತು:—"ಕಾವಲುಗಾರನು ನಿಶ್ಚಯವಾಗಿ ಸಾವಂತನ ಗುಪ್ತ ಚಾರನಿರಲಿಕ್ಕೆಬೇಕು. ಅಂತೆಯೇ ಅವನು ಎಲ್ಲ ಕಾಗದ-ಪತ್ರಗಳನ್ನು ಬಿಟ್ಟು ಜಯಗಡದ ಕಾಗದ ಪತ್ರಗಳನ್ನಷ್ಟೇ ಒಯ್ದಿರುವನು. ಈ ಕಾಗದಗಳು ಸಾವಂತನ ಕಡೆಗೆ ತಲುಪಿದರೆ ಮಹಾರಾಜರು ಇಷ್ಟು ದಿನ ಮಾಡಿದ ಶ್ರಮವು ವ್ಯರ್ಥವಾಗುವದು. ಚಿಟಣೀಸರೆ, ನೀವು ಬಹಳ ಅಜಾಗ್ರತೆಯಿಂದ ನಡೆದು ಮಹತ್ವದ ರಾಜಕಾರಣವನ್ನು ಹಾಳುಮಾಡಿಬಿಟ್ಟಿರಿ. ಈ ಸುದ್ದಿಯು ಮಹಾರಾಜರ ಕಿವಿಗೆ ತಲುಪಿತೆಂದರೆ ಅವರು ನಮ್ಮೆಲ್ಲರನ್ನೂ ಪಾತ್ರತೆಯಿಲ್ಲದವರೆಂದು ನಿರ್ಧರಿಸುವರು."

ಚಿಟಣೀಸನು ಮುಖವನ್ನು ಕೆಳಗೆ ಮಾಡಿ ಸುಮ್ಮನೆ ನಿಂತಿದ್ದನು. ಮಾನಾಜಿರಾಯನ ತಲೆಯಲ್ಲಿ ಅನೇಕ ವಿಚಾರಗಳು ತಲೆಯೆತ್ತುತ್ತಿದ್ದವು. ಕೆಲವು ವೇಳೆ ಅವನು ಯೋಚಿಸಿ:—"ನೀವು ಧೋಂಡೂನ ವಿಷಯವಾಗಿ ಶೋಧ ಮಾಡಿರುವಿರೇನು?"

"ಒಂದು ಗಳಿಗೆಯ ಹಿಂದೆ ಅವನು ಕೋಟೆಯಿಂದ ಹೊರಬಿದ್ದನಂತೆ. ಸರದಾರರ ಮಹತ್ವದ ಕಾಗದಗಳನ್ನು ಮಹಾರಾಜರ ಕಡೆಗೆ ತಲುಪಿಸುವದಕ್ಕಾಗಿ ಹೊರಟಿರುವೆನೆಂದು ಅವನು ಕಾವಲುಗಾರರಿಗೆ ಹೇಳಿದನಂತೆ. ಅವನು ಎಲ್ಲರಿಗೂ ಪರಿಚಿತನಿದ್ದುದರಿಂದ ಯಾರಿಗೂ ಸಂಶಯ ಬರಲಿಲ್ಲ. ನಾನು

ಇಲ್ಲಿಗೆ ಬಂದ ಕೂಡಲೆ ಪೆಟ್ಟಿಗೆಯ ಬೀಗವು ಮುರಿದು ಬಿದ್ದುದನ್ನು ಕಂಡೆನು. ಕೂಡಲೆ ಶೋಧಮಾಡಲಾಗಿ ಎಲ್ಲ ಸಂಗತಿಯೂ ತಿಳಿಯಿತು." ಎಂದು ಚಿಟಣೀಸನು ಗಾಬರಿಯಿಂದ ಎಲ್ಲ ಸುದ್ದಿಯನ್ನು ಹೇಳಿದನು.

ಅಂತರದಲ್ಲಿ ಮಾನಾಜಿರಾಯನು ವಿಚಾರ ಮಾಡಿ ಹಂಬೀರರಾಯನನ್ನು ಕುರಿತು:—"ಹಂಬೀರರಾಯಾ, ಧೋಂಡೂನನ್ನು ಹಿಡಿಯುವ ಕೆಲಸವನ್ನು ನಾನು ನಿನ್ನ ಕಡೆಗೆ ಒಪ್ಪಿಸಿರುವೆನು. ಈ ಕಾರ್ಯವನ್ನು ನೆರವೇರಿಸಿದೆಯೆಂದರೆ ಜಯಗಡ ಕೋಟೆಯು ನಿನ್ನ ಸಾಹಸದಿಂದಲೇ ಸ್ವಾಧೀನವಾದಂತಾಗಿ, ನೀನು ಮಹಾರಾಜರ ಕೃಪೆಗೆ ಪಾತ್ರನಾಗುವೆ. ನಿನ್ನ ಸಾಹಸವೂ ಅರಿಗೆ ವ್ಯಕ್ತವಾಗುವದು. ನೀನು ನಿನ್ನ ಕೆಲವು ನಂಬಿಗೆಯ ಹಾಗು ಶೂರ ಸೈನಿಕರೊಡನೆ ಈಗಲೇ ಹೊರಡು. ಅವನು ಬಂದರಕ್ಕೆ ಹೋಗಿ ನೌಕೆಯಲ್ಲಿ ಸಾವಂತಗಡಕ್ಕೆ ಹೋಗಿರಬಹುದಾಗಿದೆ. ಮೊದಲು ಬಂದರಕ್ಕೆ ಹೋಗಿ ಅಂಬಿಗರನ್ನು ವಿಚಾರಿಸೋಣ ನಡೆ."

ಮಾನಾಜಿರಾಯನು ಹೀಗೆ ನುಡಿದು ತನ್ನ ಸೈನಿಕರಿಗೆ ಕುದುರೆಗಳನ್ನು ತರಹೇಳಿದನು. ಸ್ವಲ್ಪವೇಳೆಯಲ್ಲಿ ಎಲ್ಲರೂ ಅಶ್ವಾರೋಹಿಗಳಾಗಿ ಬಂದರದ ಕಡೆಗೆ ನಡೆದರು. ಬಂದರದಲ್ಲಿ ಒಂದೇ ನೌಕೆಯಿತ್ತು. ಮಾನಾಜಿರಾಯನು ಆ ನೌಕೆಯ ಅಂಬಿಗನನ್ನು ಕುರಿತು:—"ಒಂದೆರಡು ಗಳಿಗೆಯ ಹಿಂದೆ ಒಂದು ನೌಕೆಯು ಹೋಯಿತೇನು?"

"ಧನಿಯರೇ, ಒಂದು ದೊಡ್ಡ ನೌಕೆಯು ಹೋಯಿತು. ಅದರಲ್ಲಿ ಮೂವತ್ತು-ನಾಲ್ವತ್ತು ಜನರಿರಬಹುದು." ಎಂದು ಅಂಬಿಗನು ಹೇಳಿದನು.

"ಅವರಲ್ಲಿ ಒಬ್ಬ ಕರಿಯ ಮನುಷ್ಯನು ಹೋದನೇನು? ಅವನು ಕಾವಲುಗಾರನ ವೇಷದಲ್ಲಿದ್ದನು." ಎಂದು ಮಾನಾಜಿರಾಯನು ಅಂಬಿಗನನ್ನು ವಿಚಾರಿಸಿದನು.

"ಒಬ್ಬ ಕರಿಯ ಮನುಷ್ಯನು ಹೋದದ್ದು ನಿಜ; ಆದರೆ ಅವನು ಕಾವಲುಗಾರ ವೇಷದಲ್ಲಿ ಮಾತ್ರ ಇರಲಿಲ್ಲ. ಅವನು ಒಬ್ಬ ದೊಡ್ಡ ಸರದಾರನಂತೆ ಕಂಡನು. ಅವನು ತನ್ನ ಕೈಕೆಳಗಿನ ಜನರ ಮೇಲೆ ಅಧಿಕಾರ ನಡೆಯಿಸುತ್ತಿದ್ದನು ಅವನ ಜನರು ಅವನನ್ನು 'ಸರದಾರ ಸಾಹೇಬ' ಎಂದು ಸಂಬೋಧಿಸುತ್ತಿದ್ದರು."

ಅಂಬಿಗನು ಹೀಗೆ ಹೇಳಿದೊಡನೆಯೇ ಧೋಂಡೂಕಾವಲುಗಾರನೇ ಆ ಮನುಷ್ಯನೆಂಬದು ಮಾನಾಜಿರಾಯನಿಗೆ ಗೊತ್ತಾಯಿತು. ಆಗ ಅವನು ಹಂ

ಬೀರರಾಯನನ್ನು ಕುರಿತು:—"ಘೋಂಡೂನೊಡನೆ ಕೆಲವು ಸೈನಿಕರೂ ಇರುವರೆಂದಂತಾಯಿತು. ಸಾಧಾರಣವಾಗಿ ಇಪ್ಪತ್ತು ಜನರಾದರೂ ಅವನ ಕೈಕೆಳಗಿನವರಿರಬೇಕು."

"ಕಾಕಾಸಾಹೇಬರೆ, ಅವರು ಎಷ್ಟೇ ಜನರಿರಲಿ. ಅದರ ಬಗ್ಗೆ ಚಿಂತೆ ಮಾಡುವ ಕಾರಣವಿಲ್ಲ. ನುರಿತ ಹತ್ತು ಹನ್ನೆರಡು ಜನರನ್ನು ತೆಗೆದುಕೊಂಡು ಹೋಗಿ ಘೋಂಡೂನನ್ನು ಸೆರೆ ಹಿಡಿದುಕೊಂಡು ಬರುವೆನು. ಘೋಂಡೂನ ನೌಕೆಯು ದೂರ ಹೋಗಿರಬೇಕು. ಆದ್ದರಿಂದ ನುರಿತ ಅಂಬಿಗರನ್ನು ಕೊಟ್ಟರೆ ಕಾರ್ಯಸಾಧಿಸಿಕೊಂಡೇ ಬರುವೆನು."

"ಕಾಗದ ಪತ್ರಗಳು ಕೈಗೆ ದೊರೆಯದೆ ಹೋದರೆ ಬಹಳೇ ಘಾತವಾಗುವದೆಂಬ ಸಂಗತಿಯನ್ನು ಮರೆಯಕೂಡದು." ಎಂದು ಮಾನಾಜಿರಾಯನು ಹಂಬೀರರಾಯನನ್ನು ಎಚ್ಚರಿಸಿದನು.

"ಕಾಕಾಸಾಹೇಬರೆ, ಈ ಕೆಲಸವು ಎಂಥ ಮಹತ್ವದ್ದೆಂಬದನ್ನು ಅರಿತೇ ಟೊಂಕಕಟ್ಟಿದ್ದೇನೆ. ಕಾರ್ಯಸಾಧನೆ ಮಾಡಿಕೊಳ್ಳದೆ ಹಿಂದೆ ತಿರುಗಿದರೆ ನಾನು ಸ್ವರಾಜ್ಯಸೇವೆ ಮಾಡಲಿಕ್ಕೆ ಅಪಾತ್ರನೆಂದು ತಿಳಿಯಿರಿ. ಹೆಚ್ಚಿಗಿನ್ನೇನು ಹೇಳಲಿ? ನಾನು ಅಪಯಶದ ಮುಖವನ್ನು ಯಾರಿಗೂ ತೋರಿಸಲಾರೆನೆಂದು ಖಂಡಿತವಾಗಿ ತಿಳಿದುಕೊಳ್ಳಿರಿ."

"ಕೇವಲ ಆತ್ಮಬಲಿದಾನದಿಂದಲೆ ಕಾರ್ಯಸಾಧಿಸಿದಂತಾಗಲಿಲ್ಲ. ಕಾಗದ-ಪತ್ರಗಳು ಸಾವಂತವಾಡಿಗೆ ತಲುಪದಂತೆ ವ್ಯವಸ್ಥೆ ಮಾಡಲೇಬೇಕು"

"ಘೋಂಡೂನಲ್ಲಿರುವ ಕಾಗದ-ಪತ್ರಗಳನ್ನು ಸಮುದ್ರದ ಪಾಲು ಮಾಡಿಯೇ ಆತ್ಮತ್ಯಾಗ ಮಾಡುವೆನು."

"ಶಾಬಾಸ್! ವಿರೋಚಿತವಾದ ನಿನ್ನ ಮಾತುಗಳನ್ನು ಕೇಳಿ ಸಂಭ್ರಮವಾಯಿತು. ನೀನು ಈ ಕಾರ್ಯವನ್ನು ನೆರವೇರಿಸಿಕೊಂಡೇ ನನ್ನನ್ನು ಕಾಣುವೆ." ಎಂದು ಮಾನಾಜಿರಾಯನು ಹಂಬೀರರಾಯನ ಪ್ರಶಂಸೆ ಮಾಡಿ, ನಾವಿಕನನ್ನು ಕುರಿತು:—"ಇಲ್ಲಿ ಎಷ್ಟು ಜನ ಅಂಬಿಗರಿದ್ದಾರೆ?"

"ಸರದಾರ ಸಾಹೇಬರೇ, ನಾವು ನಾಲ್ವರೇ ಇದ್ದೇವೆ. ಆ ನೌಕೆಯು ದೊಡ್ಡದಿದೆ. ಅದರಲ್ಲಿ ದೂರ ಹೋದ ನೌಕೆಯನ್ನು ತಲುಪಬೇಕಾದರೆ ವೇಗವು ಇಮ್ಮಡಿಯಿರಬೇಕಾಗುವದು. ಕನಿಷ್ಠಕ್ಕೆ ಎಂಟು ಜನ ಅಂಬಿಗರಾದರೂ ಬೇಕು. ಉಳಿದ ಅಂಬಿಗರು ಇದೀಗ ದುರ್ಗಕ್ಕೆ ಹೋಗಿರುವರು. ಅವರನ್ನು

ಕರೆದುಕೊಂಡು ಬರಬೇಕಾದರೂ ಒಂದು ಗಳಿಗೆಬೇಕು. ಅಷ್ಟರಲ್ಲಿ ಮುಂದಿನ ನೌಕೆಯು ಮತ್ತಿಷ್ಟು ದೂರ ಹೋಗುವದು."

"ನಾಲ್ಕೇ ಜನ ಅಂಬಿಗರು ಸಾಕು. ಪ್ರಸಂಗವೊದಗಿದರೆ ನಮ್ಮ ಸೈನಿಕರು ಹುಟ್ಟು ಹಾಕುವರು. ನಮ್ಮ ಸೈನಿಕರಲ್ಲಿ ಕೆಲವರು ನಮ್ಮ ಮೇವೀ ನದಿಯಲ್ಲಿ ನೌಕೆ ನಡೆಯಿಸುವದನ್ನು ಕಲಿತವರಿರುವರು." ಎಂದು ಹಂಬೀರರಾಯನು ಹೇಳಿದನು.

ಹಂಬೀರರಾಯನ ಧೈರ್ಯದ ಮಾತುಗಳನ್ನು ಕೇಳಿ ಮಾನಾಜಿರಾಯನು ತಲೆದೂಗಿದನು. ಕೂಡಲೆ ಅವನು ನೌಕೆಯನ್ನು ಶೀಘ್ರಗತಿಯಿಂದ ಬಿಡುವ ಬಗ್ಗೆ ಆ ಅಂಬಿಗನಿಗೆ ಹೇಳಿದನು. ಹಂಬೀರರಾಯನೂ ಕಾಳೂ ಶಂಭೂ ಮೊದಲಾದ ಅವನ ಸೈನಿಕರೂ ನೌಕೆಯನ್ನು ಹತ್ತಿದರು. ಅಂಬಿಗರು ನೌಕೆಯನ್ನು ಶೀಘ್ರವಾಗಿ ನಡೆಯಿಸತೊಡಗಿದರು. ಅನಂತರದಲ್ಲಿ ಮಾನಾಜಿರಾಯನು ತನ್ನ ಜನರೊಡನೆ ಸುಂದರಗಡವನ್ನು ಪ್ರವೇಶಿಸಿದನು.

ಹಂಬೀರರಾಯನ ನೌಕೆಯು ಮಾರ್ಗಕ್ರಮಣ ಮಾಡತೊಡಗಿದ ನಾಲ್ಕೈದು ಗಳಿಗೆಯ ಮೇಲೆ ದೂರದಲ್ಲಿ ಒಂದು ನೌಕೆ ಹೋಗುತ್ತಿರುವದು ಅವನ ದೃಷ್ಟಿಗೆ ಬಿತ್ತು. ಅದೇ ನೌಕೆಯು ಧೋಂಡೂನ ನೌಕೆಯೆಂಬದನ್ನು ಎಲ್ಲರೂ ಗುರತಿಸಿದರು. ಅಂಬಿಗರು ಮತ್ತಿಷ್ಟು ಹುರುಪಿನಿಂದ ತಮ್ಮ ನೌಕೆಯನ್ನು ನಡೆಯಿಸತೊಡಗಿದರು. ಮುಂದಿನ ನೌಕೆಗಿಂತ ಹಿಂದಿನ ನೌಕೆಯು ವೇಗದಲ್ಲಿ ಮುಂದಾದ್ದರಿಂದ ಎರಡೂ ನೌಕೆಗಳ ನಡುವಿನ ಅಂತರವು ಕಡಿಮೆಯಾಗತೊಡಗಿತು. ಹಿಂದೆ ಶತ್ರುಗಳ ಕಡೆಯ ನೌಕೆಯು ಬರುವದೆಂದು ಮುಂದಿನ ನೌಕೆಯವರಿಗೆ ಸಂದೇಹವುಂಟಾಗದೆ ಇರಲಿಲ್ಲ. ಅವರಾದರೂ ತಮ್ಮ ನೌಕೆಯ ವೇಗವನ್ನು ಹೆಚ್ಚಿಸಿದರು. ಹಿಂದಿನ ನೌಕೆಯಲ್ಲಿ ನಾಲ್ವರೇ ಅಂಬಿಗರಿದ್ದುದರಿಂದ ಅವರು ದಣಿದರು. ಆದ್ದರಿಂದ ಎರಡೂ ನೌಕೆಗಳ ನಡುವಿನ ಅಂತರವು ಮತ್ತೆ ಹೆಚ್ಚಾಗಹೊಡಗಿತು. ಕೂಡಲೆ ಹಂಬೀರರಾಯನು ತನ್ನ ಸೈನಿಕರಿಗೆ ಹುಟ್ಟು ಹಾಕಹೇಳಿದನು. ಹಂಬೀರರಾಯನ ಸೈನಿಕರು ಹುಟ್ಟು ಹಾಕಲಾರಂಭಿಸಿದ ಕೂಡಲೆ ಅವನ ನೌಕೆಯ ವೇಗವು ಹೆಚ್ಚಾಯಿತು. ಸ್ವಲ್ಪ ವೇಳೆಯಲ್ಲಿ ಮತ್ತೆ ಎರಡೂ ನೌಕೆಗಳ ಅಂತರವು ಕಡಿಮೆಯಾಗತೊಡಗಿತು. ಅಷ್ಟು ವೇಳೆಗೆ ಎರಡೂ ನೌಕೆಗಳೊಳಗಿನ ಅಂಬಿಗರು ದಣಿದಿದ್ದರು. ಎರಡೂ ನೌಕೆಗಳು ತೀರ ಸಮೀಪಕ್ಕೆ ಬಂದಿದ್ದವು. ಇನ್ನು ಸ್ವಲ್ಪೇ ವೇಳೆಯಲ್ಲಿ ನಾವು

ಶತ್ರುನೌಕೆಯನ್ನು ಹಿಡಿಯುವೆವು, ಎಂದು ಹಂಬೀರರಾಯನ ನೌಕೆಯ ಜನರು ಉತ್ಸುಕರಾಗಿದ್ದರು. ಶತ್ರುನೌಕೆಯವರೂ ಶಕ್ತಿಮೀರಿ ಸಾಹಸ ಮಾಡ ತೊಡಗಿದ್ದರು. ಎಷ್ಟು ಸಾಹಸಬಟ್ಟರೂ ಎರಡೂ ನೌಕೆಗಳು ಒಂದನ್ನೊಂದು ಕೂಡದಾದವು. ಅಂತರವೂ ಹೆಚ್ಚಾಗದಾಯಿತು ಇನ್ನು ಬಾಣ ಹೊಡೆದು ಶತ್ರು ನೌಕೆಯೊಳಗಿನ ಅಂಬಿಗರನ್ನು ಹತಾಶಗೊಳಿಸಬೇಕೆಂದು ಹಂಬೀರ ರಾಯನ ಸೈನಿಕರು ಹೊಂಚು ಹಾಕಿದರು; ಆದರೆ ಹಂಬೀರರಾಯನು ಈ ಮಾ ತಿಗೆ ಒಪ್ಪಲಿಲ್ಲ. ಮತ್ತಾವ ಉಪಾಯ ಮಾಡಿ ಶತ್ರುನೌಕೆಯನ್ನು ತಲುಪ ಬೇಕೆಂದು ಹಂಬೀರರಾಯನೂ ಅವನ ಸೈನಿಕರೂ ಹಂಚಿಕೆ ಹಾಕತೊಡಗಿದರು. ಆಗ ಶಂಭುವಿಗೆ ಒಂದು ಹಂಚಿಕೆ ತೋಚಿತು. ಅವನು ತನ್ನ ಹಂಚಿಕೆಯನ್ನು ಯಾರಿಗೂ ಹೇಳದೆ ಒಂದು ದೊಡ್ಡ ನೂಲಿನ ಹಗ್ಗವನ್ನು ಕೈಯಲ್ಲಿ ತೆಗೆದು ಕೊಂಡು ಅದರ ಒಂದು ತುದಿಯನ್ನು ತಾನು ಕುಳಿತ ನೌಕೆಗೆ ಕಟ್ಟಿ ಸಮುದ್ರ ದಲ್ಲಿ ಬಿದ್ದನು. ಅವನು ಒಳ್ಳೇ ರಭಸವಾಗಿ ಈಸುತ್ತ ಹೋಗಿ ಆ ಹಗ್ಗದ ಮತ್ತೊಂದು ತುದಿಯನ್ನು ಯಾರಿಗೂ ತಿಳಿಯದ ಹಾಗೆ ಶತ್ರು ನೌಕೆಗೆ ಕಟ್ಟಿ ಮತ್ತೆ ತನ್ನ ನೌಕೆಗೆ ಬಂದು ತಲುಪಿದನು. ಈ ಸಾಹಸವನ್ನು ನೋಡಿ ಹಂ-ಬೀರರಾಯನು ದಂಗುಬಡೆದನು. ಶತ್ರುನೌಕೆಗೆ ಹಗ್ಗ ಕಟ್ಟುವ ಸಾಹಸವನ್ನು ಎಲ್ಲರೂ ಹೊಗಳಿದರು. ಅನಂತರದಲ್ಲಿ ಹಂಬೀರರಾಯನ ಸೈನಿಕರು ಹಗ್ಗವನ್ನು ಎಳೆಯತೊಡಗಿದರು. ಸ್ವಲ್ಪ ವೇಳೆಯಲ್ಲಿ ಮುಂದಿನ ನೌಕೆಯವರಿಗೆ ತಿಳಿಯದ ಹಾಗೆ ಆ ನೌಕೆಯು ಹಿಂದಿನ ನೌಕೆಗೆ ಹತ್ತಿತು. ಕೂಡಲೆ ಎರಡೂ ಬಣದವರು ಶರವೃಷ್ಟಿಗರೆಯಲಾರಂಭಿಸಿದರು. ಹಂಬೀರರಾಯನೂ ಅವನ ಸೈನಿಕರೂ ಬಾಣ ಹೊಡೆಯುತ್ತಲೆ ಶತ್ರುನೌಕೆಯಲ್ಲಿ ಸೇರಿದರು. ಅನಂತರ ಖಡ್ಗಯುದ್ಧ ವು ಪ್ರಾರಂಭವಾಯಿತು, ಶತ್ರು ಸೈನಿಕರು ಹತಾಶರಾದರು. ಆಗ ಆ ಸೈನಿಕರ ಮುಖ್ಯನು ಶಸ್ತ್ರಧಾರಿಯಾಗಿ ಮುಂದೆ ಬಂದನು. ಕೂಡಲೆ ಶಂಭು, ಕಾಳು ಮೊದಲಾದ ಹಂಬೀರರಾಯನ ಸೈನಿಕರು ಆ ಮುಖ್ಯನ ಮೇಲೆ ಬಾಣ ಹೂಡಿ "ಇವನೇ ಅವನು!" ಎಂದು ಕೂಗಿದರು.

"ಜನರು ಹೇಳಿದ ಗುರತಿನಿಂದ ಇವನೇ ಆ ಧೋಂಡೂ ಕಾವಲುಗಾರ ನಾಗಿರಬಹುದು; ಆದರೆ ಇವನೊಬ್ಬನೇ ನಮ್ಮ ಕೈಯಲ್ಲಿ ಸಿಲುಕಿದ್ದಂತಾಗಿರು ವದರಿಂದ ಹೀಗೆ ಬಾಣ ಹೂಡಿ ಕೊಲ್ಲುವದು ಅನ್ಯಾಯವಾಗುವದು. ಅನೇ ಕರು ಏಕಾಕಿಯಾದ ಶತ್ರುವಿನ ಮೇಲೆ ಈ ರೀತಿ ದಾಳಿ ಮಾಡುವದು ಕ್ಷಾತ್ರ

ಧರ್ಮಕ್ಕೆ ವಿಹಿತಕರ್ತವ್ಯವಾಗಲಾರದು. ನಾನು ಇವನೊಡನೆ ದ್ವಂದ್ವಮಾಡು ವೆನು. ಇವನು ಪರಾಭೂತನಾದರೆ ಇವನಲ್ಲಿಯು ನಮ್ಮ ಕಾಗದ-ಪತ್ರಗಳನ್ನು ಸೆಳೆದುಕೊಳ್ಳಲು ನಾವು ಬಾಧ್ಯರಾಗುವೆವು; ಒಂದು ವೇಳೆ ನಾನು ಪರಾಭವ ಗೊಂಡರೆ ನೀವು ಇವನ ಮೇಲೆ ದಾಳಿ ಮಾಡಲು ಅನರ್ಹರಾಗುವಿರಿ. ಕ್ಷಾತ್ರಧರ್ಮವೆಂದರೆ ಅದು ನಾನು ಹೇಳಿದ ರೀತಿಯುವೇ ಇರುವದು. ಏಕಾಂತ ಯಾದವನ ಮೇಲೆ ದಾಳಿ ಮಾಡುವದು ಬಹುಸಂಖ್ಯಾಕರಾದ ನಮ್ಮ ಸಾಮರ್ಥ್ಯದೊಳಗಿನದೆಂಬದು ಸ್ಪಷ್ಟವಾಗಿ ಕಾಣುತ್ತಿರಲು, ನಾವು ಹಾಗೆ ಮಾಡಿದರೆ ವಿಜಯಸಂಪಾದನೆಯಾದರೂ ಅದು ಅಪಜಯವು." ಎಂದು ಹಂಬೀರರಾಯನು ನುಡಿದನು.

ಹಂಬೀರರಾಯನ ಮಾತಿನಿಂದ ಶಂಭು, ಕಾಳು ಮೊದಲಾದವರು ಆಲೋಚನೆಗೊಳಗಾದರು; ಕಾರಣವಿಲ್ಲದೆ ಇಲ್ಲದ ಕಟ್ಟಳೆಗಳನ್ನು ಹುಟ್ಟಿಸಿ ಕೈಗೆ ಬಂದ ತುತ್ತು ಬಾಯಿಗೆ ಬಾರದ ಹಾಗೆ ಮಾಡುವ ಅವನ ಯೋಜನೆಯು ಯಾರಿಗೂ ಸಮ್ಮತವಾಗಲಿಲ್ಲ; ಆದರೆ ಅವನ ಮಾತಿನ ವಿರುದ್ಧವಾಗಿ ಮಾತಾ ಡಲು ಯಾರಿಗೂ ಧೈರ್ಯವಿರಲಿಲ್ಲ. ಕೆಲ ವೇಳೆಯ ಮೇಲೆ ಶಂಭುವು ಧೈರ್ಯ ತಂದುಕೊಂಡು:—"ಧನಿಯರೆ, ಸಂಗ್ರಾಮದಲ್ಲಿ ಜಯಾಪಜಯಗಳು ದೈವಾ ಧೀನವಾದವುಗಳು. ನೀವು ಶಕ್ತಿಸಂಪನ್ನರಿರುವದರಿಂದಲೂ ಸಾಹಸಿಗಳೂ ಶಸ್ತ್ರ ಕುಶಲರೂ ಇರುವದರಿಂದಲೂ ನೀವೇ ಜಯಶಾಲಿಗಳಾಗುವವರಲ್ಲಿ ಸಂದೇಹ ವಿಲ್ಲವೆಂಬದು ನಿಜ; ಆದರೆ ಪ್ರಸಂಗವು ವಿಪರೀತವಾದರೆ ಮಾತ್ರ ಕಠಿಣವಾ ಗುವದು. ಮಾನಾಜಿರಾಯರ ಅಭೀಷ್ಟವು ಸಿದ್ಧಿಸದೆ ಮಹಾರಾಜರ ರಾಜಕಾರ ಣಕ್ಕೆ ಆಘಾತವುಂಟಾಗಬಹುದು. ಇದಕ್ಕೆ ನೀವು ಏನು ಹೇಳುವಿರಿ?"

"ಶಂಭೂ, ನೀನು ಹೇಳುವದೆಲ್ಲ ನಿಜವು; ಆದರೆ ಎಲ್ಲರೂ ಒಮ್ಮೆಲೆ ಮುಗಿಬಿದ್ದು ಏಕಾಕಿಯಾದವನನ್ನು ಘಾತಿಸುವದು ನಿನ್ನ ಮನಸ್ಸಿಗಾದರೂ ಒಪ್ಪುವದೆ? ಒಂದು ವೇಳೆ ನಾನು ಪರಾಭೂತನಾದರೆ, ಇಲ್ಲವೆ ಮಡಿದರೆ, ನಿಮ್ಮಲ್ಲಿ ಯಾರೊಬ್ಬರು ಮುಂದೆ ಬಂದು ಸಂಗ್ರಾಮಮಾಡಿ ಶತ್ರುವನ್ನು ಜಯಿಸಿ ಕಾರ್ಯ ಸಾಧನೆಮಾಡಿಕೊಳ್ಳಬೇಕು. ಈ ವೀರನೊಡನೆ ಒಬ್ಬೊ ಬ್ಬರೇ ಯುದ್ಧ ಮಾಡುತ್ತ ಹೋಗಬೇಕಲ್ಲದೆ, ಒಮ್ಮೆಲೆ ದಾಳಿಮಾಡಲು ನನ್ನ ಒಪ್ಪಿಗೆಯಿಲ್ಲ."

ಶಂಭುವು ನಿರುಪಾಯನಾಗಿ ಸುಮ್ಮನಾದನು. ಆಗ ಶತ್ರುಗಳ ನಾಯ

ಕನು;--"ಶಾಬಾಸ್! ಕ್ಷಾತ್ರವೀರಾ! ನೀನು ನಿಜವಾಗಿಯೂ ತೇಜಸ್ವಿಯಿರುವೆ. ನಿಮ್ಮಲ್ಲಿಯ ಧರ್ಮಭಾವನೆಗಳು ನಿಮ್ಮ ಕ್ಷಾತ್ರವೃತ್ತಿಯ ಸ್ವರೂಪವನ್ನು ಚನ್ನಾಗಿ ವ್ಯಕ್ತಪಡಿಸುವವು. ನೀವು ನಿಮ್ಮ ಕಟ್ಟಳೆಯ ಮೇರೆಗೆ ನಡೆದರೆ ನನ್ನಲ್ಲಿಯ ಕಾಗದ-ಪತ್ರಗಳು ನಿಮಗೆ ದೊರೆಯಲಾರವು. ನೀವು ನನ್ನೊಡನೆ ಯುದ್ಧ ಮಾಡಿ ಗೆಲ್ಲಲಾರಿರಿ. ನಿಮ್ಮ ವಯಸ್ಸು ಚಿಕ್ಕದಿದ್ದು ಅನೇಕ ಸಂಗ್ರಾಮಗಳಲ್ಲಿ ನುರಿತ ನನ್ನಂಥ ಯೋಧನೊಡನೆ ಹೋರಾಡುವದು ನಿಮಗೆ ಕಠಿಣವಾಗುವದು. ನಿಮ್ಮ ಮಾತುಗಳು ವೀರೋಚಿತವಿದ್ದರೂ ಪರಿಣಾಮವು ಮಾತ್ರ ಹಿತಕಾರಿಯಾಗಿ ಪರಿಣಮಿಸಲಾರದು. ನೀವೆಲ್ಲರೂ ಒಮ್ಮೆಲೆ ಕಾದಿ ನನ್ನನ್ನು ಸೋಲಿಸುವಿರೆಂಬ ಮಾತಿನಲ್ಲಿ ಸಂದೇಹವಿಲ್ಲ; ಆದರೆ ಏಕಾಕಿಯಾಗಿ ನಿಮ್ಮೊಗಿನ ಯಾರೊಬ್ಬರು ಬಂದರೂ ನೀವು ವಿಜಯಶಾಲಿಗಳಾಗಲಾರಿರಿ,"

"ವೃಥಾ ಭಾಷಣವು ಪ್ರಯೋಜನಕಾರಕವಲ್ಲ. ನಿಮ್ಮಲ್ಲಿ ಅಂಥ ಸತ್ವಶಾಲಿತ್ವವು ಇದ್ದುದಾದರೆ ಕಾದಬಹುದು. ಸಾಮರ್ಥ್ಯ ಪರೀಕ್ಷೆಯು ರಣದಲ್ಲಿ ತಾನಾಗಿಯೇ ಆಗುವದು" ಘೋಂಡೂ ಕಾವಲುಗಾರನಿಗೆ ಹಂಬೀರರಾಯನು ಹೇಳಿದನು.

ಪರಕ್ಷಣದಲ್ಲಿ ಉಭಯ ಯೋಧರು ದ್ವಂದ್ವಯುದ್ಧಕ್ಕನುವಾದರು. ಶಸ್ತ್ರಗಳು ಖಣಾಖಣಾಟ ಮಾಡತೊಡಗಿದವು. ಉಭಯತರೂ ಸರಿಸಮಾನ ಶೂರರಾಗಿ ತೋರತೊಡಗಿದರು. ಒಂದು ಗಳಿಗೆಯ ವರೆಗೆ ಕಾದಿದರೂ ವಿಜಯಶ್ರೀಯು ಎತ್ತ ಹೊರಳುವಳೆಂಬದರ ಕಲ್ಪನೆಯೇ ಆಗದಂತೆ ಸ್ಥಿತಿಯುಂಟಾಗಿತ್ತು. ಮುಂದೆ ಕೆಲ ಕ್ಷಣಗಳ ಮೇಲೆ ಹಂಬೀರರಾಯನು ಒಳ್ಳೆಯ ಕುಶಲತನದಿಂದ ಘೋಂಡೂ ಕಾವಲುಗಾರನ ಖಡ್ಗಕ್ಕೆ ತನ್ನ ಖಡ್ಗದಿಂದ ಬಲವಾಗಿ ಹೊಡೆದನು. ಈ ಪೆಟ್ಟಿನಿಂದ ಅವನ ಖಡ್ಗವು ದೂರ ಸಿಡಿದು ಬಿತ್ತು. ಕೂಡಲೆ ಹಂಬೀರರಾಯನು ರಭಸದಿಂದ ಅವನ ಮೇಲೇರಿ ಹೋಗಿ ತೆಕ್ಕೆ ಬಿದ್ದು ನೆಲಕ್ಕೆ ಕೆಡಹಿ, ಎದೆಯ ಮೇಲೆ ಕುಳಿತು ಶಸ್ತ್ರವೆತ್ತಿ—"ಈಗಲಾದರೂ ವಿಜಯವನ್ನು ಒಪ್ಪುವಿಯೋ ಇಲ್ಲವೊ?" ಎಂದು ಪ್ರಶ್ನೆ ಮಾಡಿದನು.

"ಒಪ್ಪದೇನು? ಸ್ವಂತ ಸಾಮರ್ಥ್ಯವು ಧರಾಶಾಯಿಯಾಗಿ ನಿಮ್ಮ ಸಾಮರ್ಥ್ಯವು ವಿಜಯ ಪತಾಕೆಯನ್ನು ಮೆರೆಯಿಸುವದಕ್ಕೆ ಎದೆಯ ಮೇಲೆ ಕುಳಿತ ಮೇಲೆ ಜಯಾಪಜಯಗಳನ್ನು ಒಪ್ಪದಿದ್ದರೆ ನಡೆಯುವದೆ?"

"ನೀನೇ ಘೋಂಡೂ ಕಾವಲುಗಾರನಲ್ಲವೆ?"

"ಸುಂದರಗಡದಲ್ಲಿ ಇವೇ ಹೆಸರಿನಿಂದ ನಾನು ಸಂಬೋಧಿಸಿಕೊಳ್ಳುತ್ತಿದ್ದೆನು; ಆದರೆ ನನ್ನ ಹೆಸರು ದೌಲತರಾಯನೆಂದಿರುವದು. ನಾನು ಫೌಂಡ ಸಾವಂತರ ಸರದಾರನು. ಒಂದು ರಾಜಕಾರಣದ ಸಾಧನೆಗಾಗಿ ಬಂದಿದ್ದೆನು. ಕಾರ್ಯಸಾಧನೆಯಾಯಿತೆಂಬ ಉತ್ಸಾಹದಿಂದ ಹೊರಟಿದ್ದೆನು. ನಡುವೆ ನನ್ನ ವಿಜಯಕ್ಕೆ ಗಂಡಾಂತರವುಂಟಾಯಿತು; ನನ್ನ ಸ್ವಾಮಿಯ ಕಾರ್ಯವು ಹಾಳಾಯಿತು. ಉಪಾಯವಿಲ್ಲ."

"ದೌಲತರಾಯರೆ, ಜಯಗಡದ ಗುಪ್ತ ಕಾಗದ-ಪತ್ರಗಳು ಸಾವಂತನ ಕಡೆಗೆ ತಲುಪಿದರೆ ಮಹಾರಾಜರ ಸಾಮರ್ಥ್ಯವು ವ್ಯರ್ಥವಾಗುತ್ತಿತ್ತು. ಒಬ್ಬ ಸ್ವಾಮಿದ್ರೋಹಿಗಾಗಿ ಸ್ವರಾಜ್ಯಕ್ಕೆ ಧಕ್ಕೆಯುಂಟಾಗುವ ಸಂದರ್ಭವಿದ್ದುದರಿಂದ, ಅವರು ಅದರ ವ್ಯವಸ್ಥೆಯಲ್ಲಿ ತೊಡಗಿರುವರು. ಈ ಕಾಗದ-ಪತ್ರಗಳು ಸಾವಂತನ ಕೈವಶವಾಗಿದ್ದರೆ ಬಹಳೇ ಅನರ್ಥವಾಗುತ್ತಿತ್ತು. ಸಾವಂತನು ಸ್ವಜನನಾಗಿದ್ದರೂ ಸ್ವರಾಜ್ಯದ್ರೋಹಿಯಿರುವನು; ಮಹಾರಾಜರ ಉದಾತ್ತವಾದ ಧ್ಯೇಯಸಾಧನೆಗೆ ಕಂಟಕರೂಪಿಯಾಗಿರುವನು. ಅವನ ಪಾರುಪತ್ಯ ಮಾಡುವದು ಆದ್ಯ ಕರ್ತವ್ಯವಾಗಿದೆ. ಅನ್ಯೃತರಾಯನಂತಹ ಸ್ವರಾಜ್ಯ ಸೇವಕರು ಸಹ ಒಡೆದು ಸ್ವಾರ್ಥಸಾಧನೆಮಾಡಿಕೊಳ್ಳತೊಡಗಿರುವದನ್ನು ನೋಡಿದರೆ, ಸ್ವರಾಜ್ಯದ ಹೊರಗಿನ ಸಾವಂತನಂತಹ ಜನರಿಗೆ ಹೆಸರಿಡುವದು ಭೂಷಣವಾಗದಿದ್ದರೂ, ತಾತ್ವಿಕ ದೃಷ್ಟಿಯಿಂದ ನೀವೂ ನಿಮ್ಮ ಸಾವಂತನೂ ಸ್ವರಾಜ್ಯದ್ರೋಹಿಗಳೇ ಇರುವಿರಿ. ಸ್ವರಾಜ್ಯಾಭಿಮಾನವು ನಿಮ್ಮಲ್ಲಿಲ್ಲದಿರುವದನ್ನು ನೋಡಿ ಖೇದವೆನಿಸುವದು. ಏನೇ ಇರಲಿ, ನೀವು ನನ್ನ ಸೆರೆಯಾಳಾಗಿರುವಿರಿ. ಮಾನಾಜಿರಾಯರ ಆಜ್ಞೆಯ ಮೇರೆಗೆ ನಿಮ್ಮನ್ನು ನಾನು ಸುಂದರಗಡಕ್ಕೆ ಒಯ್ಯಲೇಬೇಕಾಗಿದೆ. ಅಲ್ಲಿ ಹೋದ ಮೇಲೆ ನಿಮ್ಮ ಅಪರಾಧದ ನಿರ್ಣಯವಾಗುವದು."

ಹಂಬೀರರಾಯನು ಹೀಗೆ ನುಡಿದು ಎದ್ದು ನಿಂತನು. ಆಗ ದೌಲತರಾಯನು ತನ್ನ ಬಳಿಯಲ್ಲಿರಿಸಿದ ಕಾಗದ-ಪತ್ರಗಳನ್ನು ಹಂಬೀರರಾಯನ ಕೈಯಲ್ಲಿ ಕೊಟ್ಟು:—"ವೀರಾಗ್ರಣಿಗಳೇ, ನೀವು ನಿಮ್ಮ ಕರ್ತವ್ಯವನ್ನು ಅವಶ್ಯವಾಗಿ ನೆರವೇರಿಸಿರಿ."

ಹಂಬೀರರಾಯನು ಕಾಗದ-ಪತ್ರಗಳನ್ನು ತೆಗೆದುಕೊಂಡು ಭದ್ರವಾಗಿರಿಸಿದನು. ಯುದ್ಧದ ಆವೇಶದಲ್ಲಿ ತನಗೆ ದೊಡ್ಡ ಗಾಯವಾದದ್ದು ಕೂಡ ಅವನಿಗೆ

ಗೊತ್ತಿರಲಿಲ್ಲ. ಆ ಗಾಯವು ಮರ್ಮಸ್ಥಳಕ್ಕಿರದಿದ್ದರೂ ದೊಡ್ಡದಿದ್ದುದರಿಂದ ರಕ್ತಸ್ರಾವವು ವೇಗದಿಂದ ನಡೆದಿತ್ತು. ಶಂಭುವು ತನ್ನ ಧನಿಗಾದ ಗಾಯವನ್ನು ನೋಡಿ ಅದನ್ನು ಅರಿವೆಯಿಂದ ಬಿಗಿದನು. ರಕ್ತಸ್ರಾವವು ಬಹಳವಾದುದರಿಂದ ಹಂಬೀರರಾಯನಿಗೆ ಗ್ಲಾನಿ ಬರತೊಡಗಿತು. ಶಂಭುವು ಈ ಲಕ್ಷಣವನ್ನು ತಿಳಿದು ಅವನನ್ನು ನೌಕೆಯಲ್ಲಿ ಮಲಗಿಸಿದನು. ಅನಂತರದಲ್ಲಿ ಎರಡೂ ನೌಕೆಗಳು ಪುನಃ ಸುಂದರಗಡದ ಕಡೆಗೆ ನಡೆದವು. ದೌಲತರಾಯನು ವಿಶ್ವಾಸಘಾತಮಾಡುವದಿಲ್ಲವೆಂದು ವಚನಕೊಟ್ಟದ್ದರಿಂದ ಶಂಭುವು ಅವನನ್ನು ಬಂಧಿಸದೆ ಹಾಗೆಯೆ ಕರೆದುಕೊಂಡು ನಡೆದಿದ್ದನು. ಕೆಲವು ವೇಳೆಯ ಮೇಲೆ ಎರಡೂ ನೌಕೆಗಳು ಸುರಕ್ಷಿತವಾಗಿ ಸುಂದರಗಡದ ಸಮೀಪದ ಸಮುದ್ರತೀರವನ್ನು ತಲುಪಿದವು.

---

## ೧೪ ದೇಶದ್ರೋಹಕ್ಕೆ ತಕ್ಕ ಶಾಸನ



ಸ್ವರಾಜ್ಯದ ಹೆಬ್ಬಾಗಿಲಂತಿರುವ ಜಯಗಡ ದುರ್ಗವು ಅನಾಯಾಸವಾಗಿ ಕೈವಶವಾಗುವದೆಂದು ಸಾವಂತನು ಆನಂದಸಾಗರದಲ್ಲಿ ಲೋಲಾಡತೊಡಗಿದ್ದನು. ಅವನ ಸೈನಿಕರು ಉತ್ಸಾಹದಿಂದ ಅತ್ತಿತ್ತ ನಲಿದಾಡತೊಡಗಿದ್ದರು. ಸಾವಂತವಾಡಿಯ ಸೇನಾಧಿಪತಿಯೂ ಸೈನಿಕರೂ ರಣಕ್ಕೆ ಬಂದವರಂತಿರದೆ, ಒಂದು ನಿಬ್ಬಣಕ್ಕೆ ಬಂದವರಂತೆ ಎದುರ್ಗೊಳ್ಳುವವರ ದಾರೀ ನೋಡತೊಡಗಿದ್ದರು. ಅಮಾವಾಸ್ಯೆಯ ಮಧ್ಯರಾತ್ರಿಯ ಸಮಯ ಸಮೀಪಿಸಿತ್ತು. ಆ ಅಂಧಕಾರದಲ್ಲಿ ಎಲ್ಲರ ಲಕ್ಷ್ಯವು ದುರ್ಗದ ಕಡೆಗೆ ವೇಧಿಸಿತ್ತು. ಈಗ ದುರ್ಗದ ಮೇಲೆ ದೀವಟಿಗಳು ಕಾಣುವವು; ಈಗ ಹೆಬ್ಬಾಗಿಲು ತೆರೆಯುವದು; ಈಗ ಅಮೃತರಾಯನು ತನ್ನ ಪರಿವಾರದೊಡನೆ ಸ್ವಾಗತಮಾಡಲಿಕ್ಕೆ ಬರುವನು. ಸುವಾಸಿನಿಯರು ಆರುತಿಯ ತಳಿಗೆಯನ್ನು ತಂದು ಈಗ ಬೆಳಗುವರು. ಈಗ ದುರ್ಗಾರೋಹಣಮಾಡಿ ಅಲ್ಲಿ ಅಧಿಕಾರಸ್ಥಾಪನೆ ಮಾಡುವೆವು, ಮೊದಲಾದ ಅನೇಕ ಆಲೋಚನೆಗಳು ಸಾವಂತನ ಹಾಗು ಅವನ ಪರಿವಾರದವರ ತಲೆಯಲ್ಲಿ ತುಂಬಿದ್ದವು. ಎಷ್ಟೋ ವೇಳೆಯಾದರೂ ಏನೂ ಸಂಜ್ಞೆತೋರದ್ದರಿಂದ ಕೊಂಬು ಊದಿದವು; ದೀವಟಗೆಗಳು ಹೊತ್ತಿದವು. ಇನ್ನು ಮೇಲೆ ದೂತನನ್ನು ಕಳಿಸಬೇಕೆಂಬ ಮಾತುಗಳು ನಡೆದವು. ಅಷ್ಟರಲ್ಲಿ ಸುಚಿಹ್ನಗಳು

ಅವರ ಮುಷ್ಟಿಗೆ ತೋರಿದವು. ದುರ್ಗದ ಕಡೆಯಿಂದ ಅನಂತ ಸೈನಿಕರು ಕೈ ಯಲ್ಲಿ ದೀವಟಿಗೆಗಳನ್ನು ಹಿಡಿದುಕೊಂಡು ಬರುವದು ಸಾವಂತನ ಸೈನಿಕರ ದೃಷ್ಟಿಗೆ ಬಿತ್ತು. ಆಗ ಎಲ್ಲರಿಗೂ ಹರುಷವಾದಂತಾಯಿತು. ವೇಳೆಗೆ ಸರಿ ಯಾಗಿ ಅಮೃತರಾಯನು ಬರಲಿಕ್ಕೆ ತಪ್ಪಲಿಲ್ಲೆಂದು ಅವನ ಶ್ಲಾಘನೆಯಾಗ ತೊಡಗಿತು. ದುರ್ಗಾಧಿಪತಿಗೆ ಕೊಡತಕ್ಕ ಕಾಣಿಕೆ ಹಣವನ್ನು ಥೈಲಿಗೆ ತಿಗೆದು, ದೊಡ್ಡ ರತ್ನಗಂಬಳಿಯ ಮೇಲೆ ಇರಿಸಲಾಯಿತು. ಯಾವ ಯಾವ ಸ್ಥಾನದಲ್ಲಿ ಯಾರು ಯಾರು ವಿರಾಜಮಾನರಾಗಬೇಕೆಂಬ ನಿರ್ಣಯವಾಯಿತು. ಫೌಂಡ ಸಾವಂತ, ಸೇನಾಧಿಪತಿ ಮೊದಲಾದವರು ಅಮೃತರಾಯನನ್ನು ಕರೆದು ಕೊಂಡು ಬರಲು ಕುಳಿತ ಸ್ಥಳದಿಂದೆದ್ದರು. ದುರ್ಗದ ಸೈನಿಕರು ಸಮೀಪಕ್ಕೆ ಬಂದರು. ತೀರ ಹತ್ತರ ಬಂದರು. ಕೂಡಲೆ ಅವರ ಮುಖದಿಂದ "ಜಯ ಭವಾನಿ!" ಎಂಬ ಜಯ ಜಯಕಾರ ಧ್ವನಿಯು ಹೊರಟಿತು. ಪರಕ್ಷಣದಲ್ಲಿ ಆ ಸೈನಿಕರು ಸಾವಂತನ ಸೈನ್ಯದ ಮೇಲೆ ಬಿದ್ದು ಸಂಗ್ರಾಮವನ್ನು ಪ್ರಾರಂಭಿಸಿ ದರು. ಫೌಂಡಸಾವಂತನೂ ಅವನ ಸೇನಾಪತಿಯೂ ಸೈನಿಕರೂ ಗಾಬರಿ ಯಾಗಿ ತಮ್ಮ ಶಸ್ತ್ರಾಸ್ತ್ರಗಳನ್ನು ಸಿದ್ಧಪಡಿಸುವಷ್ಟರಲ್ಲಿ ಎಷ್ಟೋ ಜನ ಸೈನಿಕರು ಗತಾಸುವಾಗಿ ಭೂಮಿಗೆ ಬಿದ್ದರು. ಕೊನೆಗೆ ಕೈಗೆ ಕೈ ಹತ್ತಿತು. ಅಮೃತರಾಯನು ಘಾತ ಮಾಡಿದನೆಂದು ಎಲ್ಲರೂ ಅವನನ್ನು ಹಳಿಯತೊಡಗಿದರು. ದುರ್ಗ ದಿಂದ ಬಂದ ಸೈನ್ಯದಲ್ಲಿ ಕರೀ ಕುದುರೆಯನ್ನೇರಿದ ಶಿವಾಜಿ ಮಹಾರಾಜರು ಇದ್ದುದನ್ನು ಫೌಂಡ ಸಾವಂತನು ನೋಡಿದನು; ಸೇನಾಪತಿಯೂ ಸೈನಿಕರೂ ನೋಡಿದರು. ಕೂಡಲೆ ಅವರು ಮತ್ತಿಷ್ಟು ಗಾಬರಿಯಾದರು. ಅಮೃತರಾಯ ನಂಥ ಸ್ನೇಹಿಯು ಹೀಗೆ ಒಡಕುತನವನ್ನೇಕೆ ಮಾಡಿರಬಹುದೆಂದು ಸಾವಂ ತನು ಯೋಚನೆಗೊಳಗಾದನು. ತಾನು ಅಮೃತರಾಯನೊಡನೆ ನಡೆಯಿಸಿದ ಪತ್ರವ್ಯವಹಾರವು ಥೈಲಿಗೆ ಬಿದ್ದಿರಬಹುದೆಂದು ಅವನು ತಿಳಿದುಕೊಂಡನು. ಆ ವ್ಯವಹಾರವು ಅಮೃತರಾಯನಿಂದ ಮಹಾರಾಜರಿಗೆ ತಿಳಿದಿರುವದೋ ಎಂಬ ದನ್ನು ಯೋಚಿಸುತ್ತ ಕುಳಿತುಕೊಳ್ಳಲು ಸಹ ಅವನಿಗೆ ಅವಕಾಶವಿರಲಿಲ್ಲ. ಯಾಕಂದರೆ, ಸ್ವರಾಜ್ಯಸೇನೆಯ ಆರ್ಭಟವು ಕ್ಷಣಕ್ಷಣಕ್ಕೆ ಹೆಚ್ಚಾಗತೊಡಗಿ, ತನ್ನ ಸೈನಿಕರು ನಿರ್ವಿಣ್ಣರಾಗತೊಡಗಿದ್ದು ಅವನ ದೃಷ್ಟಿಗೆ ಬೀಳತೊಡಗಿತು. ಈ ಸಂಧಿಯಲ್ಲಿ ಬೇಗನೆ ಕಾಲ್ದೆಗೆಯುವದೆ ಗತ್ಯಂತರವಿಲ್ಲವೆಂಬದೂ ಅವನ ಪ್ರತ್ಯ ಯಕ್ಕೆ ಬಂತು. ಕೂಡಲೆ ಅವನು ಉಳಿದ ಸೈನ್ಯದೊಡನೆ ಅಲ್ಲಿಂದ ಕಾಲ್ದೆಗೆ

ದನು. ಮೂಸಾಜಿರಾಯನು ಓಡುತ್ತಿರುವ ಸೈನಿಕರನ್ನು ಬೆನ್ನಟ್ಟುವ ಯೋಜನೆಯಲ್ಲಿದ್ದನು; ಆದರೆ ಮಹಾರಾಜರು ಹಾಗೆ ಮಾಡಗೊಡದೆ ಜಯಗಡಕ್ಕೆ ಹಿಂತಿರುಗುವ ಬಗ್ಗೆ ಆಜ್ಞೆಮಾಡಿದರು. ಶೀಘ್ರವಾಗಿ ಬಂದು, ಕಪ್ಪ-ಕಾಣಿಕೆ ಕೊಟ್ಟು ಒಪ್ಪಂದಮಾಡಿಕೊಳ್ಳದಿದ್ದರೆ ಸ್ವರಾಜ್ಯದ ಪಡೆಯು ಸಾವಂತವಾಡಿಯನ್ನು ಉಧ್ವಸ್ತಗೊಳಿಸುವದೆಂಬ ಸಂದೇಶವು ಆಗಿಂದಾಗ ಫೌಂಡಸಾವಂತನ ಕಡೆಗೆ ಕಳಿಸಲ್ಪಟ್ಟಿತು. ಹತಾಶನಾದ ಸಾವಂತನು ಮಹಾರಾಜರ ಅನುಜ್ಞೆಗೆ ತಲೆಬಾಗಲೇ ಬೇಕಾಯಿತು. ಅವನು ಮಾರನೆಯ ದಿನವೇ ಸಾವಂತಗಡದಿಂದ ತನ್ನ ಪರಿವಾರದೊಡನೆ ಜಯಗಡಕ್ಕೆ ಹೊರಟನು.

ಶಿವಾಜಿಮಹಾರಾಜರು ಸಾವಂತನ ಬರುವಿಕೆಯನ್ನು ಎದುರು ನೋಡುತ್ತ ಜಯಗಡದಲ್ಲಿದ್ದರು. ಸಾವಂತವಾಡಿಯ ಸರದಾರನೊಬ್ಬನು ತನ್ನ ಧನಿಯ ಆಗಮನವನ್ನು ಸೂಚಿಸುವದಕ್ಕಾಗಿ ಮೊದಲೇ ಹೊರಟು ಮಹಾಜರಿಗೆ ಭೆಟ್ಟಿಯಾದನು. ಅವರಾದರೂ ಸೋತನೆಂಬ ಭಾವನೆಯಿಂದ ಅವನ ಉಪೇಕ್ಷೆಮಾಡದೆ ಅವರನ್ನು ಸ್ವಾಗತಿಸಿದರು. ಅಂದು ಜಯಗಡದಲ್ಲಿ ಮಹಾರಾಜರ ಸರದಾರರು ಬಹಳ ಜನರು ಕೂಡಿದ್ದರು. ಅಮೃತರಾಯನಂಥ ದೇಶದ್ರೋಹಿಯಿಂದ ಸ್ವರಾಜ್ಯದ ಅಸ್ತಿತ್ವವು ಹೇಗಾಗುವದೆಂಬದನ್ನು ಎಲ್ಲರ ನಿದರ್ಶಕ್ಕೆ ತಂದುಕೊಡಬೇಕೆಂಬ ಉದ್ದೇಶದಿಂದ ಅವರು ತಮ್ಮ ಸರದಾರರಿಗೆ ಮುಂದಾಗಿ ಆಮಂತ್ರಣವಿತ್ತು ಕರೆಯಿಸಿದ್ದರು. ಸಾವಂತನು ಸಭೆಯಲ್ಲಿ ಕಪ್ಪ-ಕಾಣಿಕೆಗಳನ್ನಿಟ್ಟು ಕ್ಷಮಾಯಾಚನೆಮಾಡಿದನು. ಆಗ ಮಹಾರಾಜರು:—"ಸಾವಂತರೆ, ಒಂದು ವಿಧವಾಗಿ ನೀವು ಅಪರಾಧಿಗಳಿರುವದು ನಿಜ; ಆದರೆ ನಿಮ್ಮ ಅಪರಾಧವು ಎಷ್ಟೇ ದಂಡದಾಯಕವಿದ್ದರೂ ಕ್ಷಮ್ಯವೆನಿಸಬಹುದು; ಆದರೆ ಅಮೃತರಾಯರಂಥವರ ಅಪರಾಧವು ಎಂದೂ ಕ್ಷಮ್ಯವೆನಿಸಲಾರದು. ನೀವು ಸ್ವರಾಜ್ಯದ ದ್ರೋಹಮಾಡುತ್ತಿರುವಿರಿ; ಮಾತೃಭೂಮಿಯ ಸ್ವಾತಂತ್ರ್ಯಹರಣಮಾಡಿ ಭಾರತೀಯರನ್ನು ವಿಡಂಬನೆಗೆ ಗುರಿಮಾಡಿದ ಶತ್ರುಗಳಿಗೆ ನೀವು ಅನುಕೂಲರಾಗಿರುವಿರಿ. ಆದ್ದರಿಂದಲೇ ನೀವು ಅಪರಾಧಿಗಳು. ಆದರೂ ನೀವು ಸ್ವತಂತ್ರರಿರುವಿರಿ. ಯಾರ ಕೈಯಲ್ಲಿಯೂ ಆಧೀನರಾಗಿಲ್ಲ. ಈ ದೃಷ್ಟಿಯಿಂದ ನೀವು ನಿಮ್ಮ ಅಪರಾಧಗಳನ್ನು ಅಲ್ಲಗಳೆಯಲು ಸಮರ್ಥರಾಗಬಹುದು; ಆದರೆ ಅಮೃತರಾಯರು ಮಾತೃಭೂಮಿಯ ಸೇವಕರು; ಸ್ವರಾಜ್ಯದಲ್ಲಿ ಕೆಲಸಗಾರರಿದ್ದಾರೆ; ಜಯಗಡದಂಥ ಆಯಕಟ್ಟಿನ ದುರ್ಗಕ್ಕೆ ಅಧಿಪತಿಗಳಾಗಿದ್ದಾರೆ. ಇಂಥವರು

ದೇಶದ್ರೋಹ ಮಾಡಿದ ಮೇಲೆ ಇವರಿಗೆ ಎಂಥ ಶಾಸನವಿಧಿಸತಕ್ಕದ್ದೆಂಬವು ಎಲ್ಲರಿಗೂ ತಿಳಿಯುವ ಮಾತಾಗಿದೆ. ಇವರು ದೇಶದ್ರೋಹವನ್ನೂ ಮಾಡಿದ್ದಾರೆ; ಮಿತ್ರದ್ರೋಹವನ್ನೂ ಮಾಡಿದ್ದಾರೆ. ದುರ್ಗವನ್ನು ಸ್ವಾಧೀನಪಡಿಸುವೆನೆಂದು ಹೇಳಿ ನಿಮ್ಮನ್ನು ಗೋಳಿಗೀಡುಮಾಡಿದ ಪುಣ್ಯಶಾಲಿಗಳಿವರು! ಇವರಿಗೆ ಮರಣದಂಡನೆಯ ಹೊರತು ಬೇರೆ ಸೌಮ್ಯ ಶಾಸನ ವಿಧಿಸುವದು ಪಾತಕವೆಂದು ನ್ಯಾಯದೇವತೆಯು ಸಲಹೆ ಕೊಡುತ್ತಿರುವಳು."

ಈ ಉಗ್ರವಾದ ತೀರ್ಪು ಕೇಳಿ ಅಮೃತರಾಯನು ನಡುಗಿದನು. ಅವನು ಎದ್ದು ನಿಂತು ಕೈ ಜೋಡಿಸಿ:--"ಮಹಾರಾಜರೆ, ನಾನು ದಂಡನಾರ್ಹನಿದ್ದರೂ ದಯಾದಾನ ಮಾಡಬೇಕು ನನ್ನಿಂದ ಮಹಾಪರಾಧವು ಘಟಿಸಿದ್ದು ನನ್ನ ಸ್ವಾರ್ಥಲಾಲಸೆಯಿಂದ. ಈ ನನ್ನ ದುಷ್ಕೃತ್ಯಕ್ಕಾಗಿ ನನ್ನಲ್ಲಿ ಪಶ್ಚಾತ್ತಾಪವುಂಟಾಗಿದೆ. ನಾನು ಈ ಜಗತ್ತು ತೊಲಗಿದರೆ ನನ್ನ ಹೆಂಡಿರು-ಮಕ್ಕಳು ದುರ್ದಶೆಗೀಡಾಗುವರು. ನನ್ನ ಮೇಲಲ್ಲದಿದ್ದರೂ, ನನ್ನ ಬಡಕುಟುಂಬದ ಮೇಲಾದರೂ ದಯವಿಟ್ಟು ಪ್ರಾಣದಾನ ಮಾಡಿರಿ."

"ಅಮೃತರಾಯರೆ, ನಿಮ್ಮ ಮರಣದಿಂದ ನಿಮ್ಮ ಕುಟುಂಬಕ್ಕೆ ದುರ್ದಶೆಯುಂಟಾಗಬಹುದು; ಆದರೆ ಅದು ಕೆಲ ಕಾಲದ ವರೆಗೆ ಮಾತ್ರ. ನಿಮ್ಮ ಮಕ್ಕಳು ಪ್ರಬುದ್ಧರಾದ ಮೇಲೆ ಎಲ್ಲವೂ ಸುರಕ್ಷಿತವಾಗುವದು. ನೀವು ಜೀವಂತವಾಗುಳಿದರೆ, ಇಡೀ ಮಾತೃಭೂಮಿಯೆ ದುರ್ದಶೆಗೀಡಾಗುವದು. ದೇಶದ್ರೋಹಿಗಳಿಂದುಂಟಾದ ದುರ್ದಶೆಯು ಅನಂತ ಕಾಲದ ವರೆಗೆ ಉಳಿಯುವ ಸಂಭವವೂ ಉಂಟು. ನಿಮ್ಮೊಬ್ಬರ ಪ್ರಾಣರಕ್ಷಣೆ ಮಾಡಿ, ಮಾತೃಭೂಮಿಯ ಅಸುವನ್ನು ಹೀರುವಂಥ ಕೃತ್ಯ ಮಾಡುವದು ಎಂದೂ ಉಚಿತವೆನಿಸಲಾರದು. ಆದುದರಿಂದ ನನ್ನ ತೀರ್ಪಿನಲ್ಲಿ ಪ್ರತಿಯಾಗುವದಿಲ್ಲ."

"ಮಹಾರಾಜರೆ!" ಅಮೃತರಾಯನು ದೀನವಾಣಿಯಿಂದ-"ತಾವು ಹೀಗೆ ಕಠೋರ ಹೃದಯಿಗಳಾದರೆ ನನ್ನ ಯತ್ನವಿಲ್ಲ. ತಾವು ಅತ್ಯಂತ ದಯಾಘನರೆಂಬ ಖಾತ್ರಿಯುಂಟು. ಜೀವದಾನ ಮಾಡಿ ಉಳಿದ ಬೇಕಾದ ಶಿಕ್ಷೆಯನ್ನು ವಿಧಿಸಬಹುದು. ಮರಣದಂಡನೆ ವಿಧಿಸಿಬಿಟ್ಟರೆ ಮರೆತು ಹೋಗುವದು. ದುರ್ಗಾಧಿಪತಿಯಾದ ನನ್ನನ್ನು ಯಾವುದೊಂದು ಕೀಳುತನದ ಕೆಲಸಕ್ಕೆ ನಿಯಮಿಸಿರಿ; ಅಂದರೆ ನನ್ನ ಪಾಪದ ಫಲವಾಗಿ ದೊರೆತ ಸ್ಥಿತಿಯು ಎಲ್ಲರಿಗೂ ದೃಷ್ಟಾಂತವಾಗಿ ಉಳಿಯಬಹುದು."

"ಕೆಲಸಕ್ಕೆ ನಿಯಮಿಸಬೇಕೇ? ನಿಮ್ಮಂಥವರನ್ನು ಕೆಲಸಕ್ಕೆ ತೆಗೆದುಕೊಂಡರೆ ಯಾವ ಕಾಲಕ್ಕೆ ನೀವು ಏನನ್ನು ಮಾಡುವಿರೆಂಬದರ ನಿಯಮವಿಲ್ಲ. ನೀವು ಜಗತ್ತಿನ ಕಣ್ಮರೆಯಾಗಬೇಕೆಂಬೇ ನನ್ನ ಇಚ್ಛೆಯದೆ. ನಿಮಗೆ ಮರಣ ದಂಡನೆಯಲ್ಲದೆ ಅನ್ಯ ವಿಧಿಯಿಲ್ಲ."

ಮಹಾರಾಜರ ತೀರ್ಪುಕೇಳಿ ಅಮೃತರಾಯನ ಅವಸ್ಥೆ ಬಹಳೇ ದೈನ್ಯದ್ದಾಯಿತು. ತನ್ನ ಪ್ರಾರ್ಥನೆಯು ಈ ಪರಿಯಾಗಿ ವ್ಯರ್ಥ ಹೋಗುವದಿಲ್ಲ ವೆಂದು ಅವನು ಭಾವಿಸಿದ್ದನು. ಮಿತ್ರಘಾತ ಮಾಡಿ ಸಾವಂತನನ್ನು ಬಾಗ ಹಚ್ಚಿದ ಶ್ರೇಯವಾದರೂ ತನ್ನನ್ನು ಮರಣದಂಡನೆಯಿಂದ ಉಳಿಸಬಹುದೆಂದು ಅವನು ಭಾವಿಸಿದ್ದನು; ಆದರೆ ಅದು ಅಪರಾಧದ ಹೊರೆಯನ್ನೇ ಹೆಚ್ಚು ಮಾಡಿತು. ಅವನು ನಿರುಪಾಯನಾಗಿ ಕಣ್ಣೀರುದುರಿಸುತ್ತ ನಿಂತನು. ಅವನ ಸ್ಥಿತಿಯನ್ನು ನೋಡಿ ಸಾವಂತನಿಗೆ ದಯೆ ಹುಟ್ಟಿತು. ಮಿತ್ರದ್ರೋಹಿಯಾಗಿದ್ದರೂ ಅವನ ದೈನ್ಯವನ್ನು ನೋಡಿ, ಮಹಾರಾಜರಿಗೆ ತನ್ನದೊಂದು ವಿನಂತಿ ಮಾಡಿಕೊಳ್ಳಬೇಕೆಂದು ಅವನಲ್ಲಿ ವಿಚಾರ ಹುಟ್ಟಿತು. ಆಗ ಅವನು ಮಹಾರಾಜರನ್ನು ಕುರಿತು:-"ಪ್ರಭುಗಳೇ, ಅಮೃತರಾಯರಿಗೆ ದಯದೋರಲು ತೀರ ಸ್ಥಾನವೇ ಇಲ್ಲವೇನು?"

"ಉಂಟು; ದಯದೋರಲು ಅವಕಾಶವಿದೆ." ಎಂದು ಮಹಾರಾಜರು ಸಾವಂತನಿಗೆ ಹೇಳಿ:—"ನೀವು ಇವರನ್ನು ನಿಮ್ಮ ರಾಜಧಾನಿಯಲ್ಲಿ ಆಜೀವ ವಾಗಿ ಕಾರಾಗೃಹದಲ್ಲಿರಿಸಬೇಕು. ಯಾವ ವಿಧವಾದ ಕೆಲಸಗಳಿಗೂ ಇವರನ್ನು ಹಚ್ಚಕೂಡದು. ರಾಜಕಾರಣದಲ್ಲಿ ಪ್ರವೇಶಮಾಡಗೊಡಬಾರದು. ಇವರನ್ನು ರಾಜಕೀಯ ಸೆರೆಯಾಳುಗಳಂತೆ ನಡೆಯಿಸಬೇಕು. ನೀವು ಈ ಕಟ್ಟಳೆಗೆ ಒಪ್ಪಿದರೆ ಮಾತ್ರ ಜೀವದಾನ ಮಾಡಬಹುದು."

"ನಿಮ್ಮ ಆಜ್ಞೆಯಂತೆ ನಡೆಯಲು ನನ್ನ ಒಪ್ಪಿಗೆಯಿದೆ. ಅಮೃತರಾಯರು ಮಿತ್ರದ್ರೋಹ ಪಾತಕ ಮಾಡಿದ್ದರೂ ಅವರಿಂದ ಸ್ವರಾಜ್ಯಕ್ಕೆ ಪ್ರಯೋಜನವಾಗಿದೆ ಅವರು ಹೀಗೆ ಮಾಡದಿದ್ದರೆ ಸ್ವರಾಜ್ಯ ಸ್ಥಾಪನೆಯ ಉದ್ದೇಶ, ಸ್ವರಾಜ್ಯದ ಪ್ರಯೋಜನ ಮೊದಲಾದವುಗಳು ನನ್ನ ನಿದರ್ಶನಕ್ಕೆ ಬರುತ್ತಿದ್ದಿಲ್ಲ. ಒಂದು ಉದಾತ್ತವಾದ ಧ್ಯೇಯಸಾಧನೆಗಾಗಿ ನಿಮ್ಮ ಹೋರಾಟ ವಿರುವದೆಂಬ ಸಂಗತಿಯು ನಿಮ್ಮ ಪ್ರಾಮಾಣಿಕ ಭಾಷಣದಿಂದ ನನ್ನ ಮನವರಿಕೆಯಾಯಿತು. ನಾನು ಅಮೃತರಾಯರನ್ನು ರಾಜಕೀಯ ಸೆರೆಯಲ್ಲಿರಿಸಿ,

ಅವರ ಮನೆಯವರ ಯೋಗಕ್ಷೇಮ ನೋಡುತ್ತಿರುವೆನು; ಹಾಗು ನಿಮ್ಮ ಸ್ವರಾಜ್ಯ ಕಾರ್ಯಕ್ಕೂ ಸಹಕಾರಿಯಾಗಿರುವೆನು."

ಸಾವಂತನು ಹೀಗೆ ಹೇಳಿದ ಮೇಲೆ ಅಮೃತರಾಯನಿಗೆ ಪುನರ್ಜನ್ಮವಾದಂತಾಯಿತು. ಅವನು ವಿನಯದಿಂದ:-"ಮಹಾರಾಜರು ನನಗೆ ಪರ್ಯಾಯದಿಂದ ಪ್ರಾಣದಾನ ಮಾಡಿದ್ದರಿಂದ ನಾನು ಅವರನ್ನು ಆಮರಣವಾಗಿ ನೆನಿಸುತ್ತಿರುವೆನು. ಸಾವಂತರು ನನ್ನ ದುಷ್ಕೃತ್ಯದ ಬಗ್ಗೆ ಏತಿಗೊಳ್ಳದೆ, ನನ್ನ ಪ್ರಾಣದಾನಕ್ಕೆ ಅವಕಾಶ ಕಲ್ಪಿಸಿ ಕೊಟ್ಟದ್ದರಿಂದ ಅವರನ್ನು ಎಷ್ಟು ವಿಧದಿಂದ ಬಣ್ಣಿಸಿದರೂ ಸ್ವಲ್ಪವೇ ಇದೆ."

ಅನಂತರದಲ್ಲಿ ಮಹಾರಾಜರು ಸಭಿಕರನ್ನುದ್ದೇಶಿಸಿ:—"ಈಗ ನಡೆದಿರುವ ಸ್ವರಾಜ್ಯಸ್ಥಾಪನೆಯ ಕಾರ್ಯವು ಅತ್ಯಂತ ಮಹತ್ವದ್ದಿದೆ. ಪರಕೀಯರ ಆಳಿಕೆಯಿಂದ ಮಾತೃಭೂಮಿಯು ಜರ್ಜರಿತವಾಗಿದೆ. ಯಾವದೋ ದೇಶದಿಂದ ಬಂದು ನಮ್ಮ ಮೇಲೆ ಆಧಿಪತ್ಯ ನಡೆಯಿಸುವ ಜನರನ್ನು ಉಪೇಕ್ಷಿಸುತ್ತ ಹೋದರೆ, ನಾವು ಕೊನೆಯ ವರೆಗೂ ದಾಸ್ಯದಲ್ಲಿ ಬೀಳಬೇಕಾಗುವದು. ಇದೇ ರೀತಿ ಕೆಲ ಕಾಲ ಸಾಗಿದರೆ ನಾವು ನಮ್ಮ ಮಾತೃಭೂಮಿಗೆ ಹೊರತಾಗುವೆವು. ಹಿಂದುಸ್ತಾನವೆಂಬ ಹೆಸರು ಸಹ ಮರೆಯಾಗುವ ಪ್ರಸಂಗವು ದೇಶದ್ರೋಹಿಗಳ ದುಷ್ಕೃತ್ಯದಿಂದ ಉಂಟಾಗುವದು. ನಮ್ಮ ಬೃಹದ್ಭಾರತದ ಮೇರೆಯು ಎಲ್ಲಿಯವರೆಗಿತ್ತೆಂಬದು ಇಲ್ಲಿರುವ ಬಹು ಜನರಿಗೆ ಗೊತ್ತಿರಲಿಕ್ಕಿಲ್ಲ. ನಮ್ಮ ಬೃಹದ್ಭಾರತದೊಳಗಿನ ಕಾಂಭೋಜ ಗಾಂಧಾರ ದೇಶಗಳು ಈಗ ಬೇರೆಯಾಗಿ ಅಲ್ಲಿ ಹಿಂದುಗಳ ಅಸ್ತಿತ್ವವೇ ನಷ್ಟವಾಗಿದೆ. ಆ ದೇಶಗಳಲ್ಲಿ ನಮ್ಮ ಜನರಿಗೆ ನಾಗರಿಕತೆಯ ಅಧಿಕಾರಗಳು ಇರುವದಿಲ್ಲ. ನಾವು ಪರಕೀಯರಿಗೆ ಇದೇ ರೀತಿ ಆಶ್ರಯ ಕೊಡುತ್ತ ಹೋದರೆ, ಹಿಂದುಸ್ತಾನದಲ್ಲಿ ಇನ್ನೂ ಅನೇಕ ಶಕಲಗಳಾಗಬಹುದು. ಮೆಲ್ಲ ಮೆಲ್ಲನೆ ವಿಧರ್ಮೀಯ ಜನರ ಬೆಳವಣಿಗೆಯಾಗುತ್ತ ಹೋಗುವದರಿಂದ, ಆ ಪ್ರಾಂತಗಳು ವಿದೇಶೀಯರವಾಗಿ ಮಾರ್ಪಡಬಹುದು. ಹೀಗಾದರೆ ಅವು ಹಿಂದುಸ್ತಾನದಿಂದ ಸಿಡಿದು ಸ್ವತಂತ್ರವಾಗಿ ಬೃಹದ್ಭಾರತವು ಭಾಗವಾದಂತ ಲಘುಭಾರತವಾಗಿ ಕೆಲವು ಸ್ಥಾನದಮಟ್ಟಿಗೆ ಉಳಿಯಬಹುದು. ಇದೇ ರೀತಿ ಸಾಗಿದರೆ, ಕಾಲಾಂತರದ ಮೇಲೆ ನಮ್ಮ ದೇಶವೇ ನಮಗೆ ಎರವಾಗಬಹುದು. ಹಿಂದುಸ್ತಾನವು ಯವನಸ್ಥಾನವಾಗಬಹುದು. ನಾವು ಕೊನೆಯವರೆಗೂ ವಿದೇಶೀಯರ ದಾಸ್ಯದಲ್ಲಿ ಉಳಿಯಬಹುದು. ನಮ್ಮ ದೇಶದಲ್ಲಿಯೇ ನಮಗೆ ಯಾವ

ಸಾಂಗರಿಕತೆಯು ಅಧಿಕಾರಗಳೂ ದೊರೆಯುದಂತಾಗಬಹುದು. ದೇಶಹಿತ ವಿಘಾತಿಗಳ ಕೃತ್ಯದಿಂದ ಭಾವೀ ಪೀಳಿಗೆಯ ಮೇಲೆ ದೊಡ್ಡ ಗಂಡಾಂತರವು ಉಂಟಾಗಬಹುದು. ಆದ್ದರಿಂದ ಈ ಸಂಧಿಯಲ್ಲಿ ನಾವು ಅಜಾಗ್ರತರಾಗವೆ ಮಾತೃಭೂಮಿಯ ಸ್ವಾತಂತ್ರ್ಯಕ್ಕಾಗಿ ಆತ್ಮಬಲಿದಾನ ಮಾಡಬೇಕು. ನಮ್ಮ ಮಾತೃಭೂಮಿಯು ಸ್ವರಾಜ್ಯ ಸೋಪಾನಗಳನ್ನೇರುತ್ತ ನಡೆದಿದೆ. ಈ ಸಂಧಿಯಲ್ಲಿ ಹಿಂದುಗಳೆನಿಸಿಕೊಳ್ಳುವವರು-ಹಿಂದು ಭೂಮಿಯು ಜನ್ಮಭೂಮಿಯೆಂಬ ಅಭಿಮಾನವುಳ್ಳವರು- ಸ್ವಾರ್ಥತ್ಯಾಗ-ಆತ್ಮತ್ಯಾಗಗಳಿಂದ ಕಾರ್ಯ ಮಾಡಿ, ಮಾತೃಭೂಮಿಯು ಸ್ವಾತಂತ್ರ್ಯದ ಉಚ್ಚತಮ ಶಿಖರವನ್ನೇರುವಂತೆ ಮಾಡಬೇಕು. ಪಾರತಂತ್ರ್ಯದಿಂದ ಯಾವ ವಿಧದ ವಿಪತ್ತುಂಟಾಗುವದೆಂಬದೂ, ಸ್ವಾತಂತ್ರ್ಯದಿಂದ ಯಾವ ವಿಧದ ಸೌಖ್ಯವುಂಟಾಗುವದೆಂಬದೂ ನಿಮ್ಮೆಲ್ಲರಿಗೆ ಗೊತ್ತಿದ್ದ ವಿಷಯ. ಸ್ವರಾಜ್ಯದೊಳಗಿನ ಹಾಗು ಸ್ವರಾಜ್ಯದ ಹೊರಗಿನ ಪ್ರಜೆಗಳನ್ನು ನಿರೀಕ್ಷಿಸಿದರೆ ಈ ವಿಷಯವು ಚನ್ನಾಗಿ ಗೊತ್ತಾಗುವಂತಿದೆ. ಸ್ವರಾಜ್ಯದ ಹೊರಗೆ ನಡೆಯುವ ಧಾರ್ಮಿಕ ವಿಡಂಬನೆ, ಆರ್ಥಿಕ ವಿಡಂಬನೆ, ಔದ್ಯೋಗಿಕ ವಿಡಂಬನೆ ಮೊದಲಾದವುಗಳನ್ನು ನೋಡಿದರೆ ಮನಸ್ಸು ಉದ್ವೇಗಗೊಳ್ಳುತ್ತದೆ. ಅಲ್ಲಿಯ ಹಾಹಾಕಾರ ಧ್ವನಿಯಿಂದ ಎದೆಯು ಕರಗಿ ನೀರಾಗುತ್ತದೆ. ನಿಮಗೆ ಇವೆರಡರಲ್ಲಿ ಯಾವದು ಸರಿಯಾಗಿ ಕಾಣುವದೋ ಆ ಮಾರ್ಗವನ್ನನುಸರಿಸಬಹುದು. ನಾನು ಸ್ವರಾಜ್ಯದ ಧನಿಯಲ್ಲ; ಅದರ ಸೇವಕನಿರುವೆನು. ಆದುದರಿಂದ ಸ್ವರಾಜ್ಯದ ಸೇವೆ ಮಾಡುವದೇ ನನ್ನ ಜೀವನದ ಗುರಿ. ನಿಮ್ಮೆಲ್ಲರ ಪ್ರಾಮಾಣಿಕ ಸಹಕಾರದಿಂದ ಸ್ವರಾಜ್ಯಸ್ಥಾಪನೆಯ ಉದ್ದೇಶವು ಕೊನೆಗಾಣಬೇಕಾಗಿದೆ. ಏಕಛತ್ರಪತಿಯಾಗಿ ಸಿಂಹಾಸನದ ಮೇಲೆ ಮೆರೆಯಬೇಕೆಂಬ ಉದ್ದೇಶದಿಂದ ನಾನು ಈ ಕಾರ್ಯವನ್ನು ಪ್ರಾರಂಭಿಸಿಲ್ಲ; ನಾನು ಸ್ವರಾಜ್ಯವನ್ನು ಆಳುವವನೆಂಬ ಹೆಮ್ಮೆ ಹಿಡಿದಿಲ್ಲ; ಸ್ವರಾಜ್ಯದ ಆಳೆಂಬ ಮಾತು ಮಾತ್ರ ನನಗೆ ಚನ್ನಾಗಿ ಗೊತ್ತಿದೆ. ನಿಮ್ಮೆಲ್ಲರ ಏಕನಿಷ್ಠ ಹೃದಯಗಳು ನೈತಿಕ ಬೆಂಬಲವನ್ನು ಕೊಟ್ಟರೆ ಹಿಂದುಪದಪಾತಶಾಹಿಯ ವಿಜಯಧ್ವಜವು ಆಸೇತು-ಹಿಮಾಚಲದ ವರೆಗೆ ಉಡ್ಡಾಣ ಮಾಡಬಹುದು. ನೈತಿಕ ಬೆಂಬಲವುಂಟಾದ ಕೂಡಲೆ ಉಳಿದ ಬಲಗಳೂ ತಾನಾಗಿ ಉಂಟಾಗುವವು. ಸ್ವರಾಜ್ಯಸೇವಕರಾದ ಜನರಿಗೆ ನಾನಾಡುವ ಮಾತುಗಳ ಮರ್ಮವು ಎಷ್ಟಾದರೂ ಗೊತ್ತಾಗಿದೆ; ಆದರೆ ಸ್ವರಾಜ್ಯದ ಹೊರಗಿನ ಸಾವಂತರಿಗೆ ಹಾಗು ಅವರ ರಾಜಪರಿವಾರದವರಿಗೆ ಸ್ವರಾ

ಜ್ಯದ ಉದಾತ್ತವಾದ ಧ್ಯೇಯವು ಗೊತ್ತಾಗಲೆಂಬ ಉದ್ದೇಶದಿಂದಲೇ ನಾನು ಇಂದು ನಾಲ್ಕು ಮಾತು ಹೇಳಬೇಕಾಯಿತು."

ಮಹಾರಾಜರು ಹೀಗೆ ಹೇಳಿ ತಮ್ಮ ಸ್ಥಾನದಲ್ಲಿ ಕುಳಿತರು. ಆಗ ಸಾವಂತನು ಎದ್ದು ನಮಸ್ಕಾರ ಮಾಡಿ:—"ಮಹಾರಾಜರೆ, ತಮ್ಮ ಭಾಷಣದಿಂದ ನಿಜವಾದ ಸಂಗತಿ ತಿಳಿಯಿತು. ಇಷ್ಟು ದಿನ ನಮ್ಮ ಮನಸ್ಸಿನಲ್ಲಿದ್ದ ವಿಕಲ್ಪಗಳು ಬಯಲಾದವು. ಇನ್ನು ನಾನೂ ನನ್ನ ರಾಜಪರಿವಾರದವರೂ ಸಾಧ್ಯವಾದಮಟ್ಟಿಗೆ ಸ್ವರಾಜ್ಯಕಾರ್ಯದಲ್ಲಿ ಭಾಗವಹಿಸಲು ಪ್ರಯತ್ನಿಸುವೆವು."

ಸಾವಂತನು ಹೀಗೆ ಹೇಳಿದ ಮೇಲೆ ಸಭೆಯು ವಿಸರ್ಜನೆಯಾಯಿತು. ಅಂದು ವಿಜಯದ ಸ್ಮಾರಕಕ್ಕಾಗಿಯೂ ಸಾವಂತನ ಆತಿಥ್ಯಕ್ಕಾಗಿಯೂ ಸಡಗರದ ಸಮಾರಂಭಗಳು ನಡೆದವು. ಮಾರನೆಯ ದಿನ ಮಹಾರಾಜರು ಸಾವಂತನಿಗೆ ನಿರೋಪ ಕೊಟ್ಟರು. ಜಯಗಡದ ಮೇಲೆ ಒಬ್ಬ ಅಧಿಕಾರಿಯನ್ನು ನಿಯಮಿಸಲಾಯಿತು. ಆ ಗಡದ ಮೇಲೆ ಲಕ್ಷ್ಯವಿಡಲು ಮಾನಾಜಿರಾಯನಿಗೆ ಸೂಚನೆ ಕೊಡಲಾಯಿತು. ಮಾರನೆಯ ದಿನ ಮಹಾರಾಜರೂ ಮಾನಾಜಿರಾಯರೂ ಸುಂದರಗಡಕ್ಕೆ ಹೊರಟರು. ಬಹು ಪ್ರಯಾಸದಿಂದ ರಾಜಕಾರಣ ಸಾಧಿಸಿದ ಹಂಬೀರರಾಯನ ಭೆಟ್ಟಿಯಾಗಬೇಕೆಂಬ ಕುತೂಹಲವು ಮಹಾರಾಜರಲ್ಲುಂಟಾಗಿತ್ತು. ಆದ್ದರಿಂದಲೇ ಅವರು ತವಕದಿಂದ ಸುಂದರಗಡದ ಕಡೆಗೆ ತೆರಳಿದರು.

---

## ೧೫ ವಿರೋಚಿತ ಔದಾರ್ಯ.

ನೌಕೆಯಲ್ಲಿ ಗಾಯಹೊಂದಿದ ಹಂಬೀರರಾಯನು ಸುಂದರಗಡದಲ್ಲಿ ಉಪಚಾರ ಹೊಂದತೊಡಗಿದ್ದನು. ಅವನಿಗಾದ ಗಾಯವು ಪ್ರಾಣಾಂತಿಕವಾಗಿರದಿದ್ದರೂ ಬೇಗನೆ ಗುಣವಾಗುವಂತಹದಿರಲಿಲ್ಲ. ಆ ಗಾಯದ ಸಲುವಾಗಿ ಅವನನ್ನು ಉಪಚರಿಸತೊಡಗಿದ್ದರು. ನಾಲ್ಕು ದಿನ ಅವನಿಗೆ ಎಚ್ಚರವೇ ಇರಲಿಲ್ಲ. ಗಾಯವು ತುಂಬುತ್ತ ಬಂದ ಹಾಗೆ ಜ್ವರ ಕಡಿಮೆಯಾದವು. ಮೈಮೇಲೆ ಎಚ್ಚರವೂ ಹುಟ್ಟಿತು. ಆಗ ಅವನಿಗೆ ತಾನು ಎಲ್ಲಿರುವೆನು; ಮಹಾರಾಜ ಕಾರ್ಯಕ್ರಮವು ಎಲ್ಲಿಗೆ ಬಂದಿದೆ? ಮೊದಲಾದವುಗಳು ತಿಳಿಯತೊಡಗಿದ ದೊಡ್ಡ ಗಾಯವಾದ ಮೂಲಕ ಅವನು ಬಹಳೇ ಅಶಕ್ತನಾಗಿದ್ದನು. ಇ

ದುರ್ಬಲತನದ ಮೂಲಕವಾಗಿ ಮಹಾರಾಜರ ಸ್ವರಾಜ್ಯ ಕಾರ್ಯದಲ್ಲಿ ಭಾಗ ವಹಿಸದೆ ಬಿದ್ದುಕೊಳ್ಳಬೇಕಾಯಿತಲ್ಲ! ಎಂದು ಅವನು ಮಿಡುಕತೊಡಗಿದ್ದನು. ಮುಂದೆ ಒಂದೆರಡು ದಿನಗಳಲ್ಲಿ ಸಾವಂತನ ಪರಾಜಯದ ಸುದ್ದಿಯೂ ತಲು ಪಿತು. ಮೂರನೆಯ ದಿನವೆ ಮಾನಾಜಿರಾಯನೂ ಮಹಾರಾಜರೂ ಸುಂದರ ಗಡಕ್ಕೆ ಬರುವರೆಂಬ ಸಂಗತಿಯೂ ಗೊತ್ತಾಯಿತು. ಜಯಗಡದ ವಿಜಯದ ಪಾಲು ತನಗೆ ದೊರಲಿಲ್ಲೆಂದು ಅವನು ಖಿನ್ನನಾದನು. ಆಗ ಅವನು ಶಂಭೂ ವನ್ನು ಕರೆದು:—"ಶಂಭೂ, ಮಹಾರಾಜರೂ ಮಾನಾಜಿರಾಯರೂ ಇಲ್ಲಿಗೆ ನಾಳೆಗೇ ಬರುವರೇನು?" ಎಂದು ವಿಚಾರಿಸಿದನು.

ಶಂಭುವಿಗೆ ಈ ಸಂಗತಿಯು ಚನ್ನಾಗಿ ಗೊತ್ತಾಗಿರಲಿಲ್ಲ. ಆಗ ಅವನು "ಧನಿಯರೆ, ಮಾನಾಜಿರಾಯರು ಬರುವರೆಂಬ ವರ್ತಮಾನವಿದೆ; ಆದರೆ ಮಹಾರಾಜರ ಆಗಮನವಾಗುವದೆಂಬ ಸುದ್ದಿಯನ್ನುಮಾತ್ರ ನಾನು ಕೇಳಿಲ್ಲ."

"ದೌಲತರಾಯರ ವಿಷಯವೇನು? ಅವರು ಈಗ ಎಲ್ಲಿ ಇದ್ದಾರೆ? ಕಾಗದ-ಪತ್ರಗಳೆಲ್ಲ ಮಹಾರಾಜರ ಸ್ವಾಧೀನವಾದವೋ ಹೇಗೆ? ಅವುಗಳನ್ನು ನೋಡಿ ಅವರು ಏನಂದರು?" ಎಂದು ಹಂಬೀರರಾಯನು ಕುತೂಹಲ ಪೂರ್ವಕ ವಾಗಿ ಕೇಳಿದನು.

"ಸರದಾರಸಾಹೇಬರೆ, ದೌಲತರಾಯರು ಈಗ ರಾಜಕೀಯ ಸೆರೆಮನೆ ಯಲ್ಲಿದ್ದಾರೆ. ಜಯಗಡದ ಪ್ರಕರಣವು ತೀರಿದ ಮೇಲೆ ಅವರ ನ್ಯಾಯ ವಿಚಾ ರಣೆಯಾಗತಕ್ಕದ್ದಿದೆ. ಅವರ ತೀರ್ಮಾನದ ಭಾರವನ್ನು ಮಹಾರಾಜರು ತಮ್ಮ ಮೇಲೆಯೆ ವಹಿಸುವಂತೆ ತೋರುವದು."

"ಮಹಾರಾಜರು ನನ್ನ ಮೇಲೆಯೆ ಆ ತೀರ್ಮಾನದ ಭಾರಹಾಕುವರೆ?" ಉತ್ಕಂಠೆಯಿಂದ ಹಂಬೀರರಾಯನು ವಿಚಾರಿಸಿದನು.

"ಹೌದು. ದೌಲತರಾಯರನ್ನು ಪರಾಭವಗೊಳಿಸಿ ದೊಡ್ಡ ರಾಜಕಾರಣ ವನ್ನು ನೀವು ಸಾಧಿಸಿರುವದರಿಂದ ಆ ಭಾರವು ನಿಮ್ಮ ಮೇಲೆಯೇ ಬೀಳುವ ದಿದೆ ಆ ಕಾಗದ-ಪತ್ರಗಳು ಸಾವಂತನ ಕೈ ಸೇರಿದ್ದರೆ ಈಗಿನ ವಿಜಯಾನಂ ದವು ಮಹಾರಾಜರಿಗೆ ಲಭಿಸುತ್ತಿದ್ದಿಲ್ಲ. ಜಯಗಡದ ವಿಜಯದಲ್ಲಿಯ ಬಹು ಭಾಗವು ನಿಮ್ಮ ಪಾಲಿನದೇ ಎಂದು ಮಹಾರಾಜರು ಅಂದಿರುವರಂತೆ. ಬಹಳ ಮಾಡಿ ಇಲ್ಲಿಗೆ ಮಹಾರಾಜರೂ ಬರಬಹುದಾಗಿದೆ. ದೌಲತರಾಯನ ವಿಚಾ ರಣೆಯ ಕಾರ್ಯವೊಂದು; ನಿಮ್ಮ ಸಾಹಸದ ಪ್ರತಿಫಲ ಕೊಡುವ ಕೆಲಸ

ವೊಂದು. ಈ ಮುಖ್ಯ ಕೆಲಸಗಳನ್ನು ಬಿಟ್ಟು ಮಹಾರಾಜರು ಬೇರೆ ಕಡೆಗೆ ಹೋಗುವದಿಲ್ಲವೆಂದು ನನ್ನ ಅಲ್ಪಮತಿಗೆ ಹೊಳೆಯುವದು."

"ನಾನು ಬೇಗನೆ ಗುಣಹೊಂದಿದ್ದರೆ ಜಯಗಡದ ಸಂಗ್ರಾಮದಲ್ಲಿ ಭಾಗ ವಹಿಸಲಿಕ್ಕೆ ಬರುತ್ತಿತ್ತು; ಆದರೆ ನನ್ನ ಅಭ್ಯುದಯವು ಬೇಗನೆ ಆಗಬೇಕೆಂದು ಈಶ ಸಂಕಲ್ಪವಿರಲಿಕ್ಕಿಲ್ಲ." ಎಂದು ನುಡಿದು ಹಂಬೀರರಾಯನು ನಿಟ್ಟುಸಿರು ಬಿಟ್ಟನು.

"ನೀವು ಪಡೆದ ವಿಜಯವು ಜಯಗಡದ ವಿಜಯವೇ. ಮಾನಾಜಿ ರಾಯರೇ ಮೊದಲಾದ ಸರದಾರರು ಹೀಗೆಯೆ ನುಡಿದರು. ಇದಕ್ಕಾಗಿ ನೀವು ಚಿಂತಿಸಬೇಡಿರಿ. ನಿಮಗೆ ಶಕ್ತಿಯೊಂದು ಬರಲಿ. ಮಹಾರಾಜರ ಸ್ವರಾಜ ಸೇವಾಸಂಘದಲ್ಲಿ ಕೆಲಸಕ್ಕೇನೂ ಕಡಿಮೆಯಿಲ್ಲ. ಇಂಥ ಎಷ್ಟೋ ಸಂಧಿಗಳು ದಿನದಿನವೂ ಇದ್ದೇ ಇರುತ್ತವೆ."

ಶಂಭುವು ಹೀಗೆ ನುಡಿಯುವಷ್ಟರಲ್ಲಿ ಮಾನಾಜಿರಾಯನು ಅಲ್ಲಿಗೆ ಬಂದನು ಅವನು ಬಂದ ಕೂಡಲೆ ಹಂಬೀರರಾಯನ ಬಳಿಗೆ ಹೋಗಿ ನಾಡಿ ಹಿಡಿದು ನೋಡಿ:-"ಹಂಬೀರರಾಯಾ, ಈಗ ಪ್ರಕೃತಿ ಹೇಗಿದೆ? ಸ್ವಲ್ಪಮಟ್ಟಿಗೆ ಶಕ್ತಿ ಬಂದಿರುವದೆ?"

"ಕಾಕಾಸಾಹೇಬ, ಈಗ ಸುಖವಾಗಿದ್ದೇನೆ. ಜಯಗಡದ ಸಂಗ್ರಾಮದಲ್ಲಿ ಭಾಗವಹಿಸಲು ಸಂಧಿದೊರೆಯಲಿಲ್ಲ! ಎಂದು ಕಳವಳಪಡುತ್ತಿದ್ದೇನೆ."

"ಛೀ ಹುಚ್ಚಾ! ಸಂಗ್ರಾಮಕ್ಕೆ ಅಷ್ಟೇಕೆ ಆತುರಪಡತೊಡಗಿದೆ? ನಿನಗೆ ಶಕ್ತಿಬರಲಿ. ಸಂಗ್ರಾಮಕ್ಕೇನೂ ಕಡಿಮೆಯಿಲ್ಲ; ಅಲ್ಲದೆ ಜಯಗಡದ ವಿಜಯದ ದೊಡ್ಡ ಭಾಗವು ನಿನಗೇ ಸಲ್ಲತಕ್ಕದ್ದಿದೆ. ನಿನ್ನ ಸಾಹಸವನ್ನು ಕೇಳಿ ಮಹಾರಾಜರು ಸಂತುಷ್ಟರಾದರು. ಅವರು ಹಿಂದೆಯೇ ಬರುತ್ತಿದ್ದಾರೆ. ಇಷ್ಟರಲ್ಲಿಯೇ ಇಲ್ಲಿಗೆ ಬರಬಹುದಾಗಿದೆ."

ಮಾನಾಜಿರಾಯನು ಹೀಗೆ ನುಡಿಯುತ್ತಿರುವಷ್ಟರಲ್ಲಿ ಮಹಾರಾಜರು ಅಲ್ಲಿಗೆ ಬಂದರು. ಕೂಡಲೆ ಹಂಬಿರರಾಯನು ಏಳಹೋದನು. ಅವನನ್ನು ನೋಡಿ ಮಹಾರಾಜರು:-"ಹಂಬೀರರಾಯಾ, ಏಳಬೇಡ. ನೀನು ಇನ್ನೂ ಅಶಕ್ತನಿರುವೆ. ಶ್ರಮತೆಗೆದುಕೊಳ್ಳಬೇಡ." ಎಂದು ನುಡಿದು ನಗುತ್ತ:—"ಜಯಗಡದ ವಿಜಯದಲ್ಲಿ ನೀನು ಪಾಲುಗಾರನಾಗುವೆಯೆಂದು ನನ್ನ ನಂಬಿಗೆಯಿತ್ತು. ಸಂಗ್ರಾಮಕ್ಕೆ ಬೆದರಿ ಒಂದು ನಿಮಿತ್ತವನ್ನು ಮಾಡಿ ಮಲಗಿಬಿಟ್ಟೆಯಾ?"

"ಮಹಾರಾಜರೆ!" ಹಂಬೀರರಾಯನು ಬಿನ್ನವಾಣಿಯಿಂದ:—"ನನ್ನ ದುರ್ದೈವವು ನನ್ನನ್ನು ನಿರುಪಾಯನನ್ನಾಗಿಮಾಡಿದೆ. ಸಾವಂತವಾಡಿಯ ದೌಲತರಾಯನು ನನ್ನ ಪಾಲಿಗೆ ಶನಿಯಂತೆ ಗಂಟುಬಿದ್ದು ಈ ಅವಸ್ಥೆಗೀಡು ಮಾಡಿದನು. ಜಯಗಡದ ಸಂಗ್ರಾಮದಲ್ಲಿ ಎಷ್ಟಾದರೂ ಪ್ರತಾಪ ಪ್ರದರ್ಶನ ಮಾಡಿ ಸ್ವರಾಜ್ಯ ಕಾರ್ಯಸಾಧಿಸಬೇಕೆಂದಿದ್ದ ನನ್ನ ಇಚ್ಛೆಯು ನಿರರ್ಥಕ ವಾಯಿತು. ಆದರೂ ಮುಂದಿನ ಸಂಗ್ರಾಮಗಳಲ್ಲಿ ಭಾಗವಹಿಸಿ ತಮ್ಮ ಕೃಪೆ ಗೂ ಗಾಗಬೇಕೆಂಬ ಕುತೂಹಲವಿದೆ."

"ಜಯಗಡದ ಸಂಗ್ರಾಮದಲ್ಲಿ ತನ್ನ ಶೂರತನ ತೋರಿಸಬೇಕೆಂದು ಹಂಬೀರರಾಯನಲ್ಲಿ ದೊಡ್ಡ ಆಶೆಯಿತ್ತು." ಮಾನಾಜಿರಾಯನು ಮಹಾರಾಜರಿಗೆ ಹೇಳಿದನು.

"ಮಾನಾಜಿರಾಯರೆ!" ಮಹಾರಾಜರು ಮುಗುಳುನಗೆ ನಗುತ್ತ:—"ಈ ಸಂಗ್ರಾಮದಲ್ಲಿ ಉಂಟಾದ ವಿಜಯದಲ್ಲಿ ದೊಡ್ಡ ಪಾಲು ಯಾರಿಗೆ ದೊರೆಯ ಬೇಕಾಗಿದೆ? ಹೇಳಿರಿ."

"ಕರ್ತುಮ ಕರ್ತುಮನ್ಯಥಾ ಕರ್ತುಮ ಶಕ್ತಿಯುಳ್ಳ ತಾವೇ ಸ್ವರಾಜ್ಯ ಕಾರ್ಯದಲ್ಲಿ ಪ್ರತಿಯೊಂದು ವಿಷಯದ ಪೂರ್ಣ ಪಾಲುಗಾರರಿರುವಿರಿ."

"ಸುಳ್ಳು. ನಾನು ನಿಮಿತ್ತಮಾತ್ರನು. ನಿಮ್ಮಂಥ ಸ್ವರಾಜ್ಯನಿಷ್ಠರ ಸಹಾಯವಿರದಿದ್ದರೆ ನನ್ನಿಂದ ಏನೊಂದೂ ಆಗುತ್ತಿರಲಿಲ್ಲ. ನಿಮ್ಮಂಥ ಏಕನಿಷ್ಠ ರಾಷ್ಟ್ರಭಕ್ತರ ಆತ್ಮಬಲಿದಾನದಿಂದ ಸ್ವ ರಾ ಜ್ಯ ಮಂದಿರವು ಕಟ್ಟಲ್ಪಟ್ಟಿದೆ. ಆ ಮಂದಿರಕ್ಕೆ ನಿಮ್ಮಂಥವರ ಕಾರ್ಯಗಳೇ ಸೋಪಾನಗಳಂತಾಗಿವೆ. ಜನತೆಯನ್ನು ಆ ಸೋಪಾನದ ಮಾರ್ಗವಾಗಿ ಸ್ವರಾಜ್ಯ ಮಂದಿರಕ್ಕೆ ಕರೆದೊಯ್ದು ಬಿಡಲು ನಿಮ್ಮ ಸಾಹಸಗಳೇ ಕಾರಣವಾಗಿವೆ. ಮಾನಾಜಿರಾಯರೆ, ಈ ಜಯಗಡದ ಯುದ್ಧದಲ್ಲಿ ನಿಮ್ಮಂಥವರ ನೆರವಿಲ್ಲವಿದ್ದರೆ ನಾನೊಬ್ಬನೇ ಏನು ಮಾಡುತ್ತಿದ್ದೆನು? ನಿಮ್ಮೆಲ್ಲರಿಗೆ ನಾನೊಬ್ಬನು ಮಾರ್ಗದರ್ಶಕನಿರುವೆನೆಂಬದು ನಿಜ. ಇಷ್ಟರಿಂದ ನನ್ನಿಂದಲೇ ವಿಜಯ ದೊರೆಯಿತು; ನನ್ನಿಂದಲೇ ಸ್ವರಾಜ್ಯಸಂಸ್ಥಾಪನೆಯಾಯಿತು ಮೊದಲಾದ ವಿಚಾರಗಳನ್ನು ತಲೆಯಲ್ಲಿ ತುಂಬಿಕೊಳ್ಳುವದು ಅನುಚಿತವು. ಜಯಗಡದ ಸಂಗ್ರಾಮದಲ್ಲಿ ವಿಜಯವು ದೊರೆಯಲಿಕ್ಕೆ ಒಂದು ವ್ಯಕ್ತಿಯಿಂದ ಒಳಿತಾಗಿ ನೆರವಾಗಿದೆ. ಆ ವ್ಯಕ್ತಿಯು ಯಾರು?"

"ಮಹಾರಾಜರೆ, ಅಷ್ಟು ನನಗೆ ತಿಳಿಯದು. ಸ್ವರಾಜ್ಯನಿಷ್ಠರು ತಮ್ಮ

ತಮ್ಮ ಯೋಗ್ಯತೆಗನುಗುಣವಾಗಿ ಎಲ್ಲರೂ ಕೆಲಸಮಾಡಿದ್ದಾರೆಂದು ನನ್ನ ತಿಳುವಳಿಕೆ."

"ಜಯಗಡದ ವಿಜಯವು ದೊರೆಯಲಿಕ್ಕೆ ಹಾಗು ಸಾವಂತನು ನಮ್ಮ ಆಧೀನವಾಗಲಿಕ್ಕೆ ಈ ಹಂಬೀರರಾಯನೇ ಕಾರಣನು." ಎಂದು ಮಹಾರಾಜರು ಮಾನಾಜಿರಾಯನಿಗೆ ಹೇಳಿ, ಹಂಬೀರರಾಯನ ಮುಖ ನೋಡಿದರು.

"ಮಹಾರಾಜರೆ!" ಹಂಬೀರರಾಯನು ಕ್ಲೇಶದಿಂದ:—"ತಾವು ಉಪಹಾಸ ಮಾಡುವದರಿಂದ ನನಗೆ ನಾಚಿಕೆಯುಂಟಾಗುವದು. ಹಾಸಿಗೆ ಹಿಡಿದು ನರಳುತ್ತ ಬಿದ್ದಂಥ ಕರ್ತವ್ಯಮೂಢನು ಜಯಗಡದ ವಿಜಯಲಾಭ ಮಾಡಿ ಕೊಟ್ಟನೆಂದು ಹೇಳುವದರಿಂದ ನನಗೆ ನಾಚಿಕೆಯಾಗದೆ ಹೇಗೆ ಇರುವದು?"

"ನಾಚಿಕೆ ಪಡುವ ಮಾತಲ್ಲ; ನಿಜವಾದ ಮಾತು. ಹಂಬೀರರಾಯಾ, ನಿನಗೆ ಉಪಹಾಸ ಮಾಡುವದಕ್ಕಾಗಿ ನಾನು ಮಾತಾಡುವೆನೆಂದು ನಿನ್ನ ಗ್ರಹಿಕೆಯಾದರೆ ಅದು ನಿನ್ನ ಶುದ್ಧ ತಪ್ಪು. ನಿನ್ನಿಂದಲೇ ನಮಗೆ ವಿಜಯ ಲಾಭವಾಯಿತು. ನೀನಿಲ್ಲವಿದ್ದರೆ ನಿಜವಾಗಿ ನಾವು ಸಾವಂತನನ್ನು ತಲೆಬಾಗಪಚ್ಚುತ್ತಿದ್ದಿಲ್ಲ. ನೀನು ಮಾಡಿದ ಸಾಹಸವು ಅದ್ಭುತವಿರುವದು. ನಿನ್ನ ಕೆಲಸವನ್ನು ಪ್ರತ್ಯಕ್ಷ ಮಾನಾಜಿರಾಯರಾದರೂ ನೆರವೇರಿಸುತ್ತಿದ್ದರೋ ಇಲ್ಲವೋ ಸಂಶಯವಿದೆ. ಅವರು ಶೂರರಿರುವರು; ಸಾಹಸಿಗಳಿರುವರು; ಆದರೆ ಸಮುದ್ರ ಯುದ್ಧ ಮಾಡುವದು ಅವರಿಗೆ ಸಾಧಿಸುತ್ತಿತ್ತೆಂದು ಹೇಳಲಾರೆನು. ನೀನು ದ್ವಂದ್ವ ಮಾಡಿ ದೌಲತರಾಯನನ್ನು ಪರಾಭವಗೊಳಿಸಿದ ಸಂಗತಿಯು ಸಣ್ಣದಲ್ಲ. ಅವನು ನಿನ್ನ ಕೈಯಿಂದ ಪಾರಾಗಿದ್ದರೆ, ನಮ್ಮ ಗುಪ್ತ ಸಂಗತಿಗಳೆಲ್ಲ ಪ್ರಕಟವಾಗಿ ಸಾವಂತನು ಜಯಗಡಕ್ಕೆ ಬರುತ್ತಿರಲಿಲ್ಲ; ನಮಗೆ ಜಯದೊರೆಯುವದು ಕಠಿಣವಾಗುತ್ತಿತ್ತು. ಆದ್ದರಿಂದಲೇ ಜಯಗಡ ಸಂಗ್ರಾಮದ ವಿಜಯದ ಶ್ರೇಯಸ್ಸಿನಲ್ಲಿಯ ಬಹು ದೊಡ್ಡ ಭಾಗವು ನಿನ್ನ ಪಾಲಿನದು. ನೀನು ನಿನ್ನ ಕಾರ್ಯ ನೆರವೇರಿಸಿಯೆ ಹಾಸುಗೆಯನ್ನು ಹಿಡಿದೆ."

"ಮಹಾರಾಜರ ಮಾತುಗಳು ಅಕ್ಷರಶಃ ನಿಜವಿರುವವು. ಜಯಗಡದ ವಿಜಯದಲ್ಲಿ ಈ ಹಂಬೀರರಾಯನಿಂದ ದೊಡ್ಡ ಕೆಲಸವಾಗಿದೆ. ದೌಲತರಾಯನು ಇವನ ಕೈಯೊಳಗಿಂದ ಪಾರಾಗಿ ಹೋಗಿದ್ದರೆ ಅನರ್ಥವಾಗುತ್ತಿತ್ತು." ಎಂದು ಮಾನಾಜಿರಾಯನು ಹೇಳಿದನು.

"ನಾನು ಮಾಡಿದಂಥ ಸಣ್ಣ ಕೆಲಸವನ್ನು ಸ್ವರಾಜ್ಯ ಸೇನೆಯೊಳಗಿನ

ಸಾಮಾನ್ಯ ಸೈನಿಕನು ಸಹ ಮಾಡುತ್ತಿದ್ದನು." ಎಂದು ಹಂಬೀರರಾಯನು ನುಡಿದು —"ಆ ಕೆಲಸ ಮಾಡಿದ್ದಕ್ಕಾಗಿ ನಾನು ದೊಡ್ಡ ವಿಜಯ ಸಂಪಾದಿಸಿದೆ ನೆಂದು ಹೆಮ್ಮೆಪಟ್ಟರೆ, ನಾನೊಬ್ಬನು ಹುಚ್ಚರಲ್ಲಿ ಗಣಿಸಲ್ಪಡಬಹುದು."

"ಛೀ! ಹಾಗೆಂದಿಗೂ ಆಗದು. ಹೀಗೆನ್ನುವದು ನಿನ್ನ ಶೀಲವೇ ಸರಿ. ಆದರೂ ನಿನ್ನ ಕೆಲಸವೆಂಥವೆಂಬವರ ಎಣಿಕೆ ನನಗಿದೆ." ಎಂದು ಮಹಾರಾಜರು ನುಡಿದು:—"ಮಾನಾಜಿರಾಯರೆ, ಹಂಬೀರರಾಯನಿಗೆ ರಣಕೌಶಲ್ಯ ತೋರಿ ಸುವ ಉತ್ಕಂಠತೆ ಬಹಳವಾಗಿದೆ. ಮುಂದಿನ ದಂಡಯಾತ್ರೆಯಲ್ಲಿ ಇವನಿಗೆ ಚನ್ನಾಗಿ ಅವಕಾಶ ದೊರೆಯುವಂತೆ ಮಾಡತಕ್ಕದ್ದು."

"ಮಹಾರಾಜರ ಆಜ್ಞೆಯಂತೆ ವರ್ತಿಸುವೆನು."

ಮಾನಾಜಿರಾಯನು ಹೀಗೆ ಹೇಳಿದ ಮೇಲೆ ಮಹಾರಾಜರು ಅವನನ್ನು ಕುರಿತು:—"ದೌಲತರಾಯನು ಸದ್ಯಕ್ಕೆ ರಾಜಕೀಯ ಸೆರೆಯಲ್ಲಿರುವನಲ್ಲವೆ?"

"ಹೌದು. ತಮ್ಮ ಆಜ್ಞೆಯು ಬರುವವರೆಗೆ ರಾಜಕೀಯ ಸೆರೆಯಲ್ಲಿರಿಸ ಬೇಕೆಂದು ಸೆರೆಮನೆಯ ಅಧಿಕಾರಿಗೆ ತಿಳಿಸಿದ್ದೇನೆ. ಮುಂದೆ ಹೇಗೆ ಆಜ್ಞೆಯಾ ಗುವದೋ, ಹಾಗೆ ವ್ಯವಸ್ಥೆ ಮಾಡುವೆನು."

"ದೌಲತರಾಯನು ಎಚ್ಚರಗೇಡಿತನದಿಂದ ನಡೆದು ಕಾರಸ್ಥಾನ ವ್ಯರ್ಥ ಮಾಡಿಕೊಂಡನೆಂದೂ, ಅವನ ವ್ಯವಸ್ಥೆಯನ್ನು ಬೇಕಾದ ಹಾಗೆ ಮಾಡತಕ್ಕ ದ್ದೆಂದೂ ಸಾವಂತನು ತಿಳಿಸಿದ್ದಾನೆ."

"ಅವನನ್ನು ಬಿಡಿಸಬೇಕೆಂಬ ಯೋಚನೆಯನ್ನು ಸಾವಂತನು ಮಾಡ ದಿದ್ದುದು ತೀರ ಅನುಚಿತವು ನಿಜವಾಗಿ ಹೇಳಬೇಕಾದರೆ, ಅವನು ತನ್ನ ಕರ್ತವ್ಯ ಮಾಡುವದರಲ್ಲಿ ಸ್ವಲ್ಪವೂ ತಪ್ಪಿಲ್ಲ. ಅವನು ಪ್ರಾಣಾಂತಿಕ ಸಾಹಸ ಮಾಡಿದ್ದಾನೆ. ಹೀಗಿದ್ದು ಅವನ ಹಿತಚಿಂತನೆ ಮಾಡದೆ ಇದ್ದುದು ಸಾವಂತ ನಿಗೆ ತೀರ ಲಾಂಛನವು. ಯಾವ ಸ್ವಾಮಿಯು ಸೇವಕನ ಕರ್ತವ್ಯದ ಬೆಲೆ ತಿಳಿಯುವದಿಲ್ಲವೋ ಅಂಥವನ ಸೇವೆ ಮಾಡುವದಕ್ಕಿಂತ ಅಡವೀ ಸೇರುವದು ಲೇಸು. ಕೈಕೊಂಡ ಕಾರ್ಯದಲ್ಲಿ ಯಶಸ್ಸು ದೊರೆಯಲಿಲ್ಲೆಂಬ ಖತಿಯಿಂದ ಅವ ನನ್ನು ತಪ್ಪುಗಾರನನ್ನಾಗ ಮಾಡುವದು ದೊಡ್ಡ ಅಪರಾಧವು. ಸ್ವರಾಜ್ಯದ ಕಾರ್ಯಭಾರದಲ್ಲಿ ಹೀಗೆಂದಿಗೂ ಘಟನೆಯಾಗಲಾರದು. ಸ್ವರಾಜ್ಯಶಾಹಿಯೇ ಧರ್ಮದ ರಾಜ್ಯವು; ಇತರ ಎಲ್ಲ ಶಾಹಿಗಳೂ ಅಧರ್ಮಮಯವಾಗಿವೆ. ಇಂಥ ಅಧರ್ಮದ ಹಾಗು ಸ್ವಾರ್ಥಮಯವಾದ ರಾಜ್ಯಗಳನ್ನು ಉಧ್ವಸ್ತಗೊಳಿಸಿ,

ಸ್ವರಾಜ್ಯಸಿಂಹಾಸನ ಸ್ಥಾಪಿಸುವ ಗುರಿಯು ಈಡೇರುವವಕ್ಕೆ ಇಂಥ ಘಟನೆಗಳು ಉದಾಹರಣವಾಗಿರಬೇಕೆಂದು ತಾವು ಅನ್ನುತ್ತಿರುವವರಿಂದ ಸಮಾಧಾನ ತಾಳಬೇಕಾಗಿವೆ. ಮಹಾರಾಜರೆ, ದೌಲತರಾಯನ ಬಗ್ಗೆ ಹೇಗೆ ವ್ಯವಸ್ಥೆಮಾಡಬೇಕೆಂಬದನ್ನು ತಿಳಿಸಿರಿ."

"ಹಂಬೀರರಾಯನು ದೌಲತರಾಯನನ್ನು ಪರಾಭವಗೊಳಿಸಿರುವನು. ಅವನ ವ್ಯವಸ್ಥೆಯನ್ನು ಹೇಗೆ ಮಾಡಬೇಕೆಂಬದರ ಬಗ್ಗೆ ಹಂಬೀರರಾಯನ ಮತವೇ ನನ್ನ ಮತವೆಂದು ಗ್ರಹಿಸಿರಿ." ಎಂದು ಮಾನಾಜಿರಾಯನಿಗೆ ಮಹಾರಾಜರು ಹೇಳಿ:-"ಹಂಬೀರರಾಯಾ, ನೀನು ಈ ವಿಷಯದಲ್ಲಿ ಏನು ಹೇಳುವೆ?"

"ಮಹಾರಾಜರೆ!" ಹಂಬೀರರಾಯನು ವಿನಯದಿಂದ:—"ತಮ್ಮಂಥ ಧರ್ಮರಾಜರೆದುರಿಗೆ ನಾನು ಏನೆಂದು ಮತ ಪ್ರದರ್ಶನ ಮಾಡಲಿ!"

"ನಿನ್ನ ಅಭಿಪ್ರಾಯದಂತೆ ದೌಲತರಾಯನ ವ್ಯವಸ್ಥೆ ಮಾಡಬೇಕೆಂದು ನನ್ನ ಇಚ್ಛೆಯಿದೆ."

"ಮಹಾರಾಜರೆ, ಅವನನ್ನು ಬಿಟ್ಟುಬಿಡಬೇಕೆಂದು ನಾನು ಇಚ್ಛಿಸಿದರೆ ಹೇಗೆ?"

"ನಿನ್ನ ಮನಸ್ಸು." ಮಹಾರಾಜರು ನಸುನಗುತ್ತ:—"ದೊಡ್ಡ ಮನುಷ್ಯರ ಮೇಲೆ ಹೀಗೆ ಉದಾರತನ ತೋರಿಸುವದರಿಂದ ಸಹ ಅವರಿಗೆ ಶಿಕ್ಷೆಮಾಡಿದಷ್ಟೇ ಪರಿಣಾಮವಾಗುವ ಸಂಭವವಿದೆ; ಆದರೆ ಔದಾರ್ಯವು ಅಪಾತ್ರದಲ್ಲಿ ತೋರಿಸಲ್ಪಡಬಾರದೆಂದು ನನ್ನ ಮನೀಷೆ. ದೌಲತರಾಯನ ಗುಣಾವಗುಣಗಳನ್ನು ನೀನು ನನಗಿಂತ ಹೆಚ್ಚಾಗಿ ಗುರುತಿಸಿರುವೆ. ಅವನು ಬಿಡುಗಡೆಗೆ ಯೋಗ್ಯನೆಂದು ನಿನ್ನ ಮನಸ್ಸಿಗೆ ತೋಚಿದರೆ, ಹಾಗೆ ಮಾಡಬಹುದು."

"ಮಹಾರಾಜರೆ!" ಹಂಬೀರರಾಯನು ಕೌತುಕದಿಂದ "ದೌಲತರಾಯನು ಶತ್ರುಪಕ್ಷದವನೆಂದು ಅವನನ್ನು ನಾನು ಹಳಿಯಲಾರೆನು. ಅವನ ಶೌರ್ಯ-ಧೈರ್ಯ-ಸಾಹಸಗಳು ಅವರ್ಣನೀಯವಿರುವವು. ಅಂಥ ಪರಾಕ್ರಮಿಯನ್ನು ಜಗತ್ತಿನೊಳಗಿಂದ ಇಲ್ಲದಂತೆ ಮಾಡುವದು ಘೋರ ಪಾತಕವು."

"ಹಂಬೀರರಾಯಾ, ದೌಲತರಾಯನು ಸ್ವರಾಜ್ಯದ ವೈರಿಯಿರುವನು. ಇಂಥವನನ್ನು ಬಿಡುವದು ಯೋಗ್ಯವೆ?" ಎಂದು ಮಾನಾಜಿರಾಯನು ಪ್ರಶ್ನೆ ಮಾಡಿದನು.

"ಸಾವಂತನೇನು, ದೌಲತರಾಯನೇನು? ಇಬ್ಬರೂ ಸ್ವರಾಜ್ಯದ ವೈರಿ

ಗಳೇ ಆಗಿದ್ದರು; ಆದರೆ ಮಹಾರಾಜರ ಸ್ವರಾಜ್ಯಸ್ಥಾಪನೆಯ ಮಹತ್ವವು ಸಾವಂತನಿಗೆ ತಿಳಿದ ಬಳಿಂದ ಅವನು ಈ ಕಾರ್ಯದಲ್ಲಿ ಸಹಕಾರಿಯಾಗಲು ಒಪ್ಪಿರುವನಲ್ಲವೆ? ಅವನಂತೆ ದೌಲತರಾಯನೂ ಸ್ವರಾಜ್ಯಸೇವಕನಾಗಲಾರನೆಂದು ಹೇಗೆ ಹೇಳುವಿರಿ? ಒಂದು ಸಾರೆ ಅವನಿಗೆ ಸಂಧಿಯನ್ನು ಕಲ್ಪಿಸಿಕೊಟ್ಟು ನೋಡಬೇಕು. ನಿರಾಶೆಯೇ ಉಂಟಾದರ ಯೋಗ್ಯ ಬಿಗಿಮಾಡಲಿಕ್ಕೆ ವೇಳ ಹತ್ತುವದಿಲ್ಲ." ಎಂದು ಹಂಬೀರರಾಯನು ನುಡಿದು, ಮಹಾರಾಜರನ್ನು ಕುರಿತು:—"ಮಹಾರಾಜರೆ, ನನ್ನ ಮತವು ಸರಿಯಾಗಿರುವದೆ?"

"ಹಂಬೀರರಾಯಾ!" ಮಹಾರಾಜರು ಸಂತುಷ್ಟತೆಯಿಂದ:—"ನೀನು ಶೂರನೂ ಸಾಹಸಿಯೂ ಇದ್ದಂತೆ ವಿಚಾರಶಾಲಿಯೂ ಇರುವೆ. ನಿನ್ನ ರಾಷ್ಟ್ರಧರ್ಮ ಭಾವನೆಗಳು ಅತ್ಯಂತ ವರ್ಣನೀಯವಿರುವವು. ನಿನ್ನ ಇಚ್ಛೆಯಂತೆ ದೌಲತರಾಯನ ಬಿಡುಗಡೆ ಮಾಡಲ್ಪಡುವದು. ನೀನು ಅವನನ್ನು ಸ್ವರಾಜ್ಯಸೇವಾಸಕ್ತನನ್ನು ಮಾಡಿದರೆ ಸ್ವರಾಜ್ಯದ ದೊಡ್ಡ ಕಾರ್ಯವನ್ನು ಮಾಡಿದಂತಾಗುವದು. ಸುಲಿಗೆಗಾರ ಘುಂಡಜಿಯಂತೆ ದೌಲತರಾಯನೂ ನಿನ್ನ ಉಪದೇಶದಿಂದ ಸ್ವರಾಜ್ಯಸೇವಕನಾಗುವದು ಸಂಭವನೀಯವಿದೆ."

"ಹಂಬೀರರಾಯನು ಈ ವಿಧವಾಗಿ ಗುಣಾಢ್ಯನಿರುವನೆಂಬದನ್ನು ನಾನು ಅರಿತಿರಲಿಲ್ಲ." ಮಾನಾಜಿರಾಯನು ಆಶ್ಚರ್ಯೋದ್ಗಾರ ತೆಗೆದನು.

"ಇವನು ಹಿರಿಯರಿಗಿಂತ ಬೇಗನೆ ಹೆಚ್ಚಿನ ವೈಭವವನ್ನು ಸಂಪಾದಿಸುವನು." ಎಂದು ಮಹಾರಾಜರು ನುಡಿದು:—"ಮಾನಾಜಿರಾಯರೆ, ಇಂದೇ ದೌಲತರಾಯನನ್ನು ಬಿಡುಗಡೆ ಮಾಡಿ ಇಲ್ಲಿಗೆ ಕಳಿಸಿರಿ. ಹಂಬೀರರಾಯನ ಉಪದೇಶದಿಂದ ಅವನ ಮನಸ್ಸಿನ ಮೇಲೆ ಯಾವ ಪರಿಣಾಮವಾಗುವದೆಂಬದನ್ನು ಪರೀಕ್ಷಿಸಲೇಬೇಕು."

"ಮಹಾರಾಜರ ಆಜ್ಞೆಯಂತೆ ಈಗಲೆ ದೌಲತರಾಯನನ್ನು ಬಿಟ್ಟುಬಿಡುವೆನು."

ಮಾನಾಜಿರಾಯನು ಹೀಗೆ ನುಡಿದ ಮೇಲೆ ಮಹಾರಾಜರು ಹಂಬೀರರಾಯನನ್ನು ಕುರಿತು:—"ಜಯಗಡದ ಸಂಗ್ರಾಮದಲ್ಲಿ ಭಾಗ ವಹಿಸಲು ಅವಕಾಶ ದೊರೆಯಲಿಲ್ಲೆಂದು ನೀನು ಖೇದಗೊಳ್ಳಬೇಡ. ಈ ಸಂಗ್ರಾಮದಲ್ಲಿ ನಿನ್ನಿಂದ ಚನ್ನಾಗಿ ಅನುಕೂಲವಾಗಿದೆ. ಆದರೂ ಪ್ರತ್ಯಕ್ಷವಾಗಿ ಸಂಗ್ರಾಮದಲ್ಲಿ ಭಾಗ ವಹಿಸಲು ನಿನಗೆ ತುಂಬಾ ಅವಕಾಶವಿದೆ. ಇನ್ನು ಮೇಲೆ ಬೇಗನೆ ಕರ್ನಾ

ಟಕದ ಮೇಲೆ ದಾಳಿ ಮಾಡಬೇಕಾಗಿದೆ. ಆ ದಾಳಿಯಲ್ಲಿ ನೀನು ಮಾನಾಜಿ ರಾಯರ ಕೈಕೆಳಗೆ ಬೇಕಾದ ಹಾಗೆ ಕೆಲಸಮಾಡು."

ಮಹಾರಾಜರು ಹೀಗೆ ನುಡಿದು ಅಲ್ಲಿಂದ ಎದ್ದರು. ಅನಂತರದಲ್ಲಿ ಮಾನಾಜಿರಾಯನೂ ಎದ್ದನು. ಇಬ್ಬರೂ ಹೋದ ಒಂದು ಗಳಿಗೆಯಲ್ಲಿ ದೌಲತರಾಯನು ಅಲ್ಲಿಗೆ ಬಂದನು. ಅವನು ಹಂಬೀರರಾಯನಿಗೆ ನಮಸ್ಕಾರ ಮಾಡಿ:—"ಉದಾರ ಪ್ರತಾಪಶಾಲಿ, ನಿನ್ನ ಗುಣಗಾನವನ್ನು ಮಾಡಲು ಅಲ್ಪ ಮತಿಯಾದ ನನ್ನ ಭಾಷೆಯಲ್ಲಿ ಶಬ್ದಗಳೇ ದೊರೆಯವು."

"ದೌಲತರಾಯರೆ!" ಹಂಬೀರರಾಯನು ವಿನಯದಿಂದ :—"ನೀವು ಹೊಗಳುತ್ತಿರುವಷ್ಟು ಮಹತ್ವವು ನನ್ನಂತಹ ಅಲ್ಪನಲ್ಲೇನಿದೆ? ಮಹಾರಾಜರ ವಿಷಯವಾಗಿ ಇಂಥ ಭಾಷೆಯನ್ನುಪಯೋಗಿಸಿದರೆ ಶೋಭಿಸುವದಲ್ಲದೆ, ನನ್ನ ಸಲುವಾಗಿ ಹೀಗಾದರೆ ಸಲ್ಲದು."

"ನಾನು ನಿಜವಾಗಿ ಹೇಳುವೆನು. ಮುಖಸ್ತುತಿ ಮಾಡುವ ಗುಣ ನನ್ನಲ್ಲಿಲ್ಲ. ಮಹಾರಾಜರು ಗುಣನಿಧಿಗಳಿರುವದರಿಂದ ಅವರ ಸ್ವರಾಜ್ಯಸ್ಥಾಪನೆಯ ಕಾರ್ಯವು ಮಿಂಚಿನ ವೇಗದಿಂದ ಸಾಗಿದೆ. ಅವರ ಸೇವಕರಾದ ನಿಮ್ಮಂಥವರಲ್ಲಿ ಕೂಡ ಅವರ್ಣನೀಯ ಗುಣಗಳು ತುಂಬಿಕೊಂಡಿರುವದು ಸ್ವರಾಜ್ಯಕ್ಕೆ ಭೂಷಣಾಸ್ಪದವಿದೆ. ನೀವು ನನಗೆ ಜೀವದಾನ ಕೊಟ್ಟಿರುವದರಿಂದ ನಾನು ಆಜನ್ಮವಾಗಿ ನಿಮಗೆ ಋಣಿಯಾಗಿದ್ದೇನೆ."

"ದೌಲತರಾಯರೆ, ಭಾರತವರ್ಷವು ಪರಕೀಯರ ದಾಸ್ಯದಲ್ಲಿ ಬಿದ್ದು ಹೇಗೆ ಬಳಲತೊಡಗಿರುವದೆಂಬದು ನಿಮ್ಮಂಥ ರಾಜಕಾರಣಿಗಳಿಗೂ ತಿಳಿಯದೆ ಹೋದದು ಶೋಚನೀಯವು. ಪರಕೀಯರ ಆಳಿಕೆಯು ಗಟ್ಟಿಯಾಗುವಂತೆ ನಿಮ್ಮಂಥ ಸ್ವಕೀಯರೇ ಕೃತಿಗಳನ್ನು ಜರುಗಿಸತೊಡಗಿದರೆ ನಮ್ಮ ನಷ್ಟಚರ್ಯೆಯ ದಿನಗಳು ಮುಗಿದಿಲ್ಲವೆನ್ನಬೇಕಾಗುವದು. ಮಹಾರಾಜರು ಹಿಂದುಗಳ ಸ್ವಾತಂತ್ರ್ಯಕ್ಕಾಗಿ ಹೇಗೆ ಹೋರಾಡುತ್ತಿರುವರೆಂಬದು ನಿಮಗೆ ಗೊತ್ತಿಲ್ಲವೆ? ಕೇವಲ ಸ್ವಾರ್ಥದ ಕಡೆಗೆ ದೃಷ್ಟಿಯನ್ನಿಟ್ಟರೆ ಅವರು ಇಷ್ಟು ಹೋರಾಟವನ್ನು ಏಕೆ ನಡೆಯಿಸಬೇಕು? ಈ ಪರಿಯಾಗಿ ಏಕೆ ಶ್ರಮ ವಹಿಸಬೇಕು? ದೇವರ ದಯೆಯಿಂದ ಅವರ ವೈಭವಕ್ಕೇನೂ ಕೊರತೆಯಾಗಿಲ್ಲ. ಹೀಗಿದ್ದು ಪ್ರಸಂಗದಲ್ಲಿ ಒಬ್ಬ ಸಾಧಾರಣ ತರದ ಸೈನಿಕನಂತೆ ಸಹ ಕಾರ್ಯ ಮಾಡುತ್ತಿರುವದು ನಿಮಗೆ ಗೊತ್ತಿಲ್ಲವೆ? ನಿಮ್ಮಂಥ ಜನರೇ ಪರಕೀಯರ ಅಧಿ

ಕಾರವನ್ನು ಚಿರಸ್ಥಾಯಿಯನ್ನಾಗಿ ಮಾಡಲು ಸಾಹಸ ಪಡತೊಡಗಿರುವಿರಿ. ನೀವು ಹಿಂದುಗಳಲ್ಲವೆ? ಭಾರತದೇಶವು ನಿಮ್ಮ ಮಾತೃಭೂಮಿಯಲ್ಲವೆ? ನಿಮ್ಮ ಜಾತಿಯು ಪರಕೀಯರ ದಾಸ್ಯದಿಂದ ಬಿಡುಗಡೆ ಹೊಂದಬೇಕೆಂದು ನೀವು ಇಚ್ಛಿಸುವದಿಲ್ಲವೆ? ನಿಮ್ಮ ವಿತ್ತ ಜೀವಿತಗಳು, ನಿಮ್ಮ ಧರ್ಮ, ನಿಮ್ಮ ತಾಯಿ ಅಕ್ಕ-ತಂಗಿಯರು ಸುರಕ್ಷಿತವಾಗಿ ಬಾಳಬೇಕೆಂದು ನಿಮ್ಮ ಮನಸ್ಸಿಲ್ಲಿಲ್ಲವೆ? ನಿಮ್ಮ ಅಧಿಕಾರವೇ ನಿಮ್ಮ ನಾಡಿನ ಮೇಲಿರಬೇಕೆಂದು ನೀವು ಅಪೇಕ್ಷಿಸುವದಿಲ್ಲವೆ? ಸಾಲಿಗೆಗಾರ ಘಾಂಪಜಿಯಂಥವನು ಕೂಡ ಮಹಾರಾಜರ ಉದಾತ್ತ ಧ್ಯೇಯ ಗಳಿಗೆ ಮೆಚ್ಚಿ ಅವರ ಸೇವಾನುಸೇವಕನಾಗಿದ್ದಾನೆ. ಸ್ವರಾಜ್ಯದ ಸಲುವಾಗಿ ತನ್ನ ಸರ್ವಸ್ವವನ್ನು, ಕೊನೆಗೆ ತನ್ನ ಪ್ರಾಣವನ್ನು ಕೂಡ ಅರ್ಪಿಸಲು ಸಿದ್ಧನಾಗಿ ದ್ದಾನೆ. ಸ್ವರಾಜ್ಯಕಾರ್ಯವೆಂದರೆ ಮಹಾರಾಜರೊಬ್ಬರ ಕಾರ್ಯವಲ್ಲ. ಅದು ನಮ್ಮ ಕಾರ್ಯ, ನಿಮ್ಮ ಕಾರ್ಯ, ಪ್ರತಿಯೊಬ್ಬ ಹಿಂದುವಿನ ಕಾರ್ಯ. ನಿಮ್ಮಂಥ ಸತ್ವಶಾಲಿಗಳು ಸ್ವರಾಜ್ಯಕಾರ್ಯದಲ್ಲಿ ಭಾಗ ವಹಿಸಿದರೆ ಎಷ್ಟು ಪ್ರಯೋಜನ ವಾಗುವದು ನೋಡಿರಿ! ನೀವು ಶೂರರು, ಸಾಹಸಿಗಳು; ಆದರೆ ನಿಮ್ಮಲ್ಲಿ ರಾಷ್ಟ್ರ ಧರ್ಮವಿಲ್ಲ. ನಿಮಗೆ ಸ್ವರಾಜ್ಯದ ಮಹತಿ ಗೊತ್ತಿಲ್ಲ. ನಿಮ್ಮಲ್ಲಿ ರಾಷ್ಟ್ರಧರ್ಮವು ಜಾಗ್ರತವಾದರೆ ಎಷ್ಟು ವಿಧದ ಪ್ರಯೋಜನವಾಗುವದೆಂಬದನ್ನು ಈಗ ನಾನು ಹೇಳಲಾರೆನು ಸ್ವರಾಜ್ಯದ ಹೊರಗಿನ ನಿಮ್ಮ ಅಣ್ಣ-ತಮ್ಮಂದಿರ ಕಡೆಗೆ ನೋಡಿರಿ; ನಿಮ್ಮ ಅಕ್ಕತಂಗಿಯರ ಕಡೆಗೆ ನೋಡಿರಿ. ಅಲ್ಲಿಯ ಮಂದಿರಗಳ ಕಡೆಗೆ ನೋಡಿರಿ. ಅಲ್ಲಿಯ ಧರ್ಮದ ಕಡೆಗೆ ನೋಡಿರಿ. ನಿಜವಾದ ಅಧಿಕಾರಿಯು ಆಳಾಗಿರುವನು; ಎಲ್ಲಿಂದಲೋ ಎದ್ದು ಬಂದವನು ಧನಿಯಾಗಿರುವನು. ಇದು ನಿಮಗೆ ಸಂತೋಷವೆ? ನಿಮ್ಮ ಸದಸದ್ವಿವೇಕ ಬುದ್ಧಿಯನ್ನು ಜಾಗ್ರತಗೊಳಿಸಿ ನನ್ನ ಮಾತಿನ ಉತ್ತರವನ್ನು ಕೊಡಿರಿ ನೋಡೋಣ."

ಹಂಬೀರರಾಯನ ಉಪದೇಶದಿಂದ ದೌಲತರಾಯನ ತಲೆಯಲ್ಲಿ ಸ್ವಚ್ಛ ವಾದ ಪ್ರಕಾಶವು ಬಿತ್ತು. ಮಹಾರಾಜರ ಕಾರ್ಯವು ಉದಾತ್ತವಾದದ್ದಿರುವ ದೆಂಬ ಸಂಗತಿಯು ಮತ್ತಿಷ್ಟು ಗಟ್ಟಿಯಾಗಿ ಅವನ ಮನಸ್ಸಿನಲ್ಲಿ ಉಳಿಯಿತು. ಸ್ವರಾಜ್ಯ ಸೇವೆಗಾಗಿ ಸ್ವಜನರು ಆತ್ಮತ್ಯಾಗ ಸಾರ್ಥತ್ಯಾಗ ಮಾಡುತ್ತಿರುವ ಸಮಯದಲ್ಲಿ ಅವರಿಗೆ ವಿರೋಧ ಮಾಡಿ ಪಾಪಸಂಚಯ ಮಾಡುತ್ತಿರುವ ಸಾವಂತನಂಥ ಜನರ ವಿಷಯವಾಗಿ ಅವನಲ್ಲಿ ತಿರಸ್ಕಾರವುಂಟಾಗತೊಡಗಿತು. ಮಹಾರಾಜರ ಸ್ವರಾಜ್ಯ ಸಂಸ್ಥಾಪನೆಯ ಗುಟ್ಟು ಅರಿಯದೆ ಇದ್ದುದರಿಂದ

ತನ್ನಿಂದ ಅನೇಕ ಅಪರಾಧಗಳು ಘಟಿಸಿದವಲ್ಲ! ಎಂದು ಅವನು ಪಶ್ಚಾತ್ತಾಪ ಬಡತೊಡಗಿದನು. ಕೆಲವು ವೇಳೆ ಅವನು ಆಲೋಚಿಸಿ, ತರುವಾಯ:—"ಹಂಬೀರರಾಯರೇ, ಇಷ್ಟು ದಿನಗಳವರೆಗೆ ಅಜ್ಞಾನತನವು ನನ್ನ ವಿವೇಕವನ್ನು ಕುರುಡುಮಾಡಿತ್ತು. ಇಂದು ನಿಮ್ಮ ಉಪದೇಶದಿಂದ ನನ್ನಲ್ಲಿ ನಿಜವಾಗಿಯೂ ರಾಷ್ಟ್ರಭಾವನೆಗಳು ಜಾಗ್ರತವಾಗಿವೆ. ಈ ದೇಹದಲ್ಲಿ ಪ್ರಾಣವಿರುವವರೆಗೆ ನಾನು ಸ್ವರಾಜ್ಯ ಸೇವೆಮಾಡುತ್ತ ಹೋಗುವೆನು; ಹಾಗು ನನ್ನ ಧನಿಯಾಗಿದ್ದ ನಾವಂತನನ್ನು ಸಹ ಇದೇ ಹಾದಿಗೆ ಹಚ್ಚಲು ಪ್ರಯತ್ನ ಮಾಡುವೆನು. ನಿಮ್ಮ ವಿರೋಚಿತ ಔದಾರ್ಯವೇ ನನ್ನಲ್ಲಿ ಜ್ಞಾನೋದಯವನ್ನುಂಟು ಮಾಡಿತು. ನಾನು ಇನ್ನುಮೇಲೆ ಸಾವಂತನ ಬಳಿಗೆ ಹೋಗುವೆನು. ನಾನು ಎಲ್ಲಿದ್ದರೂ ಸ್ವರಾಜ್ಯ ಕಾರ್ಯವನ್ನೇ ಮಾಡುತ್ತಿರುವನೆಂದು ನಿಮಗೆ ವಚನಕೊಡುವೆನು. ನಾನು ನನ್ನ ಧನಿಯ ಬಳಿಗೆ ಹೋಗುವ ಮೊದಲು ನಿಮ್ಮದೇನಾದರೂ ಕೆಲಸವಿದ್ದರೆ ಮಾಡಿ ಹೋಗಬೇಕೆಂದು ಇಚ್ಛಿಸುತ್ತಿದ್ದೇನೆ."

"ನಿಮ್ಮ ಇಚ್ಛೆ ಇದ್ದರೆ ಅಡ್ಡಿಯಿಲ್ಲ. ಸದ್ಯಕ್ಕೆ ಇಲ್ಲಿಂದ ಬೇರೆ ಕಡೆಗೆ ಹೋಗಲು ನನಗೆ ಅನುಕೂಲವಿಲ್ಲ. ನೀವು ದೇವಗಾವಿಗೆ ಹೋಗಿ ಅಲ್ಲಿ ನನ್ನ ತಾಯಿಯವರಿಗೆ ನನ್ನ ಸುಖರೂಪತೆಯನ್ನು ಅರುಹಿರಿ; ಹಾಗು ಇಲ್ಲಿ ನಡೆದ ಘಟನೆಗಳನ್ನು ಹೇಳಿರಿ. ಕರ್ನಾಟಕದ ನೋಲಿನ ಪಾಲಿಯ ಕೆಲಸವು ಬೇಗನೆ ಪ್ರಾರಂಭವಾಗುವ ಮೂಲಕ ಸದ್ಯಕ್ಕೆ ನನಗೆ ಅಲ್ಲಿಗೆ ಬರಲು ಅನುಕೂಲವಿಲ್ಲೆಂದೂ, ಮುಂದೆ ಅನುವು ದೊರೆತೊಡನೆಯೆ ಹೊರಟು ಬರುವೆನೆಂದೂ ತಿಳಿಸಿರಿ; ಹಾಗು ನಾಂದಗಾವಿಗೆ ಹೋಗಿ ಯಶವಂತರಾಯರಿಗೆ ನನ್ನ ಕ್ಷೇಮ ಸಮಾಚಾರ ತಿಳಿಸಿರಿ. ಅವರ ಮಗಳಾದ ಪುತ್ಥಳಿಯು ನನ್ನ ಪ್ರಣಯಿನಿಯು. ಅವಳನ್ನು ಕಾಣಲಿಕ್ಕೆ ಮರೆಯಲಾಗದು. ಅವಳೆದುರಿಗೆ ನನ್ನ ವಿಷಯವಾಗಿ ಅವಾಸ್ತವ ವರ್ಣನೆ ಮಾಡಬೇಡಿರಿ. ನೀವು ಯಾರೆದುರಿನಲ್ಲಿಯೂ ನನ್ನ ವಿಜಯದ ಅತಿರೇಕವಾದ ಪ್ರಶಂಸೆ ಮಾಡಬಾರದೆಂದು ಇಚ್ಛಿಸುವೆನು."

"ಹಂಬೀರರಾಯರೆ," ದೌಲತರಾಯನು ನಸುನಗುತ್ತ:—"ಈ ವಿಷಯದಲ್ಲಿ ನೀವು ನನ್ನನ್ನು ಬಂಧಿಸಬೇಡಿರಿ. ನಾನು ನನ್ನ ಮನಸ್ಸಿಗೆ ಸರಿಯಾಗಿ ಕಂಡ ಮಾತನ್ನು ಬಚ್ಚಿಡಲಾರೆನು. ಪುತ್ಥಳೀದೇವಿಯವರಿಗೆ ನೀವು ಒಣ ಸಂದೇಶವನ್ನಷ್ಟೇ ಕಳುಹಿಸುವಿರೇನು!"

"ಮತ್ತೇನು ಮಾಡಲಿ?" ಎಂದು ಹಂಬೀರರಾಯನು ನುಡಿದು, ಅಲ್ಲಿ

ಯೇ ಕುಳಿತ ಶಂಭುವನ್ನು ಕುರಿತು:--"ದೇವಗಾವಿಗೂ ಸ್ವಲ್ಪ ಹಣ ಕಳುಹಿಸಬೇಕಾಗಿದೆ. ಪುತ್ಥಳಿಗೆ ಒಂದು ಆಭರಣವನ್ನಾದರೂ ಕಳಿಸಬೇಕೆಂದು ನನ್ನ ಇಚ್ಛೆಯಿದೆ. ಜಯಗಡದ ಸಂಗ್ರಾಮದಲ್ಲಿ ನಾನು ಭಾಗವಹಿಸದ್ದರಿಂದ ಸುಲಿಗೆಯ ಹಾಗು ಕಪ್ಪ-ಕಾಣಿಕೆಯ ಪಾಲು ನನಗೆ ದೊರೆತಿಲ್ಲ. ಈಗ ಏನು ಮಾಡಬೇಕು?"

"ಧನಿಯರೇ, ನೀವು ಚಿಂತಿಸಬೇಡಿರಿ. ನನ್ನಲ್ಲಿರುವ ಹಣವನ್ನು ನಿಮಗೆ ಕೊಡುವೆನು. ನನಗೆ ಜಯಗಡದ ಸಂಗ್ರಾಮದಲ್ಲಿ ಹೇರಳ ಸಂಭಾವನೆ ದೊರೆತಿದೆ."

"ಬೇಡ, ನಿನ್ನ ಹಣವನ್ನು ಕೊಡುವದು ಬೇಡ. ನಾನು ನನ್ನ ಮನುಷ್ಯನನ್ನು ಸಾವಂತವಾಡಿಗೆ ಕಳುಹಿಸಿ ಹಣ-ಅಲಂಕಾರಗಳನ್ನು ತರಿಸುವೆನು. ನಾನು ವಿಜಯಿ ವೀರರಾದ ನಿಮ್ಮ ಧನಿಗಳಿಗೆ ಅವುಗಳನ್ನು ಕಾಣಿಕೆಯಾಗಿ ಕೊಡಬೇಕಾಗಿದೆ." ಎಂದು ದೌಲತರಾಯನು ಶಂಭುವಿಗೆ ಹೇಳಿ:--"ಹಂಬೀರರಾಯರೇ, ನೀವು ಯಾವ ವಿಧದ ಆಲೋಚನೆಯನ್ನೂ ಮಾಡಬೇಡಿರಿ. ನಾನು ಎಲ್ಲ ವಿಧದ ವ್ಯವಸ್ಥೆ ಮಾಡುವೆನು"

"ನಿಮ್ಮ ಭಾರ ನನ್ನ ಮೇಲೆ ಬೇಡ." ಹಂಬೀರರಾಯನು ವ್ಯಾಕುಲತೆಯಿಂದ:--"ನನ್ನ ತಾಯಿಗೆ ಹಾಗು ನನ್ನ ಭಾವೀ ಸಹಧರ್ಮಚಾರಿಣಿಗೆ ಹೀಗೆ ಅನ್ಯರ ಸ್ವತ್ತನ್ನು ಉಪಯೋಗ ಮಾಡುವಂಥ ಹೀನಕೋಟಿಯವನು ನಾನಲ್ಲ."

"ಹಂಬೀರರಾಯರೇ, ನೀವು ಹೀಗೆ ಭಾವನಾಪ್ರಧಾನರಾಗಬೇಡಿರಿ. ನಿಮ್ಮ ಉಪಕಾರವನ್ನು ಎಷ್ಟು ಜನ್ಮದಲ್ಲಿ ತೀರಿಸಿದರೂ ತೀರದು. ನೀವು ನನಗೆ ಗುರೂಪದೇಶ ಮಾಡಿರುವಿರಿ. ನನ್ನ ಮೇಲೆ ವಿಜಯಪಡೆದಿರುವಿರಿ. ನೀವು ನನ್ನಿಂದ ಕಾಣಿಕೆ ತೆಗೆದುಕೊಳ್ಳಲು ಯೋಗ್ಯರಿರುವಿರಿ. ನಾನು ನಿಮಗೆ ಕಾಣಿಕೆಯನ್ನೊಪ್ಪಿಸದೆ ಹೋದರೆ ಕೃತಘ್ನನಾಗುವೆನು."

"ನಿಮ್ಮ ಆಗ್ರಹಕ್ಕೆ ನಾನು ನಿರುಪಾಯನಾಗಬೇಕಾಗಿದೆ."

ಅನಂತರದಲ್ಲಿ ದೌಲತರಾಯನು ಹಂಬೀರರಾಯನ ನಿರೋಪ ಹೊಂದಿ ಅಲ್ಲಿಂದ ತನ್ನ ನಿವಾಸಕ್ಕೆ ತೆರಳಿದನು. ಅವನು ಅಂದೇ ಸಾವಂತವಾಡಿಗೆ ತನ್ನ ಮನುಷ್ಯನನ್ನು ಕಳುಹಿಸಿದನು. ಅವನು ಧನ-ಕನಕ-ಅಲಂಕಾರಗಳನ್ನು ತೆಗೆದುಕೊಂಡು ಬಂದ ಮೇಲೆ ಹಂಬೀರರಾಯನಿಗೆ ಅರ್ಪಿಸಿ, ಅನಂತರದಲ್ಲಿ ಅವುಗಳನ್ನು ತಕ್ಕೊಂಡು ತನ್ನ ಅನುಚರರೊಡನೆ ದೇವಗಾವಿಗೆ ಹೋದನು.

*

# ೧೬ ರಾವಜಿ ಘೋರ್ಪಡೆ.



ಶಿವಾಜಿಮಹಾರಾಜರು ಕರ್ನಾಟಕದ ಮೇಲಿನ ದಾಳಿಯ ಸಿದ್ಧತೆಯನ್ನು ಪೂರೈಸಿದ್ದರು. ಯಾರು ಯಾರನ್ನು ಯಾವ ಯಾವ ಭಾಗಕ್ಕೆ ಕಳುಹಿಸಬೇಕೆಂಬದು ನಿರ್ಧಾರವಾಗಿತ್ತು. ಮಾನಾಜಿರಾಯನು ತನ್ನ ಪಡೆಯೊಡನೆ ಪ್ರಚಂಡಗಡದ ಮೇಲೆ ಹೊರಡತಕ್ಕವನಿದ್ದನು. ಹಂಬೀರರಾಯನ ಪ್ರಕೃತಿಯು ಪೂರ್ಣ ಆರೋಗ್ಯಹೊಂದಿ ಶಕ್ತಿಯೂ ಉಂಟಾಗಿದ್ದರಿಂದ ಅವನು ಒಳ್ಳೆಯ ಉತ್ಸಾಹದಿಂದ ಆ ದಂಡಯಾತ್ರೆಯ ಸಿದ್ಧತೆಯಲ್ಲಿ ಭಾಗವಹಿಸಿದ್ದನು.

ಮಾನಾಜಿರಾಯನೂ ಹಂಬೀರರಾಯನೂ ದೊಡ್ಡ ಸೈನ್ಯದೊಡನೆ ಸುಂದರಗಡವನ್ನು ಬಿಟ್ಟು ಕೊಲ್ಹಾಪುರದ ಮೇಲಿಂದ ಹಾಯ್ದು ಬೆಳಗಾವಿಯ ಕಡೆಗೆ ಹೊರಟರು. ಸುತಗಟ್ಟಿಯ ಅಡವಿಯಲ್ಲಿ ಬಂದ ಕೂಡಲೆ ಮಾನಾಜಿರಾಯನಿಗೆ ಒಬ್ಬ ಅಶ್ವಾರೋಹಿಯು ದೂರದಲ್ಲಿ ಬರುತ್ತಿರುವದು ಕಂಡಿತು. ಅವನು ಮಾನಾಜಿರಾಯನ ಸೈನ್ಯವನ್ನು ಹಿಂಬಾಲಿಸಿದ್ದನು. ಅವನ ವಿಷಯವಾಗಿ ಮಾನಾಜಿರಾಯನಿಗೆ ಸಂದೇಹವು ಉತ್ಪನ್ನವಾಯಿತು. ಅವನು ಹಂಬೀರರಾಯನನ್ನು ಕರೆದು:—"ಹಂಬೀರ, ಆ ಮರಡಿಯ ಮೇಲೆ ಬಿಳೀ ಕುದುರೆಯನ್ನು ಹತ್ತಿ ಬರುತ್ತಿರುವ ಸೈನಿಕನನ್ನು ನೋಡು. ಅವನು ನಿನ್ನೆನಿಂದ ನಮ್ಮ ಸೈನ್ಯವನ್ನು ಹಿಂಬಾಲಿಸಿ ನಡೆದಿರುವನು. ಬಹಳ ಮಾಡಿ ಅವನು ಶತ್ರುಸೈನಿಕನಿರುವಂತೆ ತೋರುವದು. ನಮ್ಮ ಚಲನವಲನಗಳನ್ನು ನಿರೀಕ್ಷಿಸುವದಕ್ಕಾಗಿ ಹೀಗೆ ಬೆನ್ನಟ್ಟಿ ಬರುತ್ತಿರಬಹುದು. ನೀನು ನಿನ್ನ ಒಬ್ಬಿಬ್ಬರು ಅನುಚರರೊಂದಿಗೆ ಅವನನ್ನು ಬೆನ್ನುಹತ್ತಿ ಹಿಡಿದು ತರಲಿಕ್ಕೇ ಬೇಕು."

"ಕಾಕಾಸಾಹೇಬರೆ, ನಾನಾದರೂ ಅವನನ್ನು ನಿನ್ನೆಯಿಂದಲೇ ನೋಡುತ್ತಿರುವೆನು. ಯಾವನೊಬ್ಬ ಪಾಂಥಸ್ಥನಿರಬಹುದೆಂದು ತಿಳಿದು ಸುಮ್ಮನಿದ್ದೆನು. ಅವನು ಶತ್ರುಗಳ ಸೈನಿಕನಿರಬಹುದೆಂಬ ಕಲ್ಪನೆಯು ನನ್ನಲ್ಲಿ ಬಂದಿರಲಿಲ್ಲ." ಎಂದು ಹಂಬೀರರಾಯನು ನುಡಿದು:—"ನಾನೇ ಅವನನ್ನು ಹಿಡಿದು ನಿಮ್ಮ ಸ್ವಾಧೀನಕ್ಕೆ ಒಪ್ಪಿಸುವೆನು. ಜೊತೆಯಲ್ಲಿ ಯಾರೂ ಬೇಡ."

"ಒಬ್ಬನೇ ಹೋಗಬೇಡ. ಶತ್ರುವು ಬಲಿಷ್ಠನಿದ್ದರೆ ಅಪಾಯತಪ್ಪೀತು. ಶಂಭುವೊಬ್ಬನನ್ನಾದರೂ ಜೊತೆಯಲ್ಲಿ ಕರೆದುಕೊಂಡು ಹೋಗು." ಎಂದು ಮಾನಾಜಿರಾಯನು ಹೇಳಿ:—"ನೀನು ನಮ್ಮ ಸೈನ್ಯದಿಂದ ಬದಿಗೆ ಹೋಗಿ

ಅಡವಿಯಲ್ಲಿ ಮರೆಯಾಗಿ ಅವನ ಹಿಂದಿನಿಂದ ಬೆನ್ನಟ್ಟಿ ಬಾ. ಅವನು ನಿನ್ನ ಕೈಸೇರದಂತಿದ್ದರೆ ಅವನ ಮೇಲೆ ಬಾಣಪ್ರಯೋಗ ಮಾಡಿಯಾದರೂ ಪರಾಭವಗೊಳಿಸು; ಆದರೆ ಅವನ ಪ್ರಾಣ ತೆಗೆಯುವಂಥ ಪೆಟ್ಟು ಮಾತ್ರ ಕೊಡಲಾಗದು."

"ನಿಮ್ಮ ಆಜ್ಞೆಯಂತೆ ಅವಶ್ಯವಾಗಿ ವರ್ತಿಸುವೆನು" ಎಂದು ಹಂಬೀರರಾಯನು ನುಡಿದು, ಶಂಭುವಿನೊಡನೆ ಹೊರಟನು.

ಹಂಬೀರರಾಯನೂ ಶಂಭುವೂ ತಮ್ಮ ಕುದುರೆಗಳನ್ನೇರಿ ಶತ್ರುಸೈನಿಕನನ್ನು ಬೆನ್ನಟ್ಟಿದ್ದರು. ಅವರ ಸಮೀಪಕ್ಕೆ ಬರುವವರೆಗೆ ಶತ್ರುಸೈನಿಕನಿಗೆ ಏನೂ ಗೊತ್ತಿರಲಿಲ್ಲ. ಕುದುರೆಗಳ ಖುರಪುಟಧ್ವನಿಯು ಕೇಳಿದ ಮೇಲೆಯೇ ಅವನು ಹೊರಳಿ ನೋಡಿದನು. ತನ್ನನ್ನು ಹಿಡಿಯುವದಕ್ಕಾಗಿ ಅಶ್ವಾರೋಹಿಗಳಿಬ್ಬರು ಬೆನ್ನಟ್ಟಿ ಬರತೊಡಗಿರುವರೆಂಬದರ ಕಲ್ಪನೆಯು ಅವನಿಗೆ ಆಗಲೆ ಆಯಿತು. ಕೂಡಲೆ ಅವನು ತನ್ನ ಕುದುರೆಯ ವೇಗವನ್ನು ಹೆಚ್ಚಿಸಿದನು. ಆಗ ಶಂಭುವು.—"ಧನಿಯರೇ, ಸೈನಿಕನು ಕುದುರೆಯನ್ನು ಓಡಿಸತೊಡಗಿದನು. ಇನ್ನು ಅವನು ಬಾಣದ ಅಂತೆ ಹೋಗುವ ಸಂಭವವಿದೆ. ಬಾಣ ಬಿಟ್ಟು ಅವನನ್ನು ಕೆಡಹಲಾ?"

ಹಂಬೀರರಾಯನಿಗೆ ಶಂಭುವಿನ ವಿಚಾರವು ಸರಿದೋರಲಿಲ್ಲ. ಬಾಣದಿಂದ ಹೊಡೆದು ಶತ್ರುವನ್ನು ಪರಾಭವಗೊಳಿಸುವದು ಉಚಿತವಲ್ಲೆಂದು ಅವನಿಗೆ ತೋರಿತು ಆಗ ಅವನು:—"ಶಂಭೂ, ಶತ್ರುಸೈನಿಕನಲ್ಲಿ ಧನುರ್ಬಾಣಗಳಿಲ್ಲ. ಅವನು ಖಡ್ಗಧಾರಿಯಾಗಿದ್ದಾನೆ. ಅಂಥವನ ಮೇಲೆ ಬಾಣಬಿಡುವದು ಯೋಗ್ಯವಲ್ಲ. ನಾವು ಅವನನ್ನು ಹಿಡಿದು ಖಡ್ಗಯುದ್ಧವನ್ನೇ ಮಾಡತಕ್ಕದ್ದು."

ಒಡೆಯನ ಆಜ್ಞೆಯಿಂದ ಶಂಭುವು ನಿರುಪಾಯನಾದನು. ಹಂಬೀರರಾಯನು ತನ್ನ ಕೇಸರಿಯನ್ನು ಚಬಕದಿಂದ ಹೊಡೆದನು. ಅದು ವಾಯುವೇಗದಿಂದ ಸಾಗಿತು. ಶಂಭುವೂ ತನ್ನ ಕುದುರೆಗೆ ಏಟು ಕೊಟ್ಟನು. ಅದಾದರೂ ಕೇಸರಿಯನ್ನು ಹಿಂಬಾಲಿಸಿತು. ಶತ್ರುಸೈನಿಕನ ಕುದುರೆಯೂ ಅಸಾಮಾನ್ಯವಿತ್ತು. ಅದು ಕೇಸರಿಗೆ ಸರಿಯಾಗಿಯೇ ಇತ್ತೆಂದು ಹೇಳಬಹುದು. ಸುಮಾರು ಒಂದು ತಾಸಿನ ವರೆಗೆ ಸಾಗಿದರೂ ಹಂಬೀರರಾಯನಿಗೆ ಶತ್ರುಸೈನಿಕನು ಕೈವಶನಾಗಲಿಲ್ಲ; ಅವರೊಳಗಿನ ಅಂತರವೂ ಕಡಿಮೆಯಾಗಲಿಲ್ಲ.

ಕೊನೆಗೆ ನಿರಾಶನಾಗಿ ಹಿಂತಿರುಗಬೇಕಾಗುವದೆಲ್ಲಿಯೋ ಎಂಬ ಭಯವು ಹಂಬೀರರಾಯನನ್ನು ಬಾಧಿಸತೊಡಗಿತು. ಕೆಲಸವನ್ನು ಸಾಧಿಸದೆ ಮಾನಾಜಿ ರಾಯನೆದುರಿಗೆ ಹೋಗಿ ಹೇಗೆ ನಿಲ್ಲಬೇಕೆಂಬ ಯೋಚನೆಯೂ ಅವನಲ್ಲಿ ಹುಟ್ಟಿತು. ಏನಾದರೂ ಆಗಲಿ, ಶತ್ರುವನ್ನು ಹಿಡಿದುಕೊಂಡೇ ಹೋಗ ಬೇಕೆಂದು ಅವನು ದೃಢನಿಶ್ಚಯ ಮಾಡಿ ಕೇಸರಿಗೆ ಮತ್ತೊಂದು ಬಲವಾದ ಏಟು ಕೊಟ್ಟನು. ಆ ಕುದುರೆಯ ವೇಗವು ಹೆಚ್ಚಾಯಿತು. ಅಂತರವೂ ಕಡಿಮೆ ಯಾಗಹತ್ತಿತು. ಕೂಡಲೆ ಶತ್ರುಸೈನಿಕನು ತನ್ನ ಕುದುರೆಗೆ ಏಟು ಕೊಟ್ಟನು. ಕೂಡಲೆ ಮತ್ತೆ ಅಂತರವು ಹೆಚ್ಚತೊಡಗಿತು. ಆಗ ಶಂಭುವು:—"ಧನಿ ಯರೇ, ಈಗ ಅನುಮಾನ ಮಾಡಲಾಗದು. ನಾನು ಅವನ ಕುದುರೆಗೆ ಬಾಣ ಹೊಡೆಯುವೆನು. ಇನ್ನು ತುಸ ವೇಳೆ ಬಿಟ್ಟರೆ ಮತ್ತೆ ಅವನು ಬಾಣದ ಅಳತೆಯನ್ನು ಮೀರುವನು." ಎಂದು ಹೇಳಿದನು.

"ಬೇಡ; ಬಾಣ ಹೊಡೆಯ ಪದು ಬೇಡ. ನಾವು ಪ್ರಯಾಸಬಟ್ಟು ಅವ ನನ್ನು ಹಿಡಿಯಬೇಕು. ಧನುರ್ಧಾರಿಯಲ್ಲದವನ ಮೇಲೆ ಬಾಣ ಬಿಡಬೇಕೆಂದು ಹೇಳಲು ನನ್ನ ಮನಸ್ಸು ಒಪ್ಪದು."

ಶಂಭುವು ನಿರುಪಾಯನಾದನು. ಅವನು ಕೇಸರೀ ಕುದುರೆಯ ಹಿಂದೆ ಯೆ ಸಾಗಿದ್ದನು. ಸ್ವಲ್ಪ ವೇಳೆಯಲ್ಲಿ ಅವನ ಕುದುರೆ ಸ್ವಲ್ಪ ಹಿಂದಾಯಿತು. ಹೀಗೆ ಸ್ವಲ್ಪವೇಳೆ ಸಾಗುವಷ್ಟರಲ್ಲಿ ಮುಂದೆ ಜನವಸತಿಯಿದ್ದುದು ಕಂಡಿತು. ಕೂಡಲೆ ಶಂಭುವು ಕೊಂಬನ್ನೂದಿದನು. ಗಿಡದ ಬುಡದಲ್ಲಿ ಕುಳಿತ ಜನರು ಎದ್ದರು. ಶತ್ರುಸೈನಿಕನ ಕುದುರೆಯು ದರುವು-ಹಳ್ಳಗಳನ್ನು ಹಾರುತ್ತ, ಒಡ್ಡು ಬದುಗಳನ್ನು ಜಿಗಿಯುತ್ತ ಹೊರಟಿತ್ತು. ಕೇಸರಿಯೂ ಆ ಕುದುರೆಯನ್ನು ಬೆನ್ನಟ್ಟಿತ್ತು. ಸ್ವಲ್ಪ ದೂರ ಹೋಗುವಷ್ಟರಲ್ಲಿ ಶತ್ರು ಸೈನಿಕನ ಕುದುರೆಯು ಮುಗ್ಗರಿಸಿ ಭೂಮಿಗೆ ಬಿತ್ತು. ಸೈನಿಕನು ಜಿಗಿದು ನಿಂತನು. ಗಿಡದ ಬುಡದಲ್ಲಿ ನಿಂತ ಜನರು ಓಡಿ ಬಂದು ಅವನ ಮೇಲೆ ಬಡಿಗೆ-ಖಡ್ಗಗಳನ್ನೆತ್ತಿದರು. ಕೈಗೆ ಕೈಹತ್ತಿತು. ಸೈನಿಕನು ಒಬ್ಬನು; ಆಕ್ರಮಣಗಾರರು ಹತ್ತೆಂಟು ಜನರು. ಹೀಗಾಗಿ ಆ ಯುದ್ಧವು ಸೈನಿಕನಿಗೆ ಅಪಾಯವನ್ನುಂಟು ಮಾಡುವಂತೆ ಕಾಣ ತೊಡಗಿತು. ಅವನು ಒಳ್ಳೆಯ ಪ್ರತಾಪಶಾಲಿಯಿದ್ದುದರಿಂದ ಕೆಲಹೊತ್ತು ಬಡಿದಾಡಿದನು. ಅಷ್ಟರಲ್ಲಿ ಆ ತಂಡದೊಳಗಿನವನೊಬ್ಬನು ಹಿಂದಿನಿಂದ ಬಂದು ಆ ಸೈನಿಕನ ತಲೆಯ ಮೇಲೆ ಬಡಿಗೆಯಿಂದ ಬಲವಾಗಿ ಹೊಡೆದನು. ಆ ಪೆಟ್ಟಿ

ನಿಂದ ಅವನು ಮೂರ್ಛೆಗೊಂಡು ಭೂಮಿಗೆ ಬಿದ್ದನು. ತಂಡದ ಜನರು ಆ ಸೈನಿಕನ ಜೇಬುಗಳನ್ನು ಶೋಧಿಸತೊಡಗಿದರು. ಕೆಲವರು ಅವನ ತಲೆಯ ಮೇಲಿನ ರೇಶಿಮೆಯ ವಸ್ತ್ರ, ಟೊಪ್ಪಿಗೆ ಅಂಗಿಗಳನ್ನು ತೆಗೆದುಕೊಳ್ಳತೊಡಗಿದರು. ಅಷ್ಟರಲ್ಲಿ ಹಂಬೀರರಾಯನು ಅಲ್ಲಿಗೆ ಬಂದು:-"ನರಾಧಮರೆ, ದೂರ ಸರಿಯಿರಿ; ಮೂರ್ಛೆಹೊಂದಿ ಬಿದ್ದ ಸೈನಿಕನ ಸುಲಿಗೆ ಮಾಡತೊಡಗಿರುವಿರಾ? ಅವನನ್ನು ಮುಟ್ಟಿದರೆ ನಿಮ್ಮ ರುಂಡವನ್ನೇ ಕಡಿದು ಹಾಕುವೆನು!" ಎಂದು ಗರ್ಜಿಸಿದನು.

"ಹೊಸ ಬೇಟೆ ದೊರೆಯಿತು! ಹೊಸಬೇಟೆ ದೊರೆಯಿತು!" ಎಂದು ಆ ಕಳ್ಳರು ಕೂಗುತ್ತ ಆ ಸೈನಿಕನನ್ನು ಬಿಟ್ಟು ಹಂಬೀರರಾಯನ ಮೇಲೇರಿ ಹೋದರು. ಹಂಬೀರರಾಯನು ಆ ಕಳ್ಳರ ಗುಂಪಿನಲ್ಲಿ ಮುಗಿಬಿದ್ದು ಖಡ್ಗದಿಂದ ಅವರನ್ನು ಕಡಿಯತೊಡಗಿದನು. ಅಷ್ಟರಲ್ಲಿ ಶಂಭುವೂ ಅಲ್ಲಿಗೆ ಬಂದನು. ಇಬ್ಬರೂ ಕಳ್ಳರೊಡನೆ ಕಾಳಗ ನಡೆಯಿಸಿದರು. ಸ್ವಲ್ಪವೇಳೆಯಲ್ಲಿ ನಾಲ್ಕೈದು ಜನ ಕಳ್ಳರು ಭೂಮಿಗೆ ಬಿದ್ದರು. ಈ ಅವಸ್ಥೆಯನ್ನು ನೋಡಿ ಬೆದರಿ, ಉಳಿದ ಕಳ್ಳರು-ಕಾಲಿಗೆ ಬುದ್ಧಿ ಹೇಳಿದರು.

ಅನಂತರದಲ್ಲಿ ಹಂಬೀರರಾಯನು ಶಂಭುವನ್ನು ಕುರಿತು—"ಶಂಭೂ, ನೀನು ಆ ಸೈನಿಕನನ್ನು ಉಪಚರಿಸು. ಬಹಳ ಮಾಡಿ ಅವನು ಗತಾಸುವಾಗಿಲ್ಲ; ಬವಳಿ ಬಂದು ಬಿದ್ದಂತೆ ತೋರುವದು." ಎಂದು ನುಡಿದು, ಕುದುರೆಯಿಂದಿಳಿದು ಅದನ್ನು ಒಂದು ಗಿಡಕ್ಕೆ ಕಟ್ಟಿಹಾಕಿ ಸೈನಿಕನ ಬಳಿಗೆ ಹೋದನು. ಶಂಭುವು ಬಳಿಯಲ್ಲಿದ್ದ ಝರಿಯಲ್ಲಿ ನೀರು ತಂದು ಆ ಸೈನಿಕನನ್ನು ಉಪಚರಿಸತೊಡಗಿದನು. ಕೆಲವು ಹೊತ್ತಿನ ಮೇಲೆ ಅವನು ಮೂರ್ಛೆ ತಿಳಿದು ಕಣ್ಣು ತೆರೆದನು. ಅನಂತರದಲ್ಲಿ ಅವನು ಹಂಬೀರರಾಯನ ಕಡೆಗೆ ನೋಡಿ:—"ನೀವು ಯಾರು?" ಎಂದು ವಿಚಾರಿಸಿದನು.

"ನಾನು ಮಾನಾಜಿರಾಯರ ಜಮಾದಾರನು. ಘಾಕಡೆ ಮಾನಾಜಿರಾಯರು ಶಿವಾಜಿಮಹಾರಾಜರ ಸರದಾರರೆಂಬದು ನಿಮಗೆ ಗೊತ್ತಿರಬಹುದು"

"ಕೇಳಿರುವೆನು." ಎಂದು ಆ ಸೈನಿಕನು ನುಡಿದು, ಕಳ್ಳರು ದಾರಿಯಲ್ಲಿ ಅಡ್ಡ ಹಗ್ಗವನ್ನು ಕಟ್ಟಿದ್ದರು. ಆ ಹಗ್ಗವನ್ನು ಎಡವಿ ಕುದುರೆ ನೆಲಕ್ಕೆ ಬಿತ್ತು. ಕುದುರೆಯು ಬೀಳದಿದ್ದರೆ ನಾನು ಕಳ್ಳರ ಕೈಗೂ ನಿಮ್ಮ ಕೈಗೂ ಸಿಗುವ ಸಂಭವವಿರಲಿಲ್ಲ. ನೀವು ಶತ್ರುಪಕ್ಷದವರಾದರೂ ಕಳ್ಳರ ಪಾರುಪತ್ಯ ಮಾಡಿ ನನ್ನನ್ನು ಪಾರುಮಾಡಿದಿರಿ. ನಿಮ್ಮ ಉಪಕಾರವನ್ನು ನಾನೆಂದೂ ಮರೆಯೆನು."

"ಇವರಲ್ಲಿ ಉಪಕಾರವೇತರದು? ಸಂಕಟದಲ್ಲಿ ಬಿದ್ದವರು ಶತ್ರುಗಳಿರಲಿ ಮಿತ್ರರಿರಲಿ ಅವರನ್ನು ಪಾರು ಮಾಡುವದು ಮನುಷ್ಯಧರ್ಮವಾಗಿದೆ."

"ನಾನಾಗಿದ್ದರೆ ಇಂಥ ಕೆಲಸ ಮಾಡುತ್ತಿದ್ದೆನೋ ಇಲ್ಲವೋ! ಶತ್ರುವು ನಿರಾಯಾಸವಾಗಿ ಸಾಯುತ್ತಿರಲು, ಏಕೆ ಸಾಹಸ ಮಾಡಬೇಕೆಂದು ಸುಮ್ಮನಿರುತ್ತಿದ್ದೆನು."

"ನೀವು ಯಾರೆಂಬದನ್ನು ತಿಳಿಸಲಿಲ್ಲವಲ್ಲ?"

"ವಿಜಾಪುರದ ಅದಿಲಶಾಹಿಯೊಳಗಿನ ಬಾಜೀರಾಯ ಘೋರಪಡೆಯೆಂಬ ಸರದಾರರ ಹೆಸರನ್ನು ನೀವು ಕೇಳಿರಬಹುದು. ಆ ಸರದಾರರ ಕೈಕೆಳಗಿನ ಜಮಾದಾರನು ನಾನು. ನನ್ನ ಹೆಸರು ರಾವಜಿ ಘೋರಪಡೆಯೆಂದಿರುವದು'

"ಹಾಗಿದ್ದರೆ ನಿಮ್ಮ ಮಾತು ಸರಿಯಾಗಿದೆ. ಅಧರ್ಮದ ರಾಜ್ಯದಲ್ಲಿ ಅಧರ್ಮದಿಂದ ಆಚರಿಸುವವರಾದ ನೀವು ಧರ್ಮದ ಸೂಕ್ಷ್ಮ ವಿಚಾರ ಮಾಡುವ ಸಂಭವವಿಲ್ಲ. ನೀವು ಯಾರಿದ್ದರೂ, ಕಳ್ಳರ ಕೈಯಲ್ಲಿ ಸಿಲುಕಿ ಜೀವ ಮರಣ ಸಮಸ್ಯೆಯಲ್ಲಿದ್ದಾಗ ನಾವು ಸ್ವಸ್ಥವಾಗಿದ್ದರೆ, ಮಹಾರಾಜರ ಧರ್ಮದ ಸ್ವರಾಜ್ಯದಲ್ಲಿ ದೊಡ್ಡ ಅಪರಾಧಿಗಳೆಂದು ಗಣಿಸಲ್ಪಡುವೆವು. ಇಷ್ಟರಿಂದ ಸ್ವರಾಜ್ಯ ಯವನ ರಾಜ್ಯಗಳೊಳಗಿನ ಭೇದವನ್ನು ಕಲ್ಪಿಸಿರಿ. ಕೇವಲ ಅನ್ಯಾಯ ಅನೀತಿಗಳೇ ನಿಮ್ಮಲ್ಲಿ ಮನೆಮಾಡಿಕೊಂಡಿರುವ ಮೂಲಕ ನಿಮ್ಮಲ್ಲಿ ಧರ್ಮಾಧರ್ಮ ವಿಚಾರಗಳು ಹುಟ್ಟುವದಿಲ್ಲ. ಸ್ವರಾಜ್ಯವೆಂದರೆ ಧರ್ಮದ ರಾಜ್ಯ. ಅಲ್ಲಿ ಅಧರ್ಮಕ್ಕೆ ಎಡೆಯಿಲ್ಲ. ಇಂಥ ಧರ್ಮದ ರಾಜ್ಯವು ಭಾರತ ಭೂಮಿಯಲ್ಲಿ ಪ್ರಸ್ಥಾಪಿತವಾಗಬೇಕೆಂದು ಮಹಾರಾಜರ ಅಹರ್ನಿಶಿ ಪ್ರಯತ್ನವಿದೆ. ಮಹಾರಾಜರ ಸ್ವರಾಜ್ಯ ಸಂಸ್ಥಾಪನೆಯ ಗುಟ್ಟೇನು, ಯವನರಾಜರ ರಾಜ್ಯಸ್ಥಾಪನೆಯ ಗುಟ್ಟೇನು ಮೊದಲಾದ ವಿಚಾರಗಳನ್ನು ಮನಸ್ಸಿನಲ್ಲಿ ತಾರದೆ ಕೇವಲ ಸ್ವಾರ್ಥದ ಬೆನ್ನು ಹತ್ತಿ, ಸಮಾಜವನ್ನೇ ಕಿಂಬಹುನಾ ಭಾರತ ದೇಶವನ್ನೇ ಅಧೋಗತಿಗೆ ಎಳೆಯುವ ನಿಮ್ಮಂಥ ಹಿಂದುಗಳು ನಿಜವಾಗಿಯೂ ಯವನರಿಗಿಂತಲೂ ಕ್ರೂರರು. ನೀವೊಬ್ಬರು ಜಮಾದಾರಿಕೆ ಮಾಡಬಹುದು; ಸರದಾರಿಕೆ ಮಾಡಬಹುದು; ಅಮಾತ್ಯರಾಗಬಹುದು; ಮಂಡಲೇಶ್ವರರೂ ಆಗಬಹುದು; ಆದರೆ ನಿಮ್ಮ ಮಕ್ಕಳು-ಮರಿಗಳು ಆಪ್ತೇಷ್ಟರು ಅಕ್ಕತಂಗಿಯರು ಮೊದಲಾದವರು ಯಾವ ಸ್ಥಾನಕ್ಕೆ ಬರುತ್ತಾರೆ, ಭಾವೀಕಾಲದಲ್ಲಿ ಹಿಂದುಗಳ ಅವಸ್ಥೆಯೇನು, ನಮ್ಮ ಮಾತೃಭೂಮಿಯು ಈ ಘಟನೆಗಳಿಂದ ಎಂಥ ದುರ್ದಶೆಗೆ

ಈಡಾಗಬಹುದು ಮೊದಲಾದ ವಿಚಾರಗಳನ್ನು ಮನಸ್ಸಿನಲ್ಲಿ ತಾರದೆ ಕೇವಲ ಜಪ ಸ್ವಾರ್ಥವನ್ನೇ ಬೆನ್ನುಹತ್ತಿದರೆ ಇತಿಹಾಸದಲ್ಲಿ ನಿಮ್ಮಂತಹ ಸ್ವಾಭಿಮಾನ ಶೂನ್ಯರ ಚರಿತ್ರವು ಅಚ್ಚ ಕರೀ ಮಸಿಯಿಂದ ಎದ್ದುಕಾಣುವಂತೆ ಬರೆಯಲ್ಪಡುವದರಲ್ಲಿ ಸಂದೇಹವಿಲ್ಲ. ನಿಮ್ಮ ಮನೆಯಲ್ಲಿ ಬೇರೊಬ್ಬರು ಅಧಿಕಾರ ನಡೆಯಿಸತೊಡಗಿದ್ದಾರೆ; ನಿಮ್ಮ ಆಸ್ತಿಗಳು ಅವರ ಪಾಲಾಗಿವೆ; ನಿಮ್ಮ ಧರ್ಮದ ವಿಡಂಬನೆಯಾಗುತ್ತಿದೆ; ನಿಮ್ಮ ಅಕ್ಕತಂಗಿಯರ ಶೀಲ-ಮಾನಗಳು ಹಾಳಾಗುತ್ತಲಿವೆ. ಇವೆಲ್ಲ ಸಂಗತಿಗಳನ್ನು ನೀವು ಸ್ವಾನಂದದಿಂದ ಸಹನೆ ಮಾಡುವಿರಾ? ನಿಮ್ಮಲ್ಲಿ ವೀರತೆಯಿಲ್ಲವೆ? ಸಾಹಸವಿಲ್ಲವೆ? ಸ್ವಾಭಿಮಾನವಿಲ್ಲವೆ? ಹೇಳಿರಿ, ನೀವು ಎಲ್ಲವನ್ನೂ ಮರೆತು ಪಾಷಾಣರಾಗಿರುವಿರಾ? ಇಂಥ ನಿಷ್ಕ್ರಿಯ ಜನರನ್ನು ಭಾರತ ಮಾತೆಯು ಯಾಕೆ ಹೆರಬೇಕು? ಇಂಥ ಮಾತೃಘಾತಕಿಗಳನ್ನು ಹೆರುವದಕ್ಕಿಂತ ಅವಳು ಬಂಜೆಯಾಗಿದ್ದರೆ ಏನು ತಪ್ಪಿತ್ತು? ಮಹಾರಾಜರು ಸ್ವರಾಜ್ಯಸ್ಥಾಪನೆ ಮಾಡುತ್ತಿದ್ದುದರ ಮರ್ಮವು ನಾಮಾಂಕಿತ ಜನರಿಗೂ ಕೂಡ ತಿಳಿಯದೆ ಹೋದದ್ದು ದೇಶದ ದುರ್ದೈವ!"

ಹಂಬೀರರಾಯನ ಅಂತಃಕರಣಪೂರ್ವಕವಾದ ಮಾತುಗಳು ರಾವಜಿ ಘೋರಪಡೆಯ ಮರ್ಮಸ್ಥಾನಕ್ಕೆ ತಗಲಿದವು. ಅವನ ಧರ್ಮಭಾವನೆಯು ರಾವಜಿಯ ಮನಸ್ಸಿನ ಮೇಲೆ ಮೊದಲೇ ಪರಿಣಾಮವನ್ನುಂಟು ಮಾಡಿತ್ತು. ಈಗ ಅವನ ಮಾತುಗಳಿಂದ ಚೆನ್ನಾಗಿ ವಿವೇಕೋದಯವಾಯಿತು. ಶಾಹೀ ರಾಜ್ಯದ ಪಡಿಕಟ್ಟು ಹೇಗಿದೆ? ಆ ಆಡಳಿತೆಯಿಂದ ನಮ್ಮ ಜನರಿಗಾಗುವ ಅನಿಷ್ಟವೇನು? ಆ ರಾಜ್ಯವು ಸ್ಥಿರಸ್ಥಾಯಿಯಾಗುವದಕ್ಕೆ ನಾವು ಹೇಗೆ ಕಾರಣೀಭೂತರಾಗತೊಡಗಿರುವೆವು? ಮೊದಲಾದವಿಚಾರಗಳು ಹುಟ್ಟಿ ಅವನ ಮನಸ್ಸು ತಲ್ಲಣಗೊಳ್ಳತೊಡಗಿತು. ಆಗ ಅವನು ಪಶ್ಚಾತ್ತಾಪವಾಣಿಯಿಂದ:—"ಸರದಾರರೇ, ನಿಮ್ಮ ಭಾಷಣದಿಂದ ನನ್ನಲ್ಲಿ ವಿವೇಕೋದಯವಾಯಿತು. ನಾನು ಇನ್ನು ಮೇಲೆ ಪರದಾಸ್ಯದಲ್ಲಿರುವದಿಲ್ಲ. ಮಾಡಿದರೆ ಸ್ವರಾಜ್ಯಸೇವೆಯನ್ನು ಮಾಡುವೆನು. ಸ್ವರಾಜ್ಯದ ಕಾರ್ಯಕ್ಕಾಗಿ ದೇಹವನ್ನು ಸವೆಯಿಸುವೆನು. ಇದೇ ನನ್ನ ಪ್ರತಿಜ್ಞೆಯೆಂದು ತಿಳಿಯಿರಿ"

ರಾವಜಿಯ ಮಾತಿನಿಂದ ಹಂಬೀರರಾಯನಿಗೆ ಸಂತೋಷವಾಯಿತು. ಮಹಾರಾಜರ ಉದಾತ್ತವಾದ ಧ್ಯೇಯದ ಪರಿಚಯವಾಗದ್ದರಿಂದ ರಾವಜಿಯಂಥ ಎಷ್ಟೋ ಜನರು ಪರದಾಸ್ಯದಲ್ಲಿ ಮಗ್ನರಾಗಿರುವರೆಂಬದು ಅವನಿಗೆ

ಗೊತ್ತಾಯಿತು. ಅನಂತರದಲ್ಲಿ ಅವನು ರಾವಜಿಯನ್ನು ಕುರಿತು:—"ಈಗ ಹೆಚ್ಚು ವಿಚಾರ ಮಾಡುತ್ತ ಕುಳಿತುಕೊಳ್ಳಲು ಅವಕಾಶವಿಲ್ಲ. ಮಾನಾಜಿರಾಯರ ಬಳಿಗೆ ಹೋದ ಮೇಲೆ ಎಲ್ಲ ಬಗೆಯ ಪರಿಷ್ಕಾರವಾಡೋಣ. ಮಾನಾಜಿರಾಯರು ಪ್ರಚಂಡಗಡವನ್ನು ಮುತ್ತತಕ್ಕವರಿದ್ದಾರೆ. ಆ ಕೆಲಸದಲ್ಲಿ ನಿಮ್ಮಿಂದ ನೆರವು ದೊರೆತರೆ ಒಳಿತಾಗುವದು. ಸ್ವರಾಜ್ಯ ಸೇವೆಯಲ್ಲಿ ದೇಹ ಸವೆಯಿಸಬೇಕೆಂದಿದ್ದ ನೀವು ಪ್ರಚಂಡಗಡದ ಮುತ್ತಿಗೆಯಲ್ಲಿ ಭಾಗವಹಿಸಿಯೇ ವಹಿಸುವಿರಿ!"

"ಪ್ರಚಂಡಗಡದ ಮೇಲೆ ದಾಳಿಯೆ?" ಎಂದು ವಿಸ್ಮಯದಿಂದ ರಾವಜಿಯು ಪ್ರಶ್ನೆಮಾಡಿದನು.

"ಹೌದು. ಇದರಲ್ಲಿ ಅಷ್ಟೇಕೆ ವಿಸ್ಮಯ?"

"ಪ್ರಚಂಡಗಡದ ಸರದಾರ ಪ್ರಚಂಡರಾಯನು ಅತ್ಯಂತ ಪ್ರಚಂಡನಿರುವನು. ಅವನು ಆದಿಲಶಾಹಿಗೂ ಮೀರಿದ್ದಾನೆ. ಶಾಹೀರಾಜ್ಯದಲ್ಲಿ ಅವನು ಅನೇಕ ಪುಂಡತನ ನಡೆಯಿಸಿದ್ದಾನೆ. ಅವನು ಆದಿಲಶಾಹಿಗೆ ಶತ್ರುವಿರುವದರಿಂದ ಅವನನ್ನು ಮುರಿಯುವದು ಅನುಚಿತವಾಗಲಿಕ್ಕಿಲ್ಲವೆ? ಅವನ ಉಪದ್ರವದಿಂದ ಶಾಹೀರಾಜ್ಯವು ಎಷ್ಟಾದರೂ ನಷ್ಟವಾಗುವದು. ಮಹಾರಾಜರು ಮಾಡುವ ಕೆಲಸವನ್ನೇ ಪ್ರಚಂಡರಾಯನು ಮಾಡುತ್ತಿರುವದರಿಂದ, ಅವನನ್ನು ಪರಾಭವಗೊಳಿಸುವದು ಹಿತಕರವೆನಿಸಲಿಕ್ಕಿಲ್ಲೆಂದು ನನ್ನ ಮತ." ಎಂದು ರಾವಜಿಯು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದನು.

"ರಾವಜಿರಾಯರೇ" ಗಂಭೀರರಾಯನು ವಿಚಾರಪೂರ್ವಕವಾಗಿ:—"ಪ್ರಚಂಡರಾಯನಲ್ಲಿ ಉದಾತ್ತವಿಚಾರಗಳಿಲ್ಲ. ಅವನ ಧ್ಯೇಯಸಾಧನೆಯೂ ಅನುಚಿತವಾದದ್ದಿವೆ. ಅವನು ಆದಿಲಶಾಹೀ ರಾಜ್ಯದಲ್ಲಿ ಕೊಲೆ-ಸುಲಿಗೆ ನಡೆಯಿಸುತ್ತಿರುವದೂ ಶಾಹೀ ಸೈನ್ಯದೊಡನೆ ಹೋರಾಡುವದೂ ನಿಜ; ಆದರೆ ಅವನು ಸ್ವರಾಜ್ಯದ ಜನರಿಗೆ ಕೂಡ ತೊಂದರೆ ಕೊಡುತ್ತ ನಡೆದಿರುವನು. ಅವನು ಯಾರ ಅಧಿಕಾರವನ್ನೂ ಮನ್ನಿಸುವದಿಲ್ಲ. ಯಾವನಾದರೂ ಶ್ರೀಮಂತನು ಇಲ್ಲವೆ ಸರದಾರನು ಕೈಯಲ್ಲಿ ಸಿಕ್ಕರೆ ಅವನಿಗೆ ಅಮಾನುಷ ಛಲನೆ ಮಾಡಿ ಕೊಲ್ಲುತ್ತಾನೆ; ಹಾದಿಗರನ್ನು ಸುಲಿಯುತ್ತಾನೆ. ಅವನಿಂದ ಸ್ವರಾಜ್ಯಕ್ಕೆ ತೊಂದರೆಯಿರುವ ಮೂಲಕ ಅವನನ್ನು ಪರಾಭವಗೊಳಿಸುವದು ಅತ್ಯವಶ್ಯವಿದೆ. ಅಂತೆಯೇ ಮಹಾರಾಜರು ಕರ್ನಾಟಕದ ಮೇಲಿನ ದಾಳಿಯ

ಮೊದಲನೆಯ ಪೆಟ್ಟನ್ನು ಪ್ರಚಂಡಗದ ಮೇಲೆ ಕೊಡಬೇಕೆಂದು ಆಜ್ಞೆ ವಿಧಿಸಿದ್ದಾರೆ."

ಮಹಾಜರ ಉದಾತ್ತ ವಿಚಾರಸರಣಿಯನ್ನು ನೋಡಿ ರಾವಜಿಗೆ ವಿಸ್ಮಯವಾಯಿತು. ಇಂಥ ಧ್ಯೇಯಗಳನ್ನು ನೋಡಿ ಮುಗ್ಧರಾಗುವದರಿಂದಲೆ ಸ್ವರಾಜ್ಯಸೇವೆಗಾಗಿ ಜನರು ಕಾಯಾವಾಚಾಮನಸ್ಸಿನಿಂದ ಸಾಹಸಪಡುತ್ತಿರುವರೆಂಬದರ ಮನವರಿಕೆಯು ಅವನಿಗಾಯಿತು. ಅವನು ಸಂತುಷ್ಟನಾಗಿ: "ಹಂಬೀರರಾಯರೆ, ಸ್ವರಾಜ್ಯಸೇವೆಗಾಗಿ ಸಂಧಿಯನ್ನು ಕಲ್ಪಿಸಿಕೊಟ್ಟದ್ದಕ್ಕಾಗಿ ನಿಮಗೆ ನಾನು ಅತ್ಯಂತ ಋಣಿಯಾಗಿರುವೆನು."

"ರಾವಜಿರಾಯರೆ, ಸ್ವರಾಜ್ಯಕಾರ್ಯವೆಂದರೆ, ಹಿಂದುಗಳೆಲ್ಲರ ಕಾರ್ಯವು. ಅಲ್ಲಿ ಕೆಲಸ ಮಾಡಲು ಪ್ರತಿಯೊಬ್ಬ ಹಿಂದುವಿಗೆ ಸಂಪೂರ್ಣ ಬಾಧ್ಯತೆಯುಂಟು. ಅಲ್ಲಿ ಯಾವನು ಹೇಗೆ ಹೇಗೆ ಕೆಲಸ ಮಾಡುವನೋ ಹಾಗೆ ಹಾಗೆ ಯಾವ ವಿಧದ ಭೇದವೂ ಇಲ್ಲದೆ ಉನ್ನತಿ ಹೊಂದುತ್ತ ನಡೆಯುವನು. ಸ್ವರಾಜ್ಯದ ಉನ್ನತಿಗಾಗಿ ಯಾವನಿಂದ ಎಷ್ಟು ಎಷ್ಟು ಸಾಹಸವಾಗುವದೋ ಅಷ್ಟು ಅಷ್ಟು ಅವನ ಉನ್ನತಿಯು ತಾನಾಗಿಯೇ ಆಗುತ್ತ ಹೋಗುವದು. ಇಂಥ ಸಮಾನ ಭಾವವು, ಇಂಥ ನಿಸ್ಪೃಹತೆಯ ದೃಶ್ಯವು ಸ್ವರಾಜ್ಯದ ಹೊರತು ಎಲ್ಲಿಯೂ ನೋಡಲಿಕ್ಕೆ ದೊರೆಯಲಾರದು."

ಹಂಬೀರರಾಯನು ಇಷ್ಟು ಹೇಳಿ, ತಾನು ಯಾರು, ಸ್ವರಾಜ್ಯ ಸೇವೆ ಮಾಡಲು ಹೇಗೆ ಅವಕಾಶ ದೊರೆಯಿತು, ತನ್ನಿಂದ ಯಾವ ಯಾವ ಕೆಲಸಗಳಾದಾವು ಮೊದಲಾದ ಎಲ್ಲ ಸಂಗತಿಗಳನ್ನು ಸಂಕ್ಷಿಪ್ತವಾಗಿ ಹೇಳಿದನು. ಅನಂತರದಲ್ಲಿ ಅವನು ಶಂಭು-ರಾವಜಿಯರೊಡನೆ ಪ್ರಚಂಡಗಡದ ಬಳಿಯಲ್ಲಿದ್ದ ಮಾನಾಜಿರಾಯನ ಶಿಬಿರದ ಕಡೆಗೆ ತೆರಳಿದನು.

ಹಂಬೀರರಾಯನು ಮಾನಾಜಿರಾಯನಿಗೆ ರಾವಜಿ ಘೋರ್ಪಡೆಯ ವಿಷಯವಾಗಿ ಎಲ್ಲ ಸಂಗತಿಯನ್ನು ತಿಳಿಸಿದನು. ಸ್ವರಾಜ್ಯಸೇವೆಗಾಗಿ ಒಬ್ಬ ಹೊಸ ಪ್ರತಾಪಶಾಲಿಯು ದೊರೆತದ್ದರಿಂದ ಮಾನಾಜಿರಾಯನಿಗೆ ಆನಂದವಾಗಿ ಹಂಬೀರರಾಯನ ಶ್ಲಾಘನೆ ಮಾಡಿದನು.

———

# ೧೭ ಪ್ರಚಂಡಗಡ.



ಪ್ರಚಂಡಗಡದ ಬಳಿಯ ವನಪ್ರದೇಶದಲ್ಲಿ ಫಾಕಡೆ ಮಾನಾಜಿರಾಯನ ಶಿಬಿರವಿತ್ತು. ಅವನ ಶಿಬಿರದಿಂದ ದುರ್ಗವೇನೂ ದೂರವಿರಲಿಲ್ಲ. ಅದು ಅವನ ಶಿಬಿರಕ್ಕೆ ಚೆನ್ನಾಗಿ ಕಾಣುತ್ತಿತ್ತು. ದುರ್ಗವನ್ನು ಹೇಗೆ ಸ್ವಾಧೀನ ಪಡಿಸಿಕೊಳ್ಳಬೇಕೆಂಬ ಯೋಚನೆಯಲ್ಲಿ ಅವನು ಮುಳುಗಿದ್ದನು. ಪ್ರಚಂಡ ಗಡವು ಗುಡ್ಡದ ಮೇಲಿನ ಕೋಟೆಯಾಗಿರಲಿಲ್ಲ. ಅದು ಒಂದು ಎತ್ತರವಾದ ಸ್ಥಳದಲ್ಲಿ ಕಟ್ಟಿದ ನೆಲಕೋಟೆಯು. ಕೋಟೆಯ ಒಡೆಯನಾಗಿದ್ದ ಪ್ರಚಂಡ ರಾಯನು ಆ ನೆಲಕೋಟೆಯನ್ನು ಅತ್ಯಂತ ಪ್ರಚಂಡವಾಗಿಯೇ ಕಟ್ಟಿಸಿದ್ದನು. ಅದು ಅತ್ಯಂತ ದುರ್ಭೇದ್ಯ ದುರ್ಗಗಳಲ್ಲೊಂದಾಗಿತ್ತು. ಕೋಟೆಯ ಬಾಗಿಲು ಸಹ ಒಳ್ಳೇ ಭದ್ರವಾದದ್ದಿತ್ತು. ಕೋಟೆಯ ಸುತ್ತಲೂ ಆಳವಾದ ಕಂದಕವಿತ್ತು. ಆ ಕಂದಕದ ತುಂಬ ನೀರು ತುಂಬಿರುತ್ತಿದ್ದು, ಒಂದೇ ಸ್ಥಳ ದಲ್ಲಿ ಕಟ್ಟಿಗೆಯ ಮಾರ್ಗವಿತ್ತು. ಆ ಮಾರ್ಗವು, ಅನಾವಶ್ಯಕವಿದ್ದ ವೇಳೆ ಯಲ್ಲಿ ತೆಗೆಯಲಿಕ್ಕೆ ಬರುವಂಥದಿತ್ತು. ಮಾನಾಜಿರಾಯನು ಕೋಟೆಯನ್ನು ಮುತ್ತಲು ಹೊರಟ ಸಂಗತಿಯು ಗುಪ್ತಚರರಿಂದ ಪ್ರಚಂಡರಾಯನಿಗೆ ತಿಳಿದ ಕೂಡಲೆ ಅವನು ಆ ಕಟ್ಟಿಗೆಯ ಸೇತುವೆಯನ್ನು ತೆಗೆದುಹಾಕಿದ್ದನು. ಒಳ ಗಿನ ಸೈನಿಕರು ಶತ್ರುಗಳ ದಾಳಿಯನ್ನು ನಿರೀಕ್ಷಿಸುತ್ತ ಕುಳಿತಿದ್ದರು. ಪ್ರಚಂಡ ರಾಯನು ದಾಳಿಯ ಪ್ರತೀಕಾರವನ್ನು ಯಾವ ಯಾವ ರೀತಿಯಿಂದ ಮಾಡ ಬೇಕೆಂಬದರ ಬಗ್ಗೆ ತನ್ನ ಸೈನಿಕರಿಗೆ ಗೊತ್ತುವಳಿ ಮಾಡತೊಡಗಿದ್ದನು. ಒಳಗೆ ಈ ಬಗೆಯ ವ್ಯವಸ್ಥೆ ನಡೆದ ಸಂಗತಿಯು ಮಾನಾಜಿಗೆ ಗೊತ್ತಾಗದೆ ಹೋಗಿರಲಿಲ್ಲ. ಯಾಕಂದರೆ ಪ್ರಚಂಡರಾಯನಿಗೆ ಅಂತಃಶತ್ರುಗಳು ವಿಶೇಷ ವಾಗಿದ್ದರು. ಇವನ ಆಳಿಕೆಯು ಎಲ್ಲರಿಗೂ ತಲೆಭಾರವಾಗಿತ್ತು. ಅಲ್ಲಿಯ ಜನರು ಅವನ ವರ್ಚಸ್ಸಿಗೂ ಕ್ರೂರತನಕ್ಕೂ ತಲೆಬಾಗಿದ್ದರಲ್ಲದೆ, ಅವನಿಗೆ ಅವನ ಪ್ರಜೆಗಳ ನೈತಿಕ ಬೆಂಬಲವಿರಲಿಲ್ಲ. ಗುಪ್ತಮಾರ್ಗವಾಗಿ ಕೋಟೆ ಯೊಳಗಿನ ಸೈನಿಕರಿಗೆ ಅನ್ನಸಾಮುಗ್ರಿ, ಶಸ್ತ್ರಸಾಮುಗ್ರಿಗಳನ್ನು ಪೂರೈಸುವ ಜನರು, ಪ್ರಚಂಡರಾಯನ ಗುಪ್ತಚರರು ಗುಪ್ತವಾಗಿ ಮಾನಾಜಿರಾಯನನ್ನು ಕಂಡು ಪ್ರಚಂಡರಾಯನ ಶಕ್ತಿಯೆಷ್ಟು, ಸೈನ್ಯದ ಅಳತೆಯೆಷ್ಟು, ಕೋಟೆ ಯನ್ನು ಭೇದಿಸುವ ರೀತಿ ಹೇಗೆ ಮೊದಲಾದ ಸಂಗತಿಗಳನ್ನು ತಿಳಿಸುತ್ತಿದ್ದರು.

ಪ್ರಚಂಡರಾಯನ ಪ್ರಚಂಡತರದ ಆಳಕೆಯೇ ಜನತೆಗೆ ಬೇಸರವನ್ನುಂಟು ಮಾಡಿದಾಗ ಇಂಥ ಘಟನೆಗಳು ನಡೆಯುವದು ಅಸ್ವಾಭಾವಿಕವಲ್ಲ. ಮಾನಾಜಿ ರಾಯನು ಈ ಒಡಕು ಜನರಿಂದ ಮನಸ್ವೀಯಾಗಿ ಲಾಭಹೊಂದತೊಡಗಿದ್ದನು. ಅಲ್ಲಿ ಬೀಡು ಬಿಟ್ಟ ಸ್ವಲ್ಪ ವೇಳೆಯಲ್ಲಿಯೇ ಕೆಲವು ಮಹತ್ವದ ಸಂಗತಿಗಳು ಅವನಿಗೆ ತಿಳಿದಿದ್ದವು. ಈ ವಿಷಯವಾಗಿ ಹಂಬೀರರಾಯನೊಡನೆ ವಿಚಾರ ವಿನಿಮಯ ಮಾಡಬೇಕಾಗಿದ್ದುದರಿಂದ ಅವನನ್ನು ಮಾನಾಜಿರಾಯನು ತನ್ನ ನಿವಾಸಕ್ಕೆ ಕರೆಯಿಸಿದನು.

ಮಾನಾಜಿರಾಯನು ರಾವಜಿ ಘೋರ್ಪಡೆಯ ಬಗ್ಗೆ ಹೆಚ್ಚಿನ ವಿಷಯ ತಿಳಿದುಕೊಳ್ಳಲು ಮನಸ್ಸು ಮಾಡಿದ್ದಿಲ್ಲ. ಹಂಬೀರರಾಯನ ಪ್ರಾಮಾಣಿಕ ಮತದ ಮೇಲೆ ನಂಬಿಗೆಯಿದ್ದುದರಿಂದ ಅವನ ಹೇಳಿಕೆಯ ಮೇರೆಗೆ ರಾವಜಿ ಯ ಬರುವಿಕೆಯು ಅವನಿಗೆ ಸಂಭ್ರಮವನ್ನೇ ಉಂಟುಮಾಡಿತ್ತು. ಹಂಬೀರ ರಾಯನಿಂದ ಸ್ವರಾಜ್ಯಸೇವೆಗೆ ಉಚ್ಚತರಗತಿಯ ವೀರರತ್ನಗಳು ದೊರೆಯ ತೊಡಗಿದ್ದರಿಂದ ಅವನ ವಿಷಯವಾಗಿ ಮಾನಾಜಿರಾಯನ ಮನಸ್ಸು ಒಳ್ಳೇ ಸಂತುಷ್ಟತೆ ಹೊಂದಿತ್ತು. ಪ್ರಚಂಡರಾಯನ ಜನರು ತಿಳಿಸಿದ ಸಂಗತಿಗಳಲ್ಲಿ ಯಾವ ಸಂಗತಿಗಳು ಪ್ರಚಂಡಗಡವನ್ನು ವಶಪಡಿಸಿಕೊಳ್ಳಲಿಕ್ಕೆ ಅನುಕೂಲ ವಾಗುವವೆಂಬುದರ ಬಗ್ಗೆ ಆಲೋಚಿಸುವದು ಮಾನಾಜಿರಾಯನ ಆದ್ಯಕರ್ತವ್ಯ ವಿದ್ದುದರಿಂದಲೂ ಅವನು ರಾವಜಿಯ ಬಗ್ಗೆ ಹೆಚ್ಚಾಗಿ ವಿಮರ್ಶಿಸಲು ಮನಸ್ಸು ಮಾಡಲಿಲ್ಲ. ಹಂಬೀರರಾಯನು ಬಂದ ಕೂಡಲೆ ಮಾನಾಜಿರಾಯನು:—
"ಹಂಬೀರ, ನೀನು ರಾಜಕಾರಣದಲ್ಲಿ ಪ್ರವೇಶಿಸಿದ ಕೆಲವೇ ದಿನಗಳಲ್ಲಿ ಒಳ್ಳೆಯ ಪ್ರಗತಿಹೊಂದಿರುವ ಮೂಲಕ ನಾನು ಸಂಭ್ರಮಗೊಂಡಿದ್ದೇನೆ. ಪ್ರಚಂಡ ಗಡವನ್ನು ಸ್ವಾಧೀನಪಡಿಸಿಕೊಳ್ಳುವ ಬಗ್ಗೆ ನಾನೊಂದು ಯೋಜನೆಯನ್ನು ಸಿದ್ಧಪಡಿಸಿದ್ದೇನೆ. ಆ ಯೋಜನೆಯು ನಿನ್ನ ಮನಸ್ಸಿಗೆ ಸಮಂಜಸವಾಗು ವದೋ ಇಲ್ಲವೋ ಎಂಬದನ್ನು ತಿಳಿಯಲು ನಿನ್ನನ್ನು ಕರೆಯಿಸಿರುವೆನು. ನನ್ನ ಯೋಜನೆಯನ್ನು ನಾನು ಹಿಂದಿನಿಂದ ನಿನಗೆ ಹೇಳಿಯೇ ಹೇಳುವೆನು. ಪ್ರಚಂಡಗಡವನ್ನು ಯಾವ ಹಂಚಿಕೆಯಿಂದ ಸುಲಭವಾಗಿ ಗೆಲ್ಲಬಹುದೆಂಬ ಬಗ್ಗೆ ನಿನ್ನ ಮತವೇನುಂಟು?"

ಮಾನಾಜಿರಾಯನ ಈ ಪ್ರಶ್ನೆಯಿಂದ ಹಂಬೀರರಾಯನು ವಿಸ್ಮಿತನಾದನು. ಶಿವಪ್ರಭುಗಳ ಗರಡಿಯಲ್ಲಿ ನುರಿತ ನಾಮಾಂಕಿತ ಯೋಧನೂ, ಅನೇಕ ಸಂಗ್ರಾ

ಮುಗಳನ್ನು ಮಾಡಿ ಪ್ರಚಂಡಗಡಕ್ಕಿಂತ ಹೆಚ್ಚಿನ ದುರ್ಗ-ಕೋಟೆಗಳನ್ನು ಕೈವಶಮಾಡಿಕೊಂಡವನೂ ಆದ ಮಾನಾಜಿರಾಯನ ಈ ಪ್ರಶ್ನೆಯು ಹಂಬೀರರಾಯನನ್ನು ಬೆರಗುಗೊಳಿಸಿದ್ದರಲ್ಲಿ ಆಶ್ಚರ್ಯವಿಲ್ಲ. ಪರೀಕ್ಷೆಗಾಗಿಯೋ ಕೌತುಕದ ಸಲುವಾಗಿಯೋ ಹೀಗೆ ಕೇಳಿರಬೇಕೆಂದು ಅವನು ತಿಳಿದು, ಮಾನಾಜಿರಾಯನನ್ನು ಕುರಿತು:—"ಕಾಕಾಸಾಹೇಬರೆ, ಇಂಥ ಗಹನ ವಿಷಯಗಳು ನನ್ನ ಅಲ್ಪಮತಿಗೆ ತೋಚವು. ತಾವು ಕೌತುಕಕ್ಕಾಗಿ ಕೇಳುತ್ತಿದ್ದರೆ ನಾನಾದರೂ ಏನಾದರೊಂದು ಹೇಳಿದರೆ ಕೌತುಕಕ್ಕಾಗಿಯೆ ಹೇಳಬಹುದು. ಒಂದು ವೇಳೆ ನನ್ನ ಪರೀಕ್ಷೆಗಾಗಿ ಕೇಳುತ್ತಿದ್ದರೆ ಇಂಥ ಗಹನ ರಾಜಕಾರಣದಲ್ಲಿ ನಾನೆಂದೂ ತೇರ್ಗಡೆ ಹೊಂದಲಾರೆನೆಂಬದು ನನಗೆ ತಿಳಿಯುತ್ತಿದೆ."

"ಹಂಬೀರ," ಮಾನಾಜಿರಾಯನು ನಸುನಗುತ್ತ:—"ನಾನು ಪರೀಕ್ಷೆಗಾಗಿಯೂ ಹೀಗೆ ಕೇಳಿಲ್ಲ; ಕೌತುಕದ ಸಲುವಾಗಿಯೂ ಕೇಳಿಲ್ಲ. ರಾಜಕಾರಣವು ಗಹನವಾದದ್ದಿದೆ. ಆದ್ದರಿಂದ ಬೇರೆ ಸ್ವಕೀಯರ ವಿಚಾರಗಳನ್ನು ತಿಳಿದುಕೊಂಡು ನಮ್ಮ ವಿಚಾರಗಳಿಗೆ ಹೋಲಿಸಿ ನೋಡಬೇಕು. ಅವುಗಳಲ್ಲಿ ಯಾವದು ಸಯುಕ್ತಿಕವೋ ಅದರಂತೆ ನಡೆಯುವದು ವಿಹಿತವಾದದ್ದು. ನಾವು ಅನುಭವಿಕರು, ನಮ್ಮ ಮತವೇ ಸರ್ವ ಸಮ್ಮತವು; ನಾವು ವರಿಷ್ಠರು ಮೊದಲಾದ ವಿಚಾರಗಳನ್ನು ಮನಸ್ಸಿನಲ್ಲಿ ತಂದುಕೊಂಡು ಏಕದೇಶೀಯ ಆಚರಣೆಯನ್ನು ರಾಜಕಾರಣದಲ್ಲಿ ಮಾಡಲಾಗದು. ನೀನು ಚಿಕ್ಕವನಿದ್ದರೂ, ರಾಜಕಾರಣದಲ್ಲಿ ಇದೀಗ ಪ್ರವೇಶ ಮಾಡಿದವನಿದ್ದರೂ ಪ್ರಸಂಗವಿಶೇಷದಲ್ಲಿ ನನ್ನಂಥವನು ಕೂಡ ನಿನ್ನ ಮತವನ್ನು ತೆಗೆದುಕೊಳ್ಳುವಂಥ ಪಾತ್ರತೆ ನಿನ್ನಲ್ಲಿ ಬಂದಿದೆ. ಆದ್ದರಿಂದಲೇ ನಿನ್ನನ್ನು ವಿಚಾರಿಸಿದ್ದು. ಪ್ರಚಂಡಗಡವು ಸುಲಭವಾಗಿ ವಶವಾಗಲು ಉಪಾಯವೇನೆಂಬದನ್ನು ತಿಳಿಸು ನೋಡೋಣ"

"ಕಾಕಾಸಾಹೇಬರೆ, ನನ್ನ ಮತವು ಕೆಲಸಕ್ಕೆ ಬಾರದ್ದಾಗಬಹುದೆಂಬದು ನನಗೆ ತಿಳಿದಿದೆ; ಆದರೆ ನಿಮ್ಮಂಥ ಹಿರಿಯರ ಪ್ರಶ್ನೆಗೆ ಉತ್ತರ ಕೊಡದಿರುವದು ಅನುಚಿತವಾಗಬಹುದು." ಎಂದು ಹಂಬೀರರಾಯನು ನುಡಿದು, ಸ್ವಲ್ಪಹೊತ್ತು ಯೋಚಿಸಿ:—"ಪ್ರಚಂಡಗಡವು ನೆಲಕೋಟೆಯಾದರೂ ಅತ್ಯಂತ ಭದ್ರವಾಗಿದೆ. ಸುತ್ತಲಿನ ಕಂದಕವು ಬಹಳೇ ಆಳವಾದದ್ದೂ ಅಗಲವಾದದ್ದೂ ಇರುವದು. ಕಂದಕ ದಾಟಲು ಇದ್ದ ಸೇತುವೆಯು ಈಗ ತೆಗೆದು ಹಾಕಲ್ಪಟ್ಟಿದೆ. ಆ ಕಂದಕವನ್ನು ಕಲ್ಲು-ಕಟ್ಟಿಗೆಗಳಿಂದ ತುಂಬಿ ದಾರಿಯನ್ನು ಮಾಡಬೇಕು. ಈ ಕೆಲ

ಸವು ಸಾಹಸಪ್ಪದ್ದೇನೋ ನಿಜವು; ಆದರೆ ಹಾಗೆ ಮಾಡದೆ ಹೋದರೆ ಕೋಟೆ ಯನ್ನು ತಲುಪುವದೇ ಅಸಾಧ್ಯವಾಗುವದು. ಈ ಕಾರ್ಯ ಮಾಡಿಸುವಾಗ ಶತ್ರುಗಳಿಂದ ಪ್ರಬಲವಾದ ಪ್ರತೀಕಾರವಾಗುವಷ್ಟು ನಿಜವು. ಆದರೂ ನಾವು ಅದನ್ನು ಲೆಕ್ಕಿಸದೆ ಕಾರ್ಯಸಿದ್ಧಿಮಾಡಿಕೊಳ್ಳಬೇಕು. ಇಷ್ಟು ಕೆಲಸವಾದರೆ ಅರ್ಧ ಕೆಲಸವಾದಂತಾಗುವದು. ಇನ್ನುಳಿದ ಕೆಲಸವು ಕಠಿಣವಾದದ್ದಾದರೂ ಪ್ರಯತ್ನಕ್ಕೆ ಸಾಧ್ಯವಿದೆ. ಕೋಟೆಯ ಬಾಗಿಲನ್ನು ಒಡೆದು ಒಳಗೆ ಪ್ರವೇಶಿಸಿದ ಮೇಲೆ ನಮಗೆ ವಿಜಯವು ನಿಶ್ಚಿತವಾಗಿ ಲಭಿಸುವದು. ಈ ಕಾರ್ಯದಲ್ಲಿ ಯಶಸ್ಸು ಲಭಿಸದೆ ಹೋದರೆ ಪ್ರಚಂಡರಾಯನ ಅಂತಃಶತ್ರುಗಳಿಂದ ಲಾಭ ಮಾಡಿಕೊಳ್ಳಲು ಅವಕಾಶವಿದೆ."

ಹಂಬೀರರಾಯನ ವಿಚಾರಗಳನ್ನು ಕೇಳಿ ಮಾನಾಜಿರಾಯನಿಗೆ ಆನಂದ ವಾಯಿತು. ಆಗ ಅವನು:-"ಹಂಬೀರ, ನಿನ್ನ ಅಭಿಪ್ರಾಯವು ನನ್ನ ಅಭಿಪ್ರಾಯ ದಂತೆಯೆ ಇದೆ; ಆದರೆ ಕೋಟೆಯ ಬಾಗಿಲು ಮಾತ್ರ ಒಡೆಯಲು ಅಸಾಧ್ಯ ವಿರುವದೆಂಬ ಸಂಗತಿಯು ಪ್ರಚಂಡರಾಯನ ಅಂತಃಶತ್ರುಗಳಿಂದ ತಿಳಿದಿದೆ."

"ಹಾಗಾದರೆ ಕೋಟೆಯ ಕಂದಕವನ್ನು ಕಟ್ಟಿಗೆಗಳಿಂದ ಮುಚ್ಚಿಸುವ ಕೆಲಸವನ್ನು ಪ್ರಾರಂಭಿಸುವೆನು."

"ಪ್ರಾರಂಭಿಸಬಹುದು. ಈ ಕೆಲಸ ಮಾಡುವಾಗ ಶತ್ರುಗಳು ಕೋಟೆ ಯಿಂದ ಬಾಣ ಹೊಡೆಯುವರು; ಕಲ್ಲು-ದುಂಡಿಗಳನ್ನು ಎಸೆಯುವರು. ಇವೆಲ್ಲ ಗಂಡಾಂತರಗಳಿಗೆ ಎದೆಗೊಟ್ಟು ಕೆಲಸ ಪೂರೈಸಲಿಕ್ಕೇಬೇಕು. ರಾವಜಿ ಘೋರ ಪಡೆಯು ಅತ್ಯಂತ ವಿಶ್ವಾಸದವನಿರುವನೆಂದು ಹೇಳಿದೆ. ಸ್ವಸಂತೋಷದಿಂದ ಒಪ್ಪಿದರೆ ಅವನನ್ನೂ ಸಹ ಈ ಕೆಲಸದಲ್ಲಿ ತೆಗೆದುಕೊಳ್ಳಲು ಅಡ್ಡಿಯಿಲ್ಲ."

ಮಾನಾಜಿರಾಯನು ಹೀಗೆ ನುಡಿಯುತ್ತಿರುವಾಗ ಸುಲಿಗೆಗಾರ ಧುಂಡ ಜಿಯು ಅಲ್ಲಿಗೆ ಬಂದು, ಮಾನಾಜಿರಾಯನಿಗೂ ಹಂಬೀರರಾಯನಿಗೂ ನಮ ಸ್ಕಾರ ಮಾಡಿ:—"ಸರದಾರಸಾಹೇಬರೆ, ಜಮಾದಾರಸಾಹೇಬರೆ, ಪ್ರಚಂಡ ಗಡವನ್ನು ವಶಮಾಡಿಕೊಳ್ಳುವ ಬಗ್ಗೆ ನೀವು ಬಹಳೇ ಯೋಚನೆಗೊಳಗಾದ ಸಂಗತಿಯು ನನಗೆ ತಿಳಿಯಿತು. ಈ ದುರ್ಗವು ಅಸಾಧಾರಣವಿರುವದರಿಂದಲೂ ಪ್ರಚಂಡರಾಯನು ಪ್ರಚಂಡನಿರುವದರಿಂದಲೂ ನಿಮಗೆ ಈ ಕಾರ್ಯ ಸಾಧಿ ಸಲು ಕಠಿಣವಾಗುವದೆಂಬ ಸಂಗತಿಯನ್ನು ಮಹಾರಾಜರು ಅರಿತು, ಆಯ ಕಟ್ಟಿನ ಸ್ಥಳಗಳ ಗೊತ್ತುವಳಿ ಮಾಡಿಕೊಡಬೇಕೆಂದು ನನಗೆ ಆಜ್ಞೆಮಾಡಿ

ಕಳಿಸಿದ್ದಾರೆ. ಕೋಟೆಯನ್ನು ಪ್ರವೇಶಿಸುವಂಥ ಆಯಕಟ್ಟಿನ ಸ್ಥಳಗಳು ಇರುವವು. ಒಂದು ನೆಲಮಾರ್ಗವೂ ಉಂಟು. ನಿಮ್ಮ ಯೋಜನೆಗಳೆಲ್ಲ ವ್ಯರ್ಥವಾದ ಮೇಲೆ ನಾನು ನನ್ನ ಯೋಜನೆಗಳನ್ನು ತಿಳಿಸುವೆನು. ನನ್ನ ಯೋಜನೆಗಳಿಂದ ಜಯವು ಕಟ್ಟಿಟ್ಟ ಮಾತಾದರೂ ಬಹಳ ಪ್ರಯಾಸಪಡಬೇಕಾಗುವದು; ಪ್ರಾಣಹಾನಿಯೂ ವಿಶೇಷವಾಗುವ ಸಂಭವವಿದೆ."

"ಘುಂಡಜಿ!" ಮಾನಾಜಿರಾಯನು ಹರುಷದಿಂದ:—"ನೀನು ಈ ವೇಳೆಯಲ್ಲಿ ಇಲ್ಲಿಗೆ ಬಂದದ್ದು ಹಿತವಾಯಿತು. ನೀನು ಪ್ರಚಂಡರಾಯನ ಸ್ನೇಹಿತನಿದ್ದೆ. ಅನೇಕ ಸಾರೆ ಈ ಕೋಟೆಯಲ್ಲಿ ತಿರುಗಾಡಿದವನಿರುವೆ. ಇಲ್ಲಿಯ ಆಯಕಟ್ಟಿನ ಸ್ಥಳಗಳ ಗೊತ್ತು ಮಾಡಿಕೊಂಡವನಿರುವೆ. ನನ್ನ ಯೋಜನೆಯಂತೆ ಕಾರ್ಯವು ಇದೀಗ ಪ್ರಾರಂಭವಾಗತಕ್ಕದ್ದಿದೆ. ನೀನು ಹಂಬೀರರಾಯನಿಗೆ ಸಹಕಾರಿಯಾಗಿ ಕೆಲಸ ಮಾಡು."

ಮಾನಾಜಿರಾಯನ ಆಜ್ಞೆಯನ್ನು ಘುಂಡಜಿಯು ಶಿರಸಾವಹಿಸಿದನು. ಮಾರನೆಯ ದಿನ ನಸುಕಿನಲ್ಲಿ ರಾಮಜಿ-ಘುಂಡಜಿ ಮೊದಲಾದವರು ಮುಂದಾಳುವಾಗಿ ಕೆಲಸ ಪ್ರಾರಂಭಿಸಿದರು. ಹಂಬೀರರಾಯನು ಮೇಲ್ವಿಚಾರಣೆಗೆ ನಿಂತನು. ದೊಡ್ಡ ದೊಡ್ಡ ಗಿಡಗಳನ್ನು ಕಡಿದು ತಂದು ಹಾಕಿ ಕಂದಕದಲ್ಲಿ ತುಂಬುವ ಕೆಲಸ ಸಾಗಿತು. ಮಾನಾಜಿರಾಯನ ಈ ಸಾಹಸವನ್ನು ನೋಡಿ ಪ್ರಚಂಡರಾಯನು ಬೆರಗಾದನು. ಅವನಾದರೂ ಅತ್ಯಂತ ಸಾಹಸಿಯೂ ಅಭಿಮಾನದವನೂ ಇದ್ದನು. ಶತ್ರುಗಳ ಈ ಕೆಲಸಕ್ಕೆ ಅಡ್ಡಿ ಮಾಡುವದಕ್ಕಾಗಿ ಅವನು ಪ್ರಯತ್ನ ನಡೆಯಿಸಿದನು. ಕೋಟೆಯಿಂದ ಬಾಣಗಳ ಮಳೆಬೀಳತೊಡಗಿತು. ಶಿಲಾವೃಷ್ಟಿಯೂ ನಡೆಯಿತು. ಕಂದಕವನ್ನು ಮುಚ್ಚುವ ಸೈನಿಕರಲ್ಲಿ ಎಷ್ಟೋ ಜನರು ಗತಾಸುವಾದರು; ಎಷ್ಟೋ ಜನರು ಗಾಯಗೊಂಡರು. ಮಾನಾಜಿರಾಯನು ಶತ್ರುಪ್ರತೀಕಾರ ಮಾಡಲು ತನ್ನ ಸೈನಿಕರಿಗೆ ಅಪ್ಪಣೆ ಮಾಡಿದನು. ಅವನ ಸೈನಿಕರು ವೈರಿಗಳ ಮೇಲೆ ಬಾಣ ಹೊಡೆಯತೊಡಗಿದರು. ಇಂಥ ಸಂಗ್ರಾಮದಲ್ಲಿ ಸಹ ಕಂದಕ ಮುಚ್ಚುವ ಕೆಲಸ ನಿಲ್ಲಲಿಲ್ಲ. ಕೆಲ ಹೊತ್ತಿನಲ್ಲಿ ಅದು ಪೂರಾ ಮುಚ್ಚಿತು. ಮಾನಾಜಿರಾಯನ ಸೈನಿಕರು ಕಂದಕವನ್ನು ದಾಟಿ ಕೋಟೆಯ ಬಾಗಿಲ ಬಳಿಗೆ ಬಂದರು.

ಮಾನಾಜಿರಾಯನ ಸೈನಿಕರು ಕೋಟೆಯ ಬಾಗಿಲಿಗೆ ಬಂದ ಕೂಡಲೆ ಅವರು ಕೊಡಲಿಗಳಿಂದ ಬಾಗಿಲನ್ನು ಕಡಿಯತೊಡಗಿದರು. ಆ ಬಾಗಿಲು

ಬಹಳೇ ವಪ್ಪವಿದ್ದು ಜಿಗಟು ಕಟ್ಟಿಗೆಯಿಂದ ಮಾಡಿದಂಥದಾಗಿತ್ತು; ಅಲ್ಲದೆ ಅದರ ತುಂಬ ಉದ್ದವಾದ ಮೊಳೆಗಳಿದ್ದವು. ಆದ್ದರಿಂದ ಕೊಡಲಿಯ ಪೆಟ್ಟಿನಿಂದ ಏನೂ ಪ್ರಯೋಜನವಾಗಲಿಲ್ಲ. ಆಗ ಹಂಬೀರರಾಯನು ಪೂರ್ವಯೋಜನೆಯ ಮೇರೆಗೆ ಮೊಳೆಗಳಿಗೆ ಅರಿವೆ ಸುತ್ತಿ ಎಣ್ಣೆ ಸುರುವಿ ಬೆಂಕಿಯನ್ನು ಹಚ್ಚಿದನು. ಈ ಯೋಜನೆಯು ಯಶಸ್ವಿಯಾಯಿತು. ಬಾಗಿಲು ಸುಟ್ಟು ಕಳಚಿಬಿತ್ತು. ಅದರ ಒಳಭಾಗದಲ್ಲಿ ಅಂಥದೇ ಮತ್ತೊಂದು ಬಾಗಿಲವಿತ್ತು, ಅದನ್ನೂ ಪದೂ ಸುಡುವ ಸಾಹಸವು ಪ್ರಾರಂಭವಾಗತಕ್ಕದ್ದಿತ್ತು. ಅಷ್ಟರಲ್ಲಿ ಒಂದು ಗುಪ್ತ ಮಾರ್ಗದಿಂದ ಒಬ್ಬ ಗೋಸಾವಿಯು ಮಾನಾಜಿರಾಯನ ಬಳಿಗೆ ಬಂದು "ಸರದಾರರೆ, ನೀವು ಕೋಟೆಯೊಡೆಯುವ ಸಾಹಸ ಮಾಡದೆ ಹೊರಡಲೊಪ್ಪಿದರೆ ನಮ್ಮ ಧನಿಯು ನಿಮಗೆ ಹೇರಳವಾದ ಕಾಣಿಕೆಯನ್ನೊಪ್ಪಿಸಲು ಸಿದ್ಧನಿರುವನು." ಎಂದು ಬಿನ್ನವಿಸಿಕೊಂಡನು.

ಗೋಸಾವಿಯ ಮಾತು ಕೇಳಿ ಮಾನಾಜಿರಾಯನು ಚಕಿತನಾದನು. ಈ ಭಗವೀವಸ್ತ್ರಧಾರಿಯು ಸಂಧಾನದೂತನಾಗಿ ಏಕೆ ಬಂದಿರಬಹುದು? ಇವನು ನಿಜವಾದ ಗೋಸಾವಿಯಿರಬಹುದೆ? ಇಲ್ಲದೆ ಮೋಸಗೊಳಿಸುವದಕ್ಕಾಗಿ ಈ ವೇಷವನ್ನು ಧರಿಸಿರಬಹುದೆ? ಮೊದಲಾದ ಆಲೋಚನೆಗಳು ಅವನಲ್ಲಿ ತಲೆದೋರಿದವು; ಆದರೆ ಅವನು ಆಗ ಭಗವೀವಸ್ತ್ರದ ಆ ಕಡೆಗೆ ಲಕ್ಷ್ಯಗೊಡದೆ ನಿಷ್ಠುರವಾಗಿ:—"ನಾನು ಇಲ್ಲಿಗೆ ಕಾಣಿಕೆಗಾಗಿ ಬಂದಿಲ್ಲ. ಕೋಟೆಯನ್ನು ನಮ್ಮ ವಶಕ್ಕೆ ಕೊಡಬೇಕು; ಮಹಾರಾಜರ ಕಡೆಯಿಂದ ಒಪ್ಪಂದದ ಕಟ್ಟಳೆಗಳು ಯಾವ ರೀತಿಯಿಂದ ಬರುವವೋ ಅವುಗಳಿಗೆಲ್ಲ ನಿಮ್ಮ ಧನಿಯು ಒಪ್ಪಬೇಕು."

"ಅಂದರೆ?" ಗೋಸಾವಿಯು ವಿಸ್ಮಯದಿಂದ:—"ಎಲ್ಲ ಸ್ವತ್ತನ್ನು ವಶಕ್ಕೆ ಕೊಟ್ಟು ದಾಸ್ಯದಲ್ಲಿರಬೇಕೆಂದು ನಿಮ್ಮ ಮಹಾರಾಜರ ಕಡೆಯಿಂದ ಸಂದೇಶ ಬಂದರೆ?"

"ಹಾಗೆಯೆ ನಡೆಯಲು ಸಿದ್ಧವಾಗಿರಬೇಕು."

"ಹೀಗೆ ಹಟ ಹಿಡಿಯುವದು ಒಳಿತಲ್ಲ. ನಮ್ಮ ಪ್ರಚಂಡರಾಯನು ಅತ್ಯಂತ ಪ್ರಚಂಡನಿರುವನು. ಅವನು ಸಂತಪ್ತನಾಗಿ ತನ್ನ ಶಕ್ತಿಸರ್ವಸ್ವವನ್ನು ನಿಮ್ಮ ಮೇಲೆ ಹಾಕಿದರೆ, ನಿಮ್ಮೊಳಗಿನ ಒಬ್ಬರೂ ಜೀವಂತ ಉಳಿಯಲಾರಿರಿ. ವಿಚಾರ ಮಾಡಿ ನೋಡಿರಿ. ಮಹಾರಾಜರ ಸ್ವಾಮಿತ್ವವೊಪ್ಪಿ ಕಪ್ಪುಕಾಣಿಕೆ ಕೊಡಲಿಕ್ಕೆ ನಮ್ಮ ಧನಿಯು ಸಿದ್ಧವಾಗಿರಲು, ನೀವು ಅವನ ಸರ್ವಸ್ವವನ್ನು

ದೋಚುವ ಯತ್ನ ಮಾಡಬೇಡಿರಿ. ನಿಮ್ಮ ಮನೋದಯವು ಸಿದ್ಧಿಸಲಾರದು. ಕೋಟೆಯಲ್ಲಿ ಹೇರಳ ಸೈನಿಕರಿದ್ದಾರೆ. ಅನೇಕ ಶಸ್ತ್ರಾಸ್ತ್ರಗಳಿವೆ. ಇಂಥ ಪ್ರಚಂಡ ವಾದ ಸೇನಾಶಕ್ತಿಗೆ ಎದುರಾಗಬೇಡಿರಿ. ವಿಚಾರ ಮಾಡಲಿಕ್ಕೆ ಇನ್ನೂ ಅವ ಕಾಶವಿವೆ; ಸಂಧಿಯಿದೆ. ಇದನ್ನು ವ್ಯರ್ಥವಾಗಗೊಡಬೇಡಿರಿ."

ಗೋಸಾವಿಯ ಮಾತು ಕೇಳಿ ಮಾನಾಜಿರಾಯನಿಗೆ ಸಿಟ್ಟು ಬಂತು. ಆಗ ಅವನು ಗಂಭೀರ ವಾಣಿಯಿಂದ:—ಗೋಸಾವಿ ಮಹಾರಾಜರೆ, ನಿಮ್ಮ ಭಗವೀ ವಸ್ತ್ರಗಳನ್ನು ನೋಡಿ ಸಂತಾಪವನ್ನು ತಡೆಹಿಡಿಯಬೇಕಾಗಿವೆ. ನಿಮ್ಮ ಒಡೆಯನಲ್ಲಿ ಸೇನಾಶಕ್ತಿಯಿದ್ದರೆ ಬೇಕಾದ ಹಾಗೆ ತೋರ್ಪಡಿಸಲಿಕ್ಕೆ ಸಂಧಿಯಿದೆ. ಅದಕ್ಕೆ ನಮ್ಮ ಆತಂಕವೇನೂ ಇರುವದಿಲ್ಲ. ನಿಮ್ಮ ಒಡೆ ಯನ ಕಾಣಿಕೆಯನ್ನಷ್ಟು ತೆಗೆದುಕೊಂಡು ಹೋಗುವದಕ್ಕಾಗಿ ಮಹಾರಾಜರು ನನ್ನನ್ನು ಕಳುಹಿಸಿರುವದಿಲ್ಲ. ನನ್ನ ಮನಸ್ಸಿಗೆ ತಿಳಿದ ಹಾಗೆ ಬಿಗಿ ಮಾಡ ಬೇಕೆಂದು ಅಪ್ಪಣೆಯಾಗಿವೆ. ಇಲ್ಲಿಯ ಪರಿಸ್ಥಿತಿ ನೋಡಲಾಗಿ ಪ್ರಚಂಡ ರಾಯನು ಅತ್ಯಂತ ಪ್ರಚಂಡನಿರುವನು. ಅವನು ಯಾವ ವಿಷಯದಲ್ಲಿ ಪ್ರಚಂಡನಿರುವನೆಂಬದು ನನಗೆ ಗೊತ್ತಾಗಿವೆ. ಸುಲಿಗೆ, ಕೊಳ್ಳೆ, ಕೊಲೆ ಮೊದಲಾದ ಕೆಲಸ ಮಾಡುತ್ತ ಪ್ರಜಾಜನರಿಗೆ ಯಮಸ್ವರೂಪಿಯಾಗಿದ್ದಾನೆ. ಇವನ ವಿಷಯವಾಗಿ ಇಲ್ಲಿಯ ಯಾವ ಸಜ್ಜನರಲ್ಲಿಯೂ ತಿಲಾಂಶವಾದರೂ ಆದರ-ಸಹಾನುಭೂತಿಗಳಿಲ್ಲ. ಇಂಥ ಮನುಷ್ಯನು ಪ್ರಜಾಜನರ ಮೇಲೆ ಯಾವ ವಿಧದ ಅಧಿಕಾರ ನಡೆಯಿಸಲಿಕ್ಕೂ ಅನರ್ಹನಿರುವನು. ಯಾವನು ಪ್ರಜೆಗಳ ಹಿತಗಳ ಕಡೆಗೆ ಲಕ್ಷ್ಯಗೊಡುವದಿಲ್ಲವೋ ಅವನು ದಂಡ ನಾರ್ಹನು; ಅಧಿಕಾರಾರ್ಹನಲ್ಲ. ಆದುದರಿಂದ ನಿನ್ನ ಒಡೆಯನಿಗೆ ಇಷ್ಟೇ ಸಂದೇಶ ತಿಳಿಸತಕ್ಕದ್ದು. ಅವನು ಎಲ್ಲ ಸೈನಿಕರನ್ನು ನಿಃಶಸ್ತ್ರಗೊಳಿಸಿ ಶರಣು ಬರತಕ್ಕದ್ದು; ನಾನು ಹೇಳುವ ರೀತಿಯಿಂದ ನಡೆಯಲು ಒಪ್ಪತಕ್ಕದ್ದು. ಮಹಾರಾಜರು ಪ್ರಚಂಡರಾಯನ ವಿಷಯಾಗಿ ನಿರ್ಣಯ ಮಾಡತಕ್ಕವರು. ಅವರ ನಿರ್ಣಯವೇ ಕೊನೆಯ ನಿರ್ಣಯ. ಇದಕ್ಕಿಂತ ಹೆಚ್ಚಿಗೆ ನಾನು ಏನನ್ನೂ ಹೇಳಲಾರೆನು."

"ನಿಮಗೆ ವಿನಾಶ ಕಾಲ ಸಮೀಪಿಸಿದೆ." ಎಂದು ಗೋಸಾವಿಯು ಮಾನಾಜಿರಾಯನ ಮಾತಿಗೆ ಉತ್ತರ ಕೊಟ್ಟವನೇ ಶೀಘ್ರ ಗತಿಯಿಂದ ತಿರುಗಿ ಹೋದನು.

ಗೋಸಾವಿಯು ಕೋಟೆಯನ್ನು ಸೇರಿದ ಕೆಲವು ವೇಳೆಯಲ್ಲಿ ಕೋಟೆಯ ಮೇಲಿನಿಂದ ಉರಿಯುವ ಪಂಜುಗಳು ಕಂದಕದಲ್ಲಿಯ ಕಟ್ಟಿಗೆಯ ರಾಶಿಯ ಮೇಲೆ ಬೀಳತೊಡಗಿದವು. ಆ ಪಂಜುಗಳು ಯಣ್ಣೆಯಲ್ಲಿ ಎದ್ದಿದವಿದ್ದುದರಿಂದ ಕೆಳಗಿನ ಕಟ್ಟಿಗೆಗಳಿಗೆ ಬೆಂಕಿಪತ್ತತೊಡಗಿತು. ಅಸಂಖ್ಯ ಪಂಜುಗಳಿಂದ ಆ ದಾರಿಯು ಜ್ವಾಲಾಮಯವಾಯಿತು. ಕೂಡಲೆ ಮೇಲಿನಿಂದ ಮಾನಾಜಿರಾಯನ ಸೈನಿಕರ ಮೇಲೆ ಶರವೃಷ್ಟಿ-ಪಾಷಾಣವೃಷ್ಟಿಯು ಪ್ರಾರಂಭವಾಯಿತು. ಹೀಗೆ ಒಮ್ಮೆಲೆ ಅದ್ಭುತವಾದ ಸಂಗ್ರಾಮವು ಪ್ರಾರಂಭವಾದದ್ದು ನೋಡಿ ಮಾನಾಜಿರಾಯನ ಸೈನಿಕರು ಬೆದರಿದರು. ಈ ಸಂಧಿಯಲ್ಲಿ ಇಲ್ಲಿಯೇ ಉಳಿದರೆ ಸರ್ವನಾಶವಾಗುವದೆಂಬ ಚಿನ್ಹವು ಮಾನಾಜಿರಾಯನಿಗೆ ತೋರಲಾರಂಭಿಸಿತು. ಕಂದಕದೊಳಗಿನ ಕಟ್ಟಿಗೆಗಳು ಸುಟ್ಟುಹೋದರ ಆಚೆಗೆ ಓಡಿ ಹೋಗಲು ಮಾರ್ಗ ಸಹ ದೊರೆಯದೆ ವ್ಯರ್ಥವಾಗಿ ಪ್ರಾಣನಾಶವಾಗುವದೆಂದು ಮಾನಾಜಿರಾಯನು ಬೆದರಿದನು. ಕೂಡಲೆ ಅವನು ತನ್ನ ಸೈನಿಕರಿಗೆ ಕಂದಕ ದಾಟಲು ಆಜ್ಞಾಪಿಸಿದನು. ಆ ಸೈನಿಕರು ಉರಿಯಲ್ಲಿಯೆ ದಾಟುತ್ತ ಎಲ್ಲರೂ ಆಚೆಯ ದಂಡೆಯನ್ನು ತಲುಪಿದರು. ಹಂಬೀರರಾಯನೂ ರಾವಜಿಯೂ ಸುಲಿಗೆಗಾರ ಧುಂಡಜಿಯೂ ಪ್ರಾಣಾಪಾಯವಾಗದಂತೆ ಯುಕ್ತಿಯಿಂದ ಎಲ್ಲ ಸೈನಿಕರನ್ನು ದಾಟಿಸಿದರು. ತನ್ನ ಸೈನಿಕರೆಲ್ಲರು ಯಶಸ್ವಿಯಾಗಿ ಹಿಂತಿರುಗಿದ್ದು ನೋಡಿ ಮಾನಾಜಿರಾಯನಿಗೆ ಸಂಭ್ರಮವಾಯಿತು. ಅವನು ಶತ್ರುಗಳ ಮೇಲೆ ಪ್ರತಿದಾಳಿಯನ್ನು ಹೇಗೆ ಪ್ರಾರಂಭಿಸಬೇಕೆಂಬ ಬಗ್ಗೆ ವಿಚಾರವಿನಿಮಯ ಮಾಡತೊಡಗಿದನು.

ಕಂದಕದೊಳಗಿನ ಕಟ್ಟಿಗೆಗಳೆಲ್ಲ ಸುಟ್ಟು ಹೋದುದರಿಂದ ಶ್ರಮಬಟ್ಟು ಸಿದ್ಧಪಡಿಸಿದ ಮಾರ್ಗವೇ ಹಾಳಾಗಿ ಹೋಯಿತು. ಮತ್ತೆ ಅಂಥ ಮಾರ್ಗವನ್ನು ಸಿದ್ಧಪಡಿಸುವದೆಂದರೆ ಒಳ್ಳೇ ಸಾಹಸದ ಮಾತಾಗಿತ್ತು; ಯಾಕಂದರೆ ಕೋಟೆಯೊಳಗಿನವರು ಜೀವದ ಹಂಗುದೊರೆದದ್ದರಿಂದ ಅವರ ಹೋರಾಟವು ಬಹಳೇ ತೀಕ್ಷ್ಣವಾಗಿತ್ತು. ಆದುದರಿಂದ ಕೋಟೆಯನ್ನು ಪ್ರವೇಶಿಸಲು ಯಾವದೊಂದು ವಿಶಿಷ್ಟ ಹಂಚಿಕೆಯನ್ನೇ ಹುಡುಕಬೇಕಾಗಿತ್ತು. ಸುಲಿಗೆಗಾರ ಧುಂಡಜಿಗೆ ಒಂದೆರಡು ಮಾರ್ಗಗಳು ಗೊತ್ತಿದ್ದವು; ಆದರೆ ಈಗ ಆ ಮಾರ್ಗಗಳ ಗುರುತುಗಳೇ ಬೇರೆಯಾಗಿ ಹೋದುದರಿಂದ ಅವನಿಗೆ ಯಾವ ಮಾರ್ಗದ ಶೋಧವೂ ಆಗಲಿಲ್ಲ. ಆಗ ಹಂಬೀರರಾಯನು ಧುಂಡಜಿಯನ್ನು ಕುರಿತು:-"ಧುಂಡಜಿ, ನೀನು

ಈ ಭಾಗದಲ್ಲಿ ಕೆಲಮಟ್ಟಿಗಾದರೂ ಪರಿಚಯದವನಿರುವೆ. ನೀನು ಸಮೀಪದ ಗ್ರಾಮಕ್ಕೆ ಹೋಗಿ ಕೋಟೆಯನ್ನು ಪ್ರವೇಶಿಸುವ ಗುಪ್ತಮಾರ್ಗವೆಲ್ಲಿರುವದೆಂಬದನ್ನು ಶೋಧಿಸಿ ಕೊಂಡು ಬಾ. ನಮ್ಮಲ್ಲಿಯ ಕೆಲ ಜನರಾದರೂ ರಾತ್ರಿಯಲ್ಲಿ ಕೋಟೆಯನ್ನು ಪ್ರವೇಶಿಸಿದರೆ ಮಹಾದ್ವಾರವನ್ನು ತೆರೆಯಲಿಕ್ಕೆ ಅನುಕೂಲವಾಗುವದು. ಇಲ್ಲಿಯ ಜನರು ಪ್ರಚಂಡರಾಯನ ವಿಷಯವಾಗಿ ಬಹಳೇ ಅಸಂತುಷ್ಟರಿರುವರು. ಅನ್ಯಾಯದ ಆಳಿಕೆಯು ಹೋಗಿ ಧರ್ಮರಾಜ್ಯವು ಸ್ಥಾಪನೆಯಾಗುವದೆಂಬ ಮಾತನ್ನು ಜನರಿಗೆ ಮನವರಿಕೆ ಮಾಡಿಕೊಟ್ಟು, ಅಲ್ಲಿಯ ಜನರ ಸಹಾನುಭೂತಿಯನ್ನು ಸಂಪಾದಿಸಿ, ಗುಪ್ತಮಾರ್ಗದ ಗೊತ್ತುವರಿ ಮಾಡಿಕೊಂಡು ಬರತಕ್ಕದ್ದು. ಪ್ರಜಾಪೀಡೆಯು ನಿವಾರಣೆಯಾಗುವ ಉಪಾಯವನ್ನು ತಿಳಿಸುವದೆಂದರೆ ಅದೇನೂ ಸ್ವಾಮಿದ್ರೋಹವಲ್ಲವೆಂಬ ಮಾತನ್ನು ಜನರಿಗೆ ಮನವರಿಕೆಯಾಗುವಂತೆ ಬೋಧಿಸು. ಈ ಎಲ್ಲ ಕಾರ್ಯಗಳು ಸಾಧ್ಯವಾದಮಟ್ಟಿಗೆ ಗುಪ್ತವಾಗಿಯೆ ನೆರವೇರತಕ್ಕದ್ದು. ಕೋಟೆಯು ಮಹಾರಾಜರ ಸ್ವಾಧೀನವಾದ ಮೇಲೆ ಈ ಭಾಗದಲ್ಲಿ ಪ್ರಚಂಡರಾಯನ ಅಸ್ತಿತ್ವವೇ ನಾಶವಾಗುವದೆಂದು ಎಲ್ಲರಿಗೂ ಖಂಡಿತವಾಗಿ ಹೇಳು. ನಿನ್ನ ನೆರವಿಗೆ ಬೇಕಾದರೆ ಘೋರ್ಪಡೆ ರಾವಜಿರಾಯರನ್ನು ಕರೆದೊಯ್ಯಬಹುದು."

ಹಂಬೀರರಾಯನ ಯೋಜನೆಯು ಮಾನಾಜಿರಾಯನಿಗೆ ಸಮ್ಮತವಾಯಿತು. ಅವನು ಈ ಕಾರ್ಯಕ್ಕೆ ಹಂಬೀರರಾಯನನ್ನು ಕಳಿಸಬೇಕೆಂದು ವಿಚಾರಿಸಿ:—"ಹಂಬೀರ, ಜನರ ಮನಸ್ಸನ್ನು ಒಲಿಸಿಕೊಳ್ಳಬೇಕಾದರೆ ನಿನ್ನಂಥ ಉಪದೇಶಕನ ಆವಶ್ಯಕತೆಯುಂಟು. ನೀನೂ ಹೋದರೆ ಆದಷ್ಟು ಬೇಗನೆ ಕಾರ್ಯವಾಗುವದೆಂದು ನನಗೆ ತೋರುವದು."

"ಕಾಕಾಸಾಹೇಬರ ಆಜ್ಞೆ ಶಿರಸಾವಮಾನ್ಯವಿದೆ; ಆದರೆ ಶತ್ರುದಾಳಿಗೆ ನೀವೊಬ್ಬರೆ ಎದೆಗೊಡಬೇಕಾಗುವದರಿಂದ ನಾನು ಇಲ್ಲಿಯೆ ಇರಬೇಕೆಂದು ವಿಚಾರಿಸಿದ್ದೆನು."

"ನೀನು ಇಲ್ಲಿಯ ಯೋಚನೆ ಬಿಟ್ಟು ಕಾರ್ಯ ಸಾಧನೆ ಮಾಡಿಕೊಂಡು ಬಾ. ನೀನು ಬರುವವರೆಗೆ ನಾನು ಶತ್ರುಗಳ ಪ್ರತೀಕಾರ ಮಾಡುತ್ತಲಿರುವೆನು." ಎಂದು ಮಾನಾಜಿರಾಯನು ಹಂಬೀರರಾಯನಿಗೆ ಹೇಳಿದನು.

ಹಂಬೀರರಾಯನು ಧುಂಡಜಿ ರಾವಜಿಯರೊಡನೆ ಪ್ರಚಂಡಗಡದ ಸಮೀಪದಲ್ಲಿದ್ದ ಗ್ರಾಮಕ್ಕೆ ಹೋದರು. ಮಹಾರಾಜರ ಪಡೆಯ ಅಧಿಕಾರಿಗಳು

ಬಂದುದನ್ನು ನೋಡಿ ಅಲ್ಲಿಯ ಪ್ರಮುಖರಿಗೆ ಬಹಳೇ ಸಂತೋಷವಾಯಿತು. ಸ್ವರಾಜ್ಯದ ವಿಷಯವಾಗಿ ಅಲ್ಲಿಯ ಅನೇಕ ಜನರ ಭಕ್ತಿಯಿದ್ದುದರಿಂದ ಅವರು ಒಕ್ಕೈಯ ಆದರದಿಂದ ಆ ಜನರನ್ನು ಬರಮಾಡಿಕೊಂಡರು. ಆಗ ಹಂಬೀರರಾಯನು ಸ್ವರಾಜ್ಯಸ್ಥಾಪನೆಯ ಉದ್ದೇಶ, ಮಹಾರಾಜರ ನ್ಯಾಯಸಮ್ಮತವಾದ ಆಡಳಿತ ಮೊದಲಾದವುಗಳನ್ನು ಅಲ್ಲಿಯ ಜನರಿಗೆ ತಿಳಿಸಿ ಹೇಳಿದನು. ಪ್ರಚಂಡರಾಯನು ಸ್ವಜನನಾದರೂ ಪರಕೀಯರಾದ ಯವನರಿಗಿಂತ ಕ್ರೂರನಿರುವನೆಂಬದರ ಬಗ್ಗೆ ಅಲ್ಲಿಯ ಜನರಿಗೆ ಅನೇಕ ಉದಾಹರಣೆಗಳನ್ನು ಕೊಟ್ಟು ಸ್ಪಷ್ಟೀಕರಿಸಿದನು. ಆ ಜನರಾದರೂ ಪ್ರಚಂಡರಾಯನ ಆಳಿಕೆಗೆ ಬೇಸತ್ತಿದ್ದರು. ಹೊಸ ರಾಜ್ಯಸ್ಥಾಪನೆಯಾಗುವದು ಅವರಿಗೆ ಬೇಕಾಗಿತ್ತು. ಪ್ರಚಂಡರಾಯನ ರಾಜ್ಯಕ್ಕಿಂತಲೂ ಯವನ ರಾಜ್ಯವೇ ಮೇಲೆಂದು ಅವರು ಅನ್ನುತ್ತಿದ್ದರು. ಪ್ರಚಂಡಗಡವು ವಶವಾದರೆ ಪ್ರಚಂಡರಾಯನ ಆಳಿಕೆಯು ಕೊನೆಯಾಗುವದೆಂಬ ಮಾತು ಗೊತ್ತಾದ ಕೂಡಲೆ ಅವರು ಬೇಕಾದ ಸಹಾಯ ಮಾಡಲು ಹಂಬೀರರಾಯನಿಗೆ ಮಾತು ಕೊಟ್ಟರು. ಆ ಸಭೆಯೊಳಗಿನ ಒಬ್ಬಿಬ್ಬರು ಧುಂಡಜಿಯ ಪರಿಚಯದವರಿದ್ದರು. ಜನರು ಇಷ್ಟು ಸಹಾನುಭೂತಿಯನ್ನು ತೋರಿಸಿದ ಕೂಡಲೆ ಹಂಬೀರರಾಯನು ಧುಂಡಜಿಯನ್ನು ಕುರಿತು: "ನಮಗೆ ಬೇಕಾಗಿದ್ದ ಮಹತ್ವದ ಸಂಗತಿಗಳನ್ನು ಗುಪ್ತವಾಗಿ ತಿಳಿದುಕೊಂಡು ಬಾ." ಎಂದು ಆಜ್ಞಾಪಿಸಿದನು.

ಧುಂಡಜಿಯು ನೇತ್ರಸಂಕೇತದಿಂದ ತನ್ನ ಪರಿಚಯದವರನ್ನು ಬೇರೆ ಕಡೆಗೆ ಕರೆದುಕೊಂಡು ಹೋಗಿ ಕೋಟೆಯನ್ನು ಪ್ರವೇಶಿಸುವ ಗುಪ್ತಮಾರ್ಗಗಳನ್ನು ಗೊತ್ತು ಹಚ್ಚಿಕೊಡಬೇಕೆಂದು ಅವರನ್ನು ಕೇಳಿದನು. ಆ ಜನರು ಅವನ ಮಾತಿಗೆ ಸಂತೋಷದಿಂದ ಒಪ್ಪಿದರು. ಕೋಟೆಯನ್ನು ವಶಪಡಿಸಿಕೊಂಡು ಪ್ರಚಂಡರಾಯನ ಅಸ್ತಿತ್ವ ನಾಶಮಾಡಲು ಸೇನಾಪತಿಯಿಂದ ವಚನ ದೊರೆತರೆ ಮಾತ್ರ ತಾವು ಆ ಮಾರ್ಗವನ್ನು ತೋರಿಸುವೆವೆಂಬ ಕಟ್ಟಳೆಯನ್ನು ಅವರು ಮುಂದೆ ಮಾಡಿದರು; ಯಾಕಂದರೆ, ಯಾವುದೊಂದು ವಿಧದ ಒಪ್ಪಂದವಾಗಿ ಪ್ರಚಂಡರಾಯನ ಅಸ್ತಿತ್ವ ಉಳಿದರೆ ತಮ್ಮ ಸರ್ವಸ್ವವೂ ಘಾತವಾಗುವದೆಂಬದರ ಹೆದರಿಕೆ ಅವರಿಗಿತ್ತು. ಧುಂಡಜಿಯು ಈ ಸಂಗತಿಯನ್ನು ಹಂಬೀರರಾಯನಿಗೆ ತಿಳಿಸಿದನು. ಹಂಬೀರರಾಯನು ಅವರಿಗೆ ಮಾನಾಜಿರಾಯನಿಂದ ವಚನ ಕೊಡಿಸುವ ಬಗ್ಗೆ ಹೊಣೆಹೊತ್ತನು. ಅನಂತರದಲ್ಲಿ

ಊರ ಜನರ ಆಭಾರ ಮನ್ನಿಸಿ ಅವನು ಎಲ್ಲರೊಡನೆ ತನ್ನ ಶಿಬಿರಕ್ಕೆಬಂದನು.

ಹಂಬೀರರಾಯನು ತಾನು ಕರೆತಂದ ಜನರನ್ನು ಮಾನಾಜಿರಾಯನ ಕಡೆಗೆ ಕರೆದುಕೊಂಡು ಹೋಗಿ ಎಲ್ಲ ಸಂಗತಿಗಳನ್ನು ನಿವೇದಿಸಿದನು. ಮಾನಾಜಿ ರಾಯನು ಗುಪ್ತಮಾರ್ಗ ತೋರಿಸುವ ಜನರ ಇಚ್ಛೆಯಂತೆ ವಚನ ಕೊಟ್ಟನು. ನಂತರ ಆ ಮಾರ್ಗವನ್ನು ಶೋಧಿಸಲು ಕೆಲವು ಜನರು ನಡೆದರು. ಧುಂಡಜಿ-ಹಂಬೀರರಾಯರು ಅವರಲ್ಲಿದ್ದರು. ರಾವಜಿರಾಯನು ಮಾನಾಜಿರಾಯನ ಕೈಕೆಳಗೆ ಕೆಲಸ ಮಾಡಲು ಕೋಟೆಯ ಹೊರಗೆ ಉಳಿಯಬೇಕಾಯಿತು.

ಗುಪ್ತಮಾರ್ಗ ತೋರಿಸಲು ಬಂದ ಜನರು ಹಂಬೀರರಾಯನನ್ನೂ ಅವನ ಜನರನ್ನೂ ಒಂದು ನಿಬಿಡವಾದ ವನಪ್ರದೇಶಕ್ಕೆ ಕರೆಕೊಂಡು ಹೋ-ದರು. ಅಲ್ಲಿ ಒಂದು ಸಣ್ಣ ಶಿವಾಲಯವಿತ್ತು. ಅಲ್ಲಿದ್ದ ಗೋಸಾವಿಯನ್ನೂ ಅವನ ಶಿಷ್ಯನನ್ನೂ ಪಿಚಂಡಿ ಬಿಗಿದು ಚಲ್ಲಬೇಕೆಂದು ಹಂಬೀರರಾಯನಿಗೆ ಮಾರ್ಗ ಶೋಧಕರು ಹೇಳಿದ್ದರು; ಯಾಕಂದರೆ, ಗೋಸಾವಿಯು ಪ್ರಚಂಡ ರಾಯನ ಹಸ್ತಕನಿದ್ದುದರಿಂದ ಈ ಕಾರಸ್ಥಾನವು ಅವನಿಂದ ಬೈಲಿಗೆ ಬರಬಹು ದೆಂದು ತಿಳಿದು ಹೀಗೆ ತಿಳಿಸಿದ್ದರು. ಹಂಬೀರರಾಯನು ದೇವಸ್ಥಾನದಲ್ಲಿ ಹೋದ ಕೂಡಲೆ ತನ್ನ ಸೈನಿಕರಿಂದ ಗೋಸಾವಿಯನ್ನೂ ಅವನ ಶಿಷ್ಯನನ್ನೂ ಪಿಚಂಡಿ ಬಿಗಿಸಿದನು. ಅನಂತರದಲ್ಲಿ ಮಾರ್ಗಶೋಧಕರು ಗುಡಿಯ ಮುಂದೆ ಇದ್ದ ಕಲ್ಲನ್ನು ತೆಗೆಯ ಹೇಳಿದರು. ಆ ಕಲ್ಲು ತೆಗೆದು ಕೂಡಲೆ ಒಳಗೆ ಸೋ-ಪಾನಗಳಿದ್ದವು. ಆ ಮಾರ್ಗದಿಂದ ಎಲ್ಲರೂ ಒಳಗೆ ಹೋದರು. ಆ ಮಾರ್ಗ ದಿಂದ ಕೆಲವು ದೂರ ಹೋದ ಮೇಲೆ ಒಂದು ಭದ್ರವಾದ ಬಾಗಿಲ ಹತ್ತಿತು. ಎಷ್ಟು ಪ್ರಯತ್ನ ಮಾಡಿದರೂ ಆ ಬಾಗಿಲವನ್ನು ತೆರೆಯುವದಾಗಲಿಲ್ಲ. ಒಂದು ವಿಧದ ಸಾಂಕೇತಿಕ ಶಬ್ದವನ್ನು ಉಚ್ಚರಿಸಿದರೆ ಬಾಗಿಲು ತೆರೆಯಲ್ಪಡುವದು; ಸಾಂಕೇತಿಕ ಶಬ್ದಗಳು ಮೇಲಿಂದ ಮೇಲೆ ಬೇರೆ ಬೇರೆಯಾಗುತ್ತವೆ; ಸದ್ಯದ ಸಾಂಕೇತಿಕ ಶಬ್ದವು ಗೋಸಾವಿಗೆ ಗೊತ್ತಿರುವದು; ಯಾಕಂದರೆ ಅವನು ಇದೇ ದಾರಿಯಿಂದ ಹೋಗಿ ಬರುತ್ತಿರುವನು. ಮೊದಲಾದ ಸಂಗತಿಗಳನ್ನು ಮಾರ್ಗದರ್ಶಕರು ಹಂಬೀರರಾಯನಿಗೆ ಹೇಳಿದರು. ಕೂಡಲೆ ಶಂಭುವೂ ಧುಂ ಡಜಿಯೂ ಅಲ್ಲಿಂದ ಶಿವಾಲಯಕ್ಕೆ ಹೋಗಿ ಗೋಸಾವಿಯನ್ನು ಅನೇಕ ವಿಧ ವಾಗಿ ಪೀಡಿಸಿ, ಸಾಂಕೇತಿಕ ಶಬ್ದವನ್ನು ಅವನಿಂದ ತಿಳಿದುಕೊಂಡು ದ್ವಾರದ ಬಳಿಗೆ ಬಂದರು. ತರುವಾಯ ಧುಂಡಜಿಯು "ಬಂದರ" ಎಂದು ದೊಡ್ಡ ದನಿ

ಯಿಂದ ಕೂಗಿದನು. ಕೂಡಲೆ ಕಾವಲುಗಾರರು ಬಾಗಿಲ ತೆರೆದರು. ಹಂಬೀರ ರಾಯನೂ ಅವನ ಸೈನಿಕರೂ ಕಾವಲುಗಾರರನ್ನು ಬಂಧಿಸಿ ಮುಂದೆ ಸಾಗಿ ಕೋಟೆಯ ಮಹಾದ್ವಾರವನ್ನು ತೆರೆದರು. ಅನಂತರದಲ್ಲಿ ಅಲ್ಲಿದ್ದ ಕಟ್ಟಿಗೆಯ ಸೇತುವೆಯನ್ನು ಕಂದಕದ ಮೇಲೆ ಹಾಕಿ ಕೊಂಬನ್ನಾದಿದರು. ಕೂಡಲೆ ಮಾನಾಜಿರಾಯನು ತನ್ನ ಸೈನಿಕರೊಡನೆ ದೀವಟಿಗೆಗಳ ಬೆಳಕಿನಲ್ಲಿ ಸೇತುವೆ ದಾಟಿ ಕೋಟೆಯನ್ನು ಪ್ರವೇಶಿಸಿದನು. ಮಾನಾಜಿರಾಯನ ಸೈನಿಕರು ಕೋಟೆ ಯನ್ನು ಪ್ರವೇಶಿಸಿದ ಕೂಡಲೆ ಪ್ರಚಂಡರಾಯನ ಮನೆಯನ್ನು ಮುತ್ತಿದರು. ಈ ಅಕಲ್ಪಿತ ಘಟನೆಯನ್ನು ನೋಡಿ ಪ್ರಚಂಡರಾಯನೂ ಅವನ ಸೈನಿಕರೂ ಗಾಬರಿಯಾದರು. ಅವರು ತಮ್ಮ ಶಸ್ತ್ರಾಸ್ತ್ರಗಳನ್ನು ಸಾವರಿಸಿಕೊಂಡು ಯುದ್ಧಕ್ಕೆ ಅಣಿಯಾದರು. ಕಾಳಗವು ಪ್ರಾರಂಭವಾಯಿತು. ಸೂರ್ಯೋದಯ ವಾಗುವಷ್ಟರಲ್ಲಿ ಪ್ರಚಂಡಗಡದ ಸೈನಿಕರು ಹತಾಶರಾದರು. ತನಗೆ ವಿಜಯ ದೊರೆಯುವದಿಲ್ಲವೆಂದು ತಿಳಿದ ಕೂಡಲೆ ಪ್ರಚಂಡರಾಯನು ಯಾವದೋ ಒಂದು ಗುಪ್ತ ಮಾರ್ಗದಿಂದ ಓಡಿ ಹೋದನು. ಸೈನಿಕರು ಶಸ್ತ್ರಾಸ್ತ್ರಗಳನ್ನು ಕೆಳಗಿಟ್ಟರು. ಮಾನಾಜಿರಾಯನು ಯುದ್ಧವನ್ನು ನಿಲ್ಲಿಸಿ, ಶತ್ರುಸೈನಿಕರಿಂದ ಸ್ವರಾಜ್ಯಸೇವೆ ಮಾಡುವಬಗ್ಗೆ ಪ್ರತಿಜ್ಞೆ ಮಾಡಿಸಿದನು. ಅನಂತರದಲ್ಲಿ ಮಾನಾಜಿರಾಯನು ಪ್ರಚಂಡಗಡದ ಸರದಾರಿಕೆಯ ಕೆಲಸಕ್ಕೆ ಸುಲಿಗೆಗಾರ ಘುಂಡಜಿಯನ್ನು ನಿಯಮಿಸಿದನು. ಅಲ್ಲಿದ್ದ ಜನರಿಗೂ ಸೈನಿಕರಿಗೂ ಹಿತೋಪ ದೇಶ ಮಾಡಿ, ಸುಲಿಗೆಗಾರಿಕೆಯನ್ನು ಬಿಡುವ ಬಗ್ಗೆ ಅವರಿಂದ ವಚನ ತೆಗೆದು ಕೊಂಡನು. ಈ ಸಂಗ್ರಾಮದಲ್ಲಿ ಶೌರ್ಯಸಾಹಸ ಮಾಡಿದವರಿಗೆ ಪ್ರಚಂಡ ಗಡದ ಸುಲಿಗೆಯಲ್ಲಿಯ ಬಹು ದೊಡ್ಡ ಭಾಗವು ಹಂಚಲ್ಪಟ್ಟಿತು. ಹಂಬೀರ ರಾಯನು ಬಹು ದೊಡ್ಡ ಸಾಹಸ ಮಾಡಿದ್ದರಿಂದ ಅವನಿಗೆ ಹೇರಳವಾದ ಪಾರಿ ತೋಷಕವು ದೊರೆಯಿತು. ಪ್ರಚಂಡಗಡದ ಸುತ್ತ ಮುತ್ತ ಅರಾಜಕತೆಯುಂ ಟಾಗಿದ್ದರಿಂದ ಅಲ್ಲಿಯ ರಾಜ್ಯವ್ಯವಸ್ಥೆಗಾಗಿ ಮಾನಾಜಿರಾಯನು ಕೆಲವು ದಿನ ನಿಲ್ಲುವ ವಿಚಾರ ಮಾಡಿದನು. ಈ ಅವಧಿಯಲ್ಲಿ ದೇವಗಾವಿಗೆ ಹೋಗಿಬರುವ ಬಗ್ಗೆ ಮಾನಾಜಿರಾಯನು ಹಂಬೀರರಾಯನಿಗೆ ತಿಳಿಸಿದನು. ಕೆಲ ದಿನ ತಡ ವಾದರೂ ಚಿಂತೆಯಿಲ್ಲ; ಸಾಂದಗಾವಿಗೂ ಹೋಗಿಯೇ ಬರಬೇಕೆಂದೂ ಒಂದು ವೇಳೆ ಲಗ್ನಮುಹೂರ್ತವು ನಿಶ್ಚಯಿಸಲ್ಪಟ್ಟರೆ ಮಂಗಲ ಕಾರ್ಯ ಪೂರೈಸ ಬೇಕೆಂತಲೂ ಅವನು ಹಂಬೀರರಾಯನಿಗೆ ಹೇಳಿದನು. ಹಂಬೀರರಾಯನು

ತನ್ನ ಸಂಗಡ ರಾವಜಿಯನ್ನು ಕರೆದೊಯ್ಯುವೆನೆಂದು ಮಾನಾಜಿರಾಯನಿಗೆ ಹೇಳಿದನು. ಈ ಮಾತಿಗೆ ಮಾನಾಜಿರಾಯನಾದರೂ ಸಂತೋಷದಿಂದ ಒಪ್ಪಿದನು. ಪುತ್ಥಳಿಗೂ ಕಮಳಿಗೂ ಕೊಡುವದಕ್ಕಾಗಿ ಉತ್ತಮವಾದ ಕಂಠಹಾರಗಳನ್ನು ಅವನು ಹಂಬೀರರಾಯನಿಗೆ ಕೊಟ್ಟನು.

ಮಾರನೆಯ ದಿವಸವೆ ಹಂಬೀರರಾಯನು ರಾವಜಿ ಘೋರ್ಪಡೆಯೊಡನೆ ದೇವಗಾಂವಿಗೆ ಹೊರಡಲನುವಾಗಿದ್ದನು. ಅಷ್ಟರಲ್ಲಿ ಮಹಾರಾಜರ ಆಜ್ಞಾಪತ್ರವೊಂದು ಮಾನಾಜಿರಾಯನ ಕೈ ಸೇರಿದ್ದರಿಂದ ಆ ವಿಷಯವಾಗಿ ವಿಚಾರವಿನಿಮಯ ಮಾಡಲು ಹಂಬೀರರಾಯನು ಆ ದಿವಸ ಅಲ್ಲಿ ನಿಲ್ಲಬೇಕಾಯಿತು.

---

## ೧೮ ಸ್ವಯಂಭೂ ಸರದಾರ



ನಾಂದಗಾಂವಿಯ ಇನಾಮದಾರ ರಂಗರಾಯನು ವ್ಯಸನಾಧೀನನಾಗಿ ತನ್ನ ಆಸ್ತಿಯನ್ನೆಲ್ಲ ಹಾಳು ಮಾಡಿಕೊಂಡನು. ಅವನು ಧನಹೀನನಾದ ಹಾಗೆ ಆಪ್ತೇಷ್ಟರೂ ಪುಂಡ ಅನುಯಾಯಿಗಳೂ ಅವನನ್ನು ಬಿಡುತ್ತ ಹೋದರು. ಇನಾಮದಾರನೆಂಬ ದೊಡ್ಡ ಅಡ್ಡಹೆಸರಿನ ತನಗೆ ಯಾವನಾದರೂ ಸರದಾರನೂ ದೊಡ್ಡ ಇನಾಮದಾರನೂ ಕನ್ಯೆ ಕೊಡುವನೆಂಬ ಅವನ ಗರ್ವವು ಇಳಿದು ಹೋಗಿತ್ತು. ಸಾಮಾನ್ಯರು ಕೂಡ ಅವನ ಹೇಸಿ ವರ್ತನವನ್ನು ಕಂಡು ತಿರಸ್ಕಾರಪಡತೊಡಗಿದ್ದರು. ಯಶವಂತರಾಯನ ಮಗಳಾದ ಕಮಲೆಯು ಸ್ವಾಧೀನವಾಗುವವರೆಗಾದರೂ ಸದ್ವರ್ತನೆಯನಿಸಿಕೊಳ್ಳುವ ಹಾಗೆ ವರ್ತನ ಇಡಲಿಲ್ಲವಲ್ಲ? ಎಂದು ಅವನು ಪಶ್ಚಾತ್ತಾಪಪಡತೊಡಗಿದ್ದನು. ಹೋದ ಐಶ್ವರ್ಯ ಪ್ರತಿಷ್ಠೆಗಳನ್ನು ಹೇಗೆ ಗಳಿಸಬೇಕೆಂದು ಅವನು ಯಾವಾಗಲೂ ಯೋಚಿಸತೊಡಗಿದ್ದನು. ಶಿವಾಜಿ ಮಹಾರಾಜರ ಕಡೆಗೆ ಹಂಬೀರರಾಯನೂ ಮಾನಾಜಿರಾಯನೂ ಇರುವ ಮೂಲಕ ಅಲ್ಲಿ ತನ್ನ ಬೇಳೆ ಬೆಯ್ಯದೆಂದು ತಿಳಿದು ಅವನು ಒಬ್ಬ ಯವನ ಸರದಾರನ ಆಶ್ರಯ ಹುಡುಕಬೇಕೆಂದು ಹವಣಿಸತೊಡಗಿದನು. ಇದ್ದಬಿದ್ದ ಅಲ್ಪ ಸ್ವಲ್ಪ ಭೂಮಿ-ಮನೆಗಳನ್ನು ಮಾರಿ, ಅದೇ ಹಣವನ್ನು ವೆಚ್ಚ ಮಾಡಿ ಕೆಲವು ಅನುಯಾಯಿಗಳನ್ನು ದೊರಕಿಸಿಕೊಂಡನು. ತನ್ನ ಕೈ ಕೆಳಗಿನ ಜನರಿಗೆಲ್ಲ ಅವನು ಸರದಾರನಾದನು. ಈ ಸರದಾರಿಕೆಯ ಉಪಯೋಗವನ್ನು ಕೇವಲ ಕೊಲೆ ಸುಲಿಗೆಗಾಗಿ ಮಾಡದೆ,

ಸರಕಾರೀ ಕೆಲಸವನ್ನು ಮಾಡಿ ಪ್ರತಿಷ್ಠೆ-ಧನಗಳನ್ನು ಸಂಪಾದಿಸಬೇಕೆಂಬ ಯೋಚನೆಯು ಅವನಲ್ಲಿ ಹುಟ್ಟಾಯಿತು. ಅಲ್ಲದೆ ಸ್ವರಾಜ್ಯದಲ್ಲಿ ಕೆಲಸ ಮಾಡುತ್ತಿದ್ದ ಹಂಬೀರರಾಯನ ಮೇಲಿನ ಸೇಡು ತೀರಿಸಿಕೊಳ್ಳುವ ಕೆಲಸವಾದರೂ ಈಡೇರುವದೆಂದು ಅವನು ಯವನ ಪಾತಶಾಹಿಯಲ್ಲಿ ಕೆಲಸಗಾರನಾಗಲು ಉತ್ಕಟೇಚ್ಛೆಯುಳ್ಳವನಾಗಿದ್ದನು. ಆಗ ಅವನು ತನ್ನ ಜನರೊಡನೆ ಯವನ ಸರದಾರನ ಠಾಣ್ಯಕ್ಕೆ ನಡೆದನು.

ಆಗಿನ ಯವನ ಶಾಸನದ ರೀತಿ ಅತಿಶಯ ವಿಲಕ್ಷಣವಾದದ್ದಿತ್ತು. ರಾಜ್ಯಕಾರಭಾರವು ಸುಸೂತ್ರವಾಗಿ ನಡೆಯಬೇಕೆಂದು ಇಚ್ಛಿಸುತ್ತಿದ್ದರೂ, ಸುರಾಜ್ಯ ಸ್ಥಾಪನೆಗೆ ಅವರು ಮನಸ್ಸು ಮಾಡುತ್ತಿರಲಿಲ್ಲ. ರಾಜ್ಯದಲ್ಲಿ ಕೊಲೆ ಸುಲಿಗೆಗಳು ನಡೆಯಲು ಪರೋಕ್ಷ ಪ್ರೋತ್ಸಾಹ ಕೊಡುತ್ತಲೂ, ಆ ಕೊಲೆ ಸುಲಿಗೆಗಳು ನಿಲ್ಲುವಂತೆ ಪ್ರಯತ್ನ ಮಾಡುವ ಹಾಗೆ ನಟಿಸುತ್ತಲೂ, ಒಡಕು ಹುಟ್ಟಿಸುತ್ತಲೂ, ಐಕ್ಯವುಂಟಾಗುವಂತೆ ಪ್ರಯತ್ನ ಮಾಡುವ ಹಾಗೆ ಅಭಿನಯಿಸುತ್ತಲೂ ಅವರು ರಾಜ್ಯಭಾರ ಸಾಗಿಸಿದ್ದರು. ಒಟ್ಟಿಗೆ ಹಿಂದುಗಳು ದುರ್ಬಲರೂ ಅಂತಃಕಲಹಗಳಿಂದ ಕರ್ತವ್ಯಪರಾಙ್ಮುಖರಾಗುವಂಥವರೂ ಆಗುವ ಹಾಗೆ ಪ್ರಯತ್ನಗಳು ನಡೆಯುತಿದ್ದವು.

ಇತರ ಪ್ರದೇಶಗಳಂತೆ ದೇವಗಾವಿಯ ಸುತ್ತಮುತ್ತಲು ಅಶಾಂತತೆಯು ಉತ್ಪನ್ನವಾಗಿತ್ತು. ಕೊಲೆಸುಲಿಗೆಗಳು ಧಾರಾಳವಾಗಿ ನಡೆದಿದ್ದವು. ಕಂದಾಯವು ನಿಲ್ಲತೊಡಗಿತ್ತು. ಮಹಂತ ಧನಗಿರಿಯು ಅಲ್ಲಿಯ ಈ ಅವ್ಯವಸ್ಥೆಯನ್ನು ಹೋಗಲಾಡಿಸುವದಕ್ಕಾಗಿ ಸಶಸ್ತ್ರ ಸೈನ್ಯ ಕಳಿಸಬೇಕೆಂದು ವಿಜಾಪುರದ ಓಲಗಕ್ಕೆ ವಿನಂತಿಪತ್ರ ಕಳುಹಿಸಿದ್ದನು. ಓಲಗದವರು ಆ ಭಾಗದ ಸರದಾರನ ಕಡೆಗೆ ಈ ಕೆಲಸದ ವ್ಯವಸ್ಥೆ ಮಾಡಲು ಆಜ್ಞಾಪತ್ರ ಕಳುಹಿಸಿದ್ದರು. ಈ ಸಂಧಿಯಲ್ಲಿಯೇ ರಂಗರಾಯನು ತನ್ನ ಪಥಕದೊಂದಿಗೆ ಆ ಸರದಾರನ ಬಳಿಗೆ ಬಂದು ತನಗೆ ಆ ಭಾಗದ ಸರದಾರಿಕೆಯನ್ನು ದಯಪಾಲಿಸಲು ಬೇಡಿಕೊಂಡನು; ಆದರೆ ಒಬ್ಬ ಜಮಾದಾರನನ್ನು ನಿಯಮಿಸಲಿಕ್ಕೆ ಮಾತ್ರ ಮೇಲಧಿಕಾರಿಗಳ ಆಜ್ಞೆಯಿದ್ದುದರಿಂದ ರಂಗರಾಯನಿಗೆ ಸರದಾರಿಕೆಯ ಅಧಿಕಾರ ಕೊಡಲು ಆ ಸರದಾರನು ಒಪ್ಪಲಿಲ್ಲ. ಕೊನೆಗೆ ದೊರೆತ ಅಧಿಕಾರದಿಂದ ಬೇಕಾದ ಹಾಗೆ ಕೆಲಸ ಮಾಡಬಹುದೆಂದು ಬಗೆದು ರಂಗರಾಯನು ಜಮಾದಾರಿಕೆಯಿಂದ ಸಂತುಷ್ಟನಾದನು. ರಂಗರಾಯನ ಹಾಗು ಅವನ

ಸಣ್ಣ ಪಥಕದಿಂದ ಅಲ್ಲಿ ಏನೂ ಪ್ರಯೋಜನವಾಗುವಂತೆ ಇರಲಿಲ್ಲ; ಯಾಕಂದರೆ ಆ ಭಾಗದಲ್ಲಿ ದೊಡ್ಡ ಕ್ರಾಂತಿಯೇ ಉತ್ಪನ್ನವಾಗಿತ್ತು; ಆದರೆ ಅಲ್ಲಿಯ ಅವ್ಯವಸ್ಥೆಯನ್ನು ಹೋಗಲಾಡಿಸಿ ಸುರಾಜ್ಯಸ್ಥಾಪನೆ ಮಾಡಬೇಕೆಂದು ಯವನ ಆಳರಸರ ಮನೀಷೆಯೇ ಇರಲಿಲ್ಲ. ನಿಮಿತ್ತಕ್ಕೆ ಸೈನ್ಯ ಕಳಿಸಬೇಕಾದುದರಿಂದ ಅವರಿಗೆ ರಂಗರಾಯನ ಸಣ್ಣ ಪಥಕವೇ ಸಾಕಾಯಿತು.

ರಂಗರಾಯನು ದೇವಗಾವಿಗೆ ಹೊರಡುವ ಮೊದಲು ಯವನ ಸುಭೇದಾರನು ಅವನನ್ನು ಕರೆದು:—"ಜಮಾದಾರರೆ, ನೀವು ದೇವಗಾವಿಯ ಭಾಗದ ಪರಿಚಯುದವರಿರುವಿರಿ. ಅಲ್ಲಿ ಕೊಲೆ-ಸುಲಿಗೆಗಳು ಹೇರಳವಾಗಿ ನಡೆದಿರುವವೆಂದೂ ಮಹಂತರ ಕಂದಾಯ ಎತ್ತುವಿಕೆಯು ಕಾರ್ಯವು ಚನ್ನಾಗಿ ನಾಗದಾಗಿರುವದೆಂದೂ ತಿಳಿದುಬಂದಿದೆ. ನೀವು ಕಂದಾಯದ ಕೆಲಸ ಸರಿಪಡಿಸುವದನ್ನು ಮಾತ್ರ ಅಲಕ್ಷಿಸಬೇಡಿರಿ. ಕೊಲೆಸುಲಿಗೆಗಳಂಥ ಕಾರ್ಯಗಳೇನೂ ಮಹತ್ವದವಲ್ಲ. ಅದರಿಂದ ನಮ್ಮ ಪಾತಶಾಹಿಗೇನೂ ಅಷ್ಟೊಂದು ಬಾಧೆಯಿಲ್ಲ. ಒಮ್ಮೊಮ್ಮೆ ಇಂಥ ಕಾರ್ಯಗಳಿಂದ ಪ್ರಯೋಜನವೇ ಆಗುವದುಂಟು. ನಮ್ಮ ನಿಮ್ಮಂಥ ಆಳರಸರಿಗೆ ಇಂಥ ಕೆಲಸಗಳಿಂದ ಲಾಭವಾಗುವದಲ್ಲದೆ, ಸ್ವರಾಜ್ಯಕ್ಕಾಗಿ ಹುಚ್ಚೆದ್ದು ಹರಿಯುತ್ತಿರುವ ನಿಮ್ಮ ಜನರಿಗೆ ನಮ್ಮ ಸಹಾಯ ಬೇಕಾಗುವದರಿಂದ ನಮ್ಮ ರಾಜ್ಯದ ತಳಹದಿ ಗಟ್ಟಿಯಾಗುವ ಸಂಭವವಿದೆ. ಜನತೆಯು ದೈನ್ಯಾವಸ್ಥೆಗೀಡಾಗಬೇಕು; ಅವರಲ್ಲಿ ಕಲಹಗಳು ಬೆಳೆಯಬೇಕು. ಹೀಗಾದರೆ ನಮ್ಮ ವರ್ಚಸ್ಸು ಸ್ಥಿರವಾಗುವದು. ಈ ಧೋರಣದಿಂದ ಪ್ರತಿಯೊಬ್ಬ ಅಧಿಕಾರಿಯು ನಡೆಯತಕ್ಕದ್ದೆಂದು ಗುಪ್ತಾಜ್ಞೆಯಿರುವದೆಂದು ತಿಳಿದುಕೊಳ್ಳತಕ್ಕದ್ದು. ಜಮಾದಾರರೇ, ಆದಿಲಶಾಹಿಯ ಸಿಂಹಾಸನದ ವಿಷಯವಾಗಿ ಏಕನಿಷ್ಠೆಯಿಂದ ನಡೆದರೆ ನಿಮ್ಮ ಅಭ್ಯುದಯವು ಚನ್ನಾಗಿ ಸಾಧಿಸುವದೆಂಬದನ್ನು ಮರೆಯಬೇಡಿರಿ. ಸ್ವಜನ, ಸ್ವರಾಜ್ಯ, ಸ್ವಧರ್ಮ ಮೊದಲಾದ ಸಾಧನೆಗಳಿಗಾಗಿ ಹಾತೊರೆಯುವ ಹುಚ್ಚ ಹಿಂದುಗಳ ಹುಚ್ಚು ಹಾಳು ಮಾಡಲಿಕ್ಕೆ ನಾವು ಸಮರ್ಥರೇ ಇದ್ದೇವೆ. ಆದರೂ ನಮ್ಮ ಕೆಲಸಗಾರರಿಗೆ ಆಳಿಕೆಯ ರೂಪರೇಷೆಯನ್ನೂ ಧೋರಣವನ್ನೂ ತಿಳಿಸಲೇ ಬೇಕು.

ಸುಭೇದಾರನ ವ್ಯಾಖ್ಯಾನವು ರಂಗರಾಯನ ಮೇಲೆ ಪರಿಣಾಮವನ್ನುಂಟು ಮಾಡಿತು. ಕಂದಾಯದ ವ್ಯವಸ್ಥೆ ಮಾಡಿ ಬೇಕಾದ ಹಾಗೆ ಸುಲಿಗೆಯ

ಕಾರ್ಯವು ಜರುಗಿಸಲಿಕ್ಕೆ ಸುಭೇದಾರನು ಪ್ರೋತ್ಸಾಹಿಸಿದ್ದರಿಂದ ಅವನು ಹಿರಿಹಿರಿ ಹಿಗ್ಗಿ ತನ್ನ ದೈವವೇ ತೆರೆಯಿತೆಂದು ಅಂದುಕೊಂಡನು. ಅವನು ಸುಭೇದಾರನಿಗೆ ಕೈಜೋಡಿಸಿ:—"ಸುಭೇದಾರ ಸಾಹೇಬರೇ, ನಿಮ್ಮ ಮಾತುಗಳ ಅಭಿಪ್ರಾಯವಾಯಿತು. ನಾನು ಹಿಂದುಪದಪಾತಶಾಹಿಯ ದ್ವೇಷಿಯೂ ಆದಿಲಶಾಹಿಯ ಹಿತೈಷಿಯೂ ಇರುವೆನು. ನಿಮ್ಮ ಧೋರಣದಂತೆ ನಾನು ವ್ಯವಸ್ಥೆ ಮಾಡುವೆನು. ನನಗೆ ಸರದಾರಿಕೆ ದೊರೆತಿದ್ದರೆ ಹೆಚ್ಚಿನ ಕೆಲಸ ಮಾಡಲಿಕ್ಕೆ ಸಂಧಿ ದೊರೆತಂತಾಗುತ್ತಿತ್ತು. ಆದರೂ ಚಿಂತೆಯಿಲ್ಲ. ನನ್ನ ಯೋಗ್ಯತೆಯೆಷ್ಟಿದೆಯೆಂಬುದು ನಂಬಿಕೆಯಾದೊಡನೆಯೇ ನನಗೆ ಸರದಾರಿಕೆ ದೊರೆಕಿಸಲಿಕ್ಕಾಗಿ ತಾವು ಓಲಗಕ್ಕೆ ಮತವನ್ನು ಕೊಟ್ಟೇ ಕೊಡುವಿರಿ."

ರಂಗರಾಯನ ಮಾತುಗಳಿಗೆ ಸುಭೇದಾರನು ತಲೆ ಹಾಕಿದನು. ಅನಂತರದಲ್ಲಿ ಅವನು ಹೊಸ ಜಮಾದಾರನಿಗೆ ದೇವಗಾವಿಗೆ ಹೊರಡಲು ನಿರೋಪ ಕೊಟ್ಟನು.

ರಂಗರಾಯನು ದೇವಗಾವಿಗೆ ಬಂದು ತನಗೆ ದೊರೆತ ಅಧಿಕಾರಪತ್ರವನ್ನು ಮಹಂತನಿಗೂ ಧುಂಡಿರಾಜನಿಗೂ ತೋರಿಸಿದನು. ರಂಗರಾಯನಂಥ ದುಷ್ಟನೂ ಸ್ವಾರ್ಥಿಯೂ ಅಹಂಕಾರಿಯೂ ಆದ ಮನುಷ್ಯನನ್ನು ಓಲಗದು ಕಂದಾಯದ ವ್ಯವಸ್ಥೆಗಾಗಿ ಕಳಿಸಿದ್ದು ಅವರಿಗೆ ಸರಿದೋರಲಿಲ್ಲ; ಆದರೆ ಸುಭೇದಾರನ ಆಜ್ಞೆಯ ಮುಂದೆ ಅವರ ಆಟವೇನೂ ನಡೆಯುವಂತಿದ್ದಿಲ್ಲವೆಂದು ನಿರುಪಾಯರಾದರು. ಧುಂಡಿರಾಜನು ಅಲ್ಲಿಯ ಪರಿಸ್ಥಿತಿಯ ಕಲ್ಪನೆಯಾಗುವದಕ್ಕಾಗಿ:—"ಜಮಾದಾರರೇ, ನೀವು ಇಲ್ಲಿಯವರೇ ಇರುವದರಿಂದ ನಿಮಗೆ ಹೆಚ್ಚು ಹೇಳಬೇಕೆಂಬ ಹಾಗೇನೂ ಇಲ್ಲ. ಆದರೂ ಎರಡು ಮಾತು ಹೇಳುವದು ನನ್ನ ಕೆಲಸವಿರುವದರಿಂದ ಹೇಳುತ್ತೇನೆ. ಈ ಭಾಗದ ಜನರ ಮನಸ್ಸಿನ ಮೇಲೆ ಶಿವಶಾಹಿಯ ಮೇಲೆ ಪ್ರೇಮ ಹೆಚ್ಚಾಗತೊಡಗಿದೆ. ಇಲ್ಲಿ ಕೊಲೆಸುಲಿಗೆಗಳು ಹೆರಳವಾಗಿ ನಡೆದಿವೆ. ಯವನ ಆಳರಸರ ಪೀಡೆಯ ಮೂಲಕ ಜನತೆಯು ಅಸಂತುಷ್ಟವಾಗಿದೆ. ತಮ್ಮ ಪ್ರಾಂತವು ಸ್ವರಾಜ್ಯದೊಳಗೆ ಸೇರಬೇಕೆಂದು ಅವರು ಬಹಳವಾಗಿ ಹಾತೊರೆಯತೊಡಗಿದ್ದಾರೆ. ಎಷ್ಟೋ ಜನರು ಇಲ್ಲಿಯ ಕೆಟ್ಟ ಪರಿಸ್ಥಿತಿಯನ್ನು ಕುರಿತು ಶಿವಾಜಿ ಮಹಾರಾಜರಿಗೆ ದೂರು ಹೇಳಹತ್ತಿದ್ದಾರೆ. ಜನರ ಭಕ್ತಿಯು ಆದಿಲಶಾಹಿಯ ಮೇಲೆ ನಷ್ಟವಾದ ಮೂಲಕ ಕಂದಾಯವು ಸುಸೂತ್ರವಾಗಿ ಬಾರದಂತಾಗಿದೆ. ಎಷ್ಟೋ

ಜನರು ಸತ್ಯಾಗ್ರಹ ಸಮರವನ್ನು ಪ್ರಾರಂಭಿಸಿದ್ದಾರೆ. ಮುಖ್ಯವಾಗಿ ಕಂದಾಯವು ಕೈಗೆ ಬರುವಂತೆ ಮಾಡುವದು ಮೊದಲನೆಯ ಕೆಲಸವು. ಇನ್ನು ಎರಡನೆಯ ಕೆಲಸವೆಂದರೆ, ಅಲ್ಲಲ್ಲಿ ನಡೆಯುತೊಡಗಿದ ಕೊಲೆಸುಲಿಗೆಗಳ ವಿಷಯವಾಗಿ ಲಕ್ಷ್ಯಗೊಡುವದು. ಕೊಲೆಸುಲಿಗೆಗಳು ಮಿತಿಮೀರಿ ಬೆಳೆದ ಮೂಲಕ ಜನರ ವಿತ್ತ-ಜೀವಿತಗಳು ಕ್ಷಣಭಂಗುರವಾಗತೊಡಗಿವೆ. ಈ ಬಗೆಯ ಅಶಾಂತಿಯ ಮೂಲಕ ಜನರ ಮನಸ್ಸು ಸ್ವರಾಜ್ಯದ ಕಡೆಗೆ ಧಾವಿಸತೊಡಗಿದೆ. ಸಮೀಪದಲ್ಲಿದ್ದ ಸ್ವರಾಜ್ಯದ ಸೀಮೆಯಲ್ಲಿ ಸುಖ-ಶಾಂತಿಗಳು ನೆಲೆಗೊಂಡಿವೆ; ಆದರೆ ಶಾಹೀರಾಜ್ಯದಲ್ಲಿ ಈ ವಿಧದ ಅಶಾಂತಿ! ಜನರು ಎರಡೂ ರಾಜ್ಯಗಳನ್ನು ಒರೆಹಚ್ಚಿ ನೋಡುತ್ತಿರುವರು. ದಿನದಿನಕ್ಕೆ ಶಾಹೀರಾಜ್ಯದ ವಿಷಯವಾಗಿ ಭಕ್ತಿ-ಆದರಭಾವಗಳು ಕಡಿಮೆಯಾಗಿ ಆ ಸ್ಥಳದಲ್ಲಿ ದ್ವೇಷಭಾವನೆಗಳು ನೆಲೆಗೊಳ್ಳತೊಡಗಿವೆ. ಈ ಎಲ್ಲ ವಿಧದ ಪರಿಸ್ಥಿತಿಯು ಸುಧಾರಿಸಬೇಕಾದರೆ ಓಲಗವೇ ತನ್ನ ಧೋರಣವನ್ನು ಬೇರೆ ಮಾಡಬೇಕು. ನಿಮ್ಮಿಂದ ದೊಡ್ಡ ದೊಡ್ಡ ಕೆಲಸಗಳಾಗಲಿಕ್ಕಿಲ್ಲ; ಆದರೆ ಕೊಲೆಸುಲಿಗೆಗಳನ್ನು ನಿಲ್ಲಿಸಲಿಕ್ಕೆ ಹಾಗು ಕಂದಾಯದ ವ್ಯವಸ್ಥೆಗೆ ಮನಸ್ಸು ಮಾಡಿದರೂ ಎಷ್ಟೋ ಪ್ರಯೋಜನವು. ನಿಮಗೆ ನಿಜವಾಗಿ ಹೇಳಬೇಕಾದರೆ ನಾವಾದರೂ ಮುಂಚೆ ಕೊಲೆಸುಲಿಗೆಗಳಿಗೆ ಪ್ರೋತ್ಸಾಹನೆ ಕೊಡುತ್ತ ಲಾಭಹೊಂದುತ್ತಿದ್ದೆವು; ಆದರೆ ಇತ್ತೀಚಿಗೆ ಆ ಘಾತುಕ ಕೃತ್ಯದ ಕಲ್ಪನೆಯಾಗತೊಡಗಿತು. ಅಲ್ಪ ಸ್ವಾರ್ಥಕ್ಕಾಗಿ ಮನಸ್ಸು ಮಾಡಿದರೆ ಪರಿಣಾಮವು ಎಷ್ಟು ಭಯಂಕರವಾಗುವದೆಂಬವರ ಕಲ್ಪನೆಯು ನಮಗಾಗತೊಡಗಿದೆ. ಆದ್ದರಿಂದ ನಿಮಗೆ ನಾವು ಎಚ್ಚರಿಕೆ ಕೊಡಲೇ ಬೇಕು. ನೀವು ಕೊಲೆಸುಲಿಗೆಗಳನ್ನು ನಿಲ್ಲಿಸಲಿಕ್ಕೆ ತಕ್ಕಮಟ್ಟಿಗೆ ಪ್ರಯತ್ನ ಮಾಡಲು ಅಡ್ಡಿಯಿಲ್ಲ. ನಿಮಗೆ ಈ ಕೆಲಸಕ್ಕಾಗಿ ಹೆಚ್ಚಿನ ಶಕ್ತಿ ಬೇಕಾದರೂ ಶಾಹೀ ಓಲಗವು ಪೂರೈಸುವದು. ನೀವು ನಿಮ್ಮ ಕರ್ತವ್ಯವನ್ನು ಚನ್ನಾಗಿ ಮಾಡತೊಡಗಿದರೆ. ಮಹಂತ ಮಹಾರಾಜರು ನಿಮ್ಮ ವಿಷಯವಾಗಿ ಸದಭಿಪ್ರಾಯನ್ನು ಓಲಗಕ್ಕೆ ಕಳಿಸುವರು."

ಧುಂಡಿರಾಜನ ಮಾತು ಮುಗಿದ ಮೇಲೆ ಮಹಂತ ಧನಗಿರಿಯು ಜಮಾದಾರ ರಂಗರಾಯನಿಗೆ:—"ರಂಗರಾಯರೇ, ಶಿವಶಾಹಿಯ ಪ್ರತಿಭೆಯು ಬೆಳೆಯತೊಡಗಿದ ಹಾಗೆಲ್ಲ ನಾವು ಎಷ್ಟೋ ಪಾಠ ಕಲಿತಿರುವೆವು. ನಾವು ಎಂಥ ಎಂಥ ಅನ್ಯಾಯ ಮಾಡಿ ಜನರ ದ್ವೇಷಾಗ್ನಿಯನ್ನು ಪ್ರಜ್ವಲಿಸಿದೆವಲ್ಲ? ಎಂದು

ಮಿಡುಕತೊಡಗಿದ್ದೇವೆ. ನಮ್ಮ ಸ್ವಾರ್ಥವೇ ನಮ್ಮ ನಾಶಕ್ಕೆ ಕಾರಣವಾಗುವ ಪರಿಸ್ಥಿತಿ ಬಂದೊದಗಿದೆ. ಶಿವಾಜಿ ಮಹಾರಾಜರು ಈ ಪ್ರಾಂತವನ್ನು ಕೈವಶ ಮಾಡಿಕೊಂಡು ಇದರ ಮೇಲೆ ಹಂಬೀರರಾಯನನ್ನು ಸರದಾರನನ್ನಾಗಿ ನಿಯ ಮಿಸುವ ಯೋಚನೆಯೊಳಗಿದ್ದಾರೆಂದು ಕೇಳುತ್ತೇನೆ. ಹಾಗಾದರೆ ನಮ್ಮ ಅಸ್ತಿತ್ವವೇ ನಾಶವಾಗುವದು. ಹಂಬೀರರಾಯನು ನಮ್ಮ ಕಡುಹಗೆ; ನಿಮ ಗೂ ಕಡುಹಗೆ. ಅವನು ಇಲ್ಲಿಗೆ ಬಾರದ ಹಾಗೆ ವ್ಯವಸ್ಥೆ ಮಾಡಬೇಕು. ಶಾಹೀ ರಾಜ್ಯವು ಸುರಾಜ್ಯವೆಂಬ ಕಲ್ಪನೆಯನ್ನು ಹೇಗಾದರೂ ಮಾಡಿ ಜನರ ತಲೆಯಲ್ಲಿ ತುಂಬಬೇಕು. ಅಲ್ಲಲ್ಲಿಯ ಕೊಲೆಸುಲಿಗೆಗಳು ಇಲ್ಲದ ಹಾಗೆ ವ್ಯವಸ್ಥೆ ಮಾಡಬೇಕು. ಇಲ್ಲಿಯ ಯವನ ಕೆಲಸಗಾರರು ಜನರ ಛಲನೆ ಮಾಡುತ್ತ ಅಸಂತೋಷ ಬೆಳೆಯಿಸುತ್ತಲಿರುವರು. ಅವರಿಗೆ ಚೆನ್ನಾಗಿ ಬುದ್ಧಿ ಗಲಿಸಲಿಕ್ಕೆ ಬೇಕು. ಒಟ್ಟಿಗೆ ಇಲ್ಲಿ ಶಾಂತಿ ನೆಲಿಸಿದರೆ ಶಿವಾಜಿಮಹಾರಾಜರು ಇಲ್ಲಿಯ ರಾಜಕಾರಣದಲ್ಲಿ ಕೈಹಾಕಲಿಕ್ಕಿಲ್ಲ; ಶಾಹೀರಾಜ್ಯವೂ ಉಳಿಯುವದು; ಶಾಹೀರಾಜ್ಯವು ಸುರಕ್ಷಿತ ಉಳಿದರೆ ನಮ್ಮ ಅಸ್ತಿತ್ವವೂ ಉಳಿಯುವದು, ನೀವೂ ಹೆಚ್ಚಿನ ಪ್ರತಿಷ್ಠೆ ಗಳಿಸುವಿರಿ. ನೀವು ತರುಣರಿರುವಿರಿ; ಕೆಲಸ ಮಾ-ಡಲು ಹುರುಪಿದೆ. ಮನಮುಟ್ಟಿ ದುಡಿದು ಸ್ವಪರಹಿತವನ್ನು ಸಾಧಿಸಿದರೆ ಒಳಿತಾಗುವದು."

ಧುಂಡಿರಾಜನ ಹಾಗು ಮಹಂತ ಧನಗಿರಿಯ ಮಾತುಗಳ ಅರ್ಥವು ಹುಂಬ ರಂಗರಾಯನಿಗೆ ಎಷ್ಟರಮಟ್ಟಿಗಾಯಿತೆಂಬದನ್ನು ತಿಳಿಯಲಿಕ್ಕೆ ಬರು ವಂತಿಲ್ಲ. ಅವರ ಮಾತುಗಳಿಗೆ ಅವನು ಗೋಣು ಮಾತ್ರ ಅಲ್ಲಾಡಿಸಿದನು. ಜಮಾದಾರಿಕೆಯ ಅಧಿಕಾರ ದೊರೆತರೂ ಸರದಾರನಂತೆ ಹೇಗೆ ಅಭಿನಯ ಮಾಡಬೇಕು, ಕೈಕೆಳಗಿನ ಜನರ ಮೇಲೆ ಹೇಗೆ ಅಧಿಕಾರ ನಡೆಯಿಸಬೇಕು, ಸಣ್ಣಪುಟ್ಟ ಕೆಲಸಗಳನ್ನು ಕೈಕೆಳಗಿನವರಿಗೆ ಒಪ್ಪಿಸಿ ದೊಡ್ಡ ಅಧಿಕಾರಸ್ಥನಂತೆ ಹೇಗೆ ವರ್ತಿಸಬೇಕು, ಸುಲಿಗೆಯಲ್ಲಿ ಭಾಗವಹಿಸಿ ಹೇಗೆ ಲಾಭಪಡೆಯಬೇಕು, ಹಂಬೀರರಾಯನ ಮೇಲಿನ ಸೇಡನ್ನು ಅವನ ಮನೆತನದ ಮೇಲೆ ಹೇಗೆ ತೀರಿಸಿಕೊಳ್ಳಬೇಕು ಮೊದಲಾದ ವಿಷಯಗಳು ಅವನ ತಲೆಯಲ್ಲಿ ತುಂಬಿ ಕೊಂಡದ್ದರಿಂದ ಮಹಂತನ ಹಾಗು ದುಂಡಿರಾಜನ ಮಾತುಗಳ ಅರ್ಥವು ಅವನಿಗಾಗಲಿಲ್ಲ. ಕೊನೆಗೆ 'ನಿಮ್ಮ ಧೋರಣದಂತೆ ನಡೆಯುವೆನು' ಎಂದು ಅವನು ಮಾತು ಮುಗಿಸಿ ತನ್ನ ಬಿಡಾರಕ್ಕೆ ತೆರಳಿದನು.

ರಂಗರಾಯನು ಸ್ವಯಂಭೂ ಸರದಾರನಾದನು. ಅವನು ತನ್ನ ಇಚ್ಛೆಯಂತೆ ಕೆಲಸ ಮಾಡತೊಡಗಿದನು. ಧುಂಡಿರಾಜನ ಹಾಗು ಮಹಂತನ ಸೂಚನೆಗಳು ವ್ಯರ್ಥವಾಗತೊಡಗಿದವು. ಅವನು ಗುಪ್ತವಾಗಿ ಕೊಲೆಸುಲಿಗೆಗಳಿಗೆ ಪ್ರೋತ್ಸಾಹನೆ ಕೊಡುತ್ತ ಧನಸಂಚಯ ಮಾಡತೊಡಗಿದನು. ತನ್ನ ಸೈನಿಕರಲ್ಲಿ ಒಬ್ಬನನ್ನು ಆರಿಸಿ, ಅವನಿಗೆ ಜಮಾದಾರಿಕೆಯ ಪದವೀದಾನ ಮಾಡಿ ತಾನು ತನ್ನ ಕೈ ಕೆಳಗಿನ ಜನರಿಂದ ಸರದಾರನೆನ್ನಿಸಿಕೊಳ್ಳತೊಡಗಿದನು. ಯಾವದೊಂದು ಹಂಚಿಕೆಯಿಂದ ಹಂಬೀರರಾಯನ ಮೇಲಿನ ಸೇಡು ತೀರಿಸಿಕೊಳ್ಳಬೇಕೆನ್ನುತ್ತಿದ್ದ ಅವನಿಗೆ ಒಂದು ಸಂಧಿಯೂ ದೊರೆಯಿತು. ಹಂಬೀರರಾಯನು ಮಠಕ್ಕೆ ಕೆಲವು ಹಣ ಕೊಡಬೇಕಾಗಿತ್ತು. ಈ ಹಣವನ್ನು ಎತ್ತುವದಕ್ಕಾಗಿ ಮಹಂತನು ಪ್ರಯತ್ನ ಮಾಡಿ ನಿರಾಶನಾಗಿದ್ದನು. ರಂಗರಾಯನು ಆ ಹಣವನ್ನು ಎತ್ತುವೆನೆಂದು ಮಹಂತನಿಗೆ ಹೇಳಿದನು; ಆದರೆ ಹಿಂದೆಯೊಮ್ಮೆ ಆ ಹಣಕ್ಕಾಗಿ ದೊಡ್ಡ ಕೋಲಾಹಲವೆದ್ದು ಮುಖಭಂಗವಾದುದರಿಂದ ಮತ್ತೆ ಆ ಕೆಲಸ ಮಾಡಲು ಮಹಂತನು ಒಪ್ಪಲಿಲ್ಲ. ರಂಗರಾಯನು ಸೇಡಿನ ಕುತೂಹಲದವನು. ಮಠದ ಆಸ್ತಿಯು ಸಾರ್ವಜನಿಕವಿದ್ದುದರಿಂದ ಅದರ ಹಾನಿ ಮಾಡಲು ಯಾರಿಗೂ ಅಧಿಕಾರವಿಲ್ಲ. ಸಾಹಸಬಟ್ಟು ಹಣವನ್ನು ಎತ್ತಲೇ ಬೇಕು ಮೊದಲಾದ ಪ್ರಮೇಯಗಳನ್ನು ಮುಂದೆ ಮಾಡಿ ರಂಗರಾಯನು ಜಯಾಬಾಯಿಗೆ ಹಣ ಕೊಡುವ ಬಗ್ಗೆ ಒತ್ತಾಯ ಮಾಡಿದನು. ವೇಳೆಗೆ ಹಣ ಕೊಡದೆ ಹೋದರೆ ಮನೆಯನ್ನೂ ಇತರ ಜಂಗಮ ಆಸ್ತಿಯನ್ನೂ ಕಸಿದುಕೊಳ್ಳಲಾಗುವದೆಂದು ಅವನು ಜಯಾಬಾಯಿಗೆ ಬೆದರಿಕೆ ಹಾಕಿದನು. ಜಯಾಬಾಯಿಯು ರಂಗರಾಯನ ಬೆದರಿಕೆಗೆ ಸೊಪ್ಪು ಹಾಕಲಿಲ್ಲ. ಅವಳು ಇಲ್ಲಿಯ ಎಲ್ಲ ಸಮಾಚಾರವನ್ನು ಮಹಾರಾಜರಿಗೆ ತಿಳಿಸಿದಳು.

ಮಹಾರಾಜರಿಗೆ ದೇವಗಾವಿಯ ಭಾಗದ ಪ್ರಜೆಗಳ ದೂರುಗಳು ನಿತ್ಯವೂ ಬರತೊಡಗಿದ್ದವು. ಅಲ್ಲಿಯ ವ್ಯವಸ್ಥೆಗಾಗಿ ಮಾನಾಜಿರಾಯನನ್ನಾಗಲಿ ಹಂಬೀರರಾಯನನ್ನಾಗಲಿ ಕಳಿಸಬೇಕೆಂದು ಅವರು ಯೋಚನೆ ಮಾಡತೊಡಗಿದ್ದರು; ಆದರೆ ಪ್ರಚಂಡಗಡದ ಯುದ್ಧವು ಕಾಲ್ತೊಡಕಾಗಿತ್ತು. ಅಲ್ಲಿಯ ಯುದ್ಧವು ಮುಗಿದ ಕೂಡಲೆ ದೇವಗಾವಿಯ ಭಾಗದ ವ್ಯವಸ್ಥೆ ಮಾಡಲು ಮಾನಾಜಿರಾಯನಿಗೆ ಆಜ್ಞಾಪತ್ರ ಕಳುಹಿಸಿದರು. ಹಂಬೀರರಾಯನು ಹೊರಡುವಾಗ ಬಂದ ಪತ್ರವೇ ಅದು. ಆ ಪತ್ರದಲ್ಲಿ ರಂಗರಾಯನ ಕುಚೇಷ್ಟೆ

ಯೂ ಉಲ್ಲೇಖಿಸಲ್ಪಟ್ಟಿತ್ತು. ಮಹಾರಾಜರ ಆಜ್ಞಾಪತ್ರವು ತಲುಪಿದ ಕೂಡಲೆ ಮಾನಾಜಿರಾಯನು ಹಂಬೀರರಾಯನಿಗೆ ಅದನ್ನು ತೋರಿಸಿದನು. ಅನಂತರ ದಲ್ಲಿ ಅವನು ಹಂಬೀರರಾಯನನ್ನು ಕುರಿತು:—"ಹಂಬೀರ, ನೀನು ಕೆಲವು ಸೈನಿಕರೊಡನೆ ಹೋಗಿ ಆ ಭಾಗದಲ್ಲಿಯ ಕೊಲೆಸುಲಿಗೆಗಳನ್ನು ಅಡಗಿಸಬೇ ಕಲ್ಲದೆ, ದೇವಗಾವಿಯ ಸುತ್ತಮುತ್ತಲಿನ ಭಾಗವನ್ನೂ ಸ್ವಾಧೀನಪಡಿಸಿಕೊಳ್ಳ ತಕ್ಕದ್ದು. ಮಹಾರಾಜರ ಆಜ್ಞಾಪತ್ರವು ಬರುವವರೆಗೆ ದೇವಗಾವಿಯ ಠಾಣೆಯ ಸರದಾರಿಕೆಯ ಅಧಿಕಾರವು ನಿನ್ನ ವಶದಲ್ಲಿಟ್ಟುಕೊಳ್ಳಬೇಕು. ರಂಗರಾಯನು ಅಲ್ಲಿ ಬಹಳವಾಗಿ ಹಾವಳಿಯನ್ನೆಬ್ಬಿಸಿದ್ದಾನೆ. ಅವನನ್ನು ಸೆರೆಹಿಡಿದು ಕಾರಾಗೃಹದಲ್ಲಿ ರಿಸಬೇಕು. ನೀನು ನಿನ್ನ ಸಂಗಡ ರಾವಜಿ ಘೋರ್ಪಡೆಯವರನ್ನು ಕರೆದು ಕೊಂಡು ಹೋಗಬಹುದು. ದೇವಗಾವಿಯ ಠಾಣೆಯ ಯವನ ಠಾಣೇದಾರನು ಬಹುಮಟ್ಟಿಗೆ ನಿಮ್ಮೊಡನೆ ಹೋರಾಡಬಹುದು. ನೀನು ಸೈನ್ಯಶಕ್ತಿಯನ್ನುಪ ಯೋಗಿಸಿ ಠಾಣೆಯನ್ನು ಕೈವಶಪಡಿಸಿಕೊಳ್ಳಬೇಕು. ದೇವಗಾವಿಯ ಮೇಲಿನ ದಾಳಿಯೆಂದರೆ ನಿನ್ನ ಮೊದಲನೆಯ ಸ್ವತಂತ್ರ ಕಾರ್ಯವು. ಈ ಕಾರ್ಯದಲ್ಲಿ ಚನ್ನಾಗಿ ಸಾಹಸಮಾಡಿ ಯಶಸ್ಸು ಸಂಪಾದಿಸತಕ್ಕದ್ದು. ನಿನ್ನ ಸ್ವಂತ ಪಥಕ ವನ್ನೊಯ್ಯುವದಲ್ಲದೆ ಸ್ವರಾಜ್ಯ ಪಡೆಯೊಳಗಿನ ಕೆಲವು ನಾಮಾಂಕಿತ ಯೋಧ ರನ್ನೂ ಕರಕೊಂಡು ಹೋಗು."

ಮಾನಾಜಿರಾಯನ ಮಾತುಗಳನ್ನು ಕೇಳಿ ಹಂಬೀರರಾಯನು ಸಂಭ್ರಮ ಗೊಂಡನು. ದಂಡಯಾತ್ರೆಯ ಅಧಿಕಾರವು ಸ್ವತಂತ್ರವಾಗಿ ದೊರೆತದ್ದರಿಂದ ಅವನು ಕೃತಕೃತ್ಯನಾದನು. ಆಗ ಅವನು ಮಾನಾಜಿರಾಯನನ್ನು ಕುರಿತು:— "ಕಾಕಾಸಾಹೇಬರೆ, ನಾನು ದೇವಗಾವಿಗೆ ಹೋದ ಮೇಲೆ ಒಂದೆರಡು ದಿನ ಅಲ್ಲಿಯ ಎಲ್ಲ ಪರಿಸ್ಥಿತಿಯನ್ನು ಪರಾಮರ್ಶಿಸಿ ಕಾರ್ಯ ಮಾಡುವೆನು. ಠಾಣೇ ದಾರನ ಹಾಗು ರಂಗರಾಯನ ಪಾರುಪತ್ಯ ಮಾಡಲೇಬೇಕಾದ ಪ್ರಸಂಗ ಬರ ಬಹುದು; ಆದರೆ ಮಠದ ಮಹಂತ ಹಾಗು ಧುಂಡಿರಾಜರು ನನಗೆ ವಿರೋಧಿ ಗಳಾಗಿ ನಡೆಯುವರೆಂದು ತೋರುವದಿಲ್ಲ. ಕೆಲ ದಿನಗಳ ಹಿಂದೆ ನಮ್ಮ ಶಂಭು ವು ದೇವಗಾವಿಗೆ ಹೋಗಿ ಬಂದನು. ಆಗ ಅವರು ಮಹಾರಾಜರನ್ನೂ ನಿಮ್ಮ ನ್ನೂ ಮನಸ್ವಿಯಾಗಿ ಹೊಗಳಿದರಲ್ಲದೆ ನನ್ನ ವಿಷಯವಾಗಿ ಸಹ ಧನ್ಯೋ ದ್ಗಾರಗಳನ್ನು ತೆಗೆದರಂತೆ. ಅವರಲ್ಲಿ ಇತ್ತೀಚೆಗೆ ಸ್ವರಾಜ್ಯದ ಬಗ್ಗೆ ಅತ್ಯಂತ ಆದರ ಭಾವನೆಗಳು ನೆಲೆಗೊಳ್ಳತೊಡಗಿದ ಲಕ್ಷಣಗಳು ತೋರಬರುತ್ತಿವೆ."

ಹಂಬೀರರಾಯನು ಹೀಗೆ ನುಡಿದ ಮೇಲೆ ಮಾನಾಜಿರಾಯನು:— "ಮಹಾರಾಜರ ಸ್ವರಾಜ್ಯ ಸಂಸ್ಥಾಪನೆಯ ಉದ್ದೇಶವೂ, ಸ್ವರಾಜ್ಯದ ಮಹತಿಯೂ ಮೂಲೆ-ಮೂಲೆಗಳಲ್ಲಿ ಹಳ್ಳಿ-ಪಟ್ಟಣಗಳಲ್ಲಿ ಗೊತ್ತಾಗತೊಡಗಿದೆ. ಸ್ವಾರ್ಥಿಗಳಾದ ವಿದೇಶೀಯರ ವಿಪರೀತವಾದ ಆಡಳಿತವು ಏತದ್ದೇಶೀಯರನ್ನು ನಿರ್ವಿಣ್ಣ ಮಾಡಿದೆ. ಜನತೆಯು ದೈನ್ಯಾವಸ್ಥೆಗೀಡಾಯಿತೆಂದರೆ ಅದಕ್ಕೆ ನಿಜವಾದ ಜ್ಞಾನವುಂಟಾಗುವದು. ಜನಾಂಗವು ಸ್ವಾರ್ಥವನ್ನು ಬದಿಗಿರಿಸಿ ಐಕ್ಯದಿಂದ ಕಾರ್ಯಸಾಧನೆ ಮಾಡತೊಡಗಿದರೆ ಅದು ಎಷ್ಟು ದುರ್ಬಲವಿದ್ದರೂ ಪ್ರಬಲರಾದ ವಿದೇಶೀಯ ಆಳರಸರನ್ನು ಬಗ್ಗು ಬಡಿದು ಸ್ವಾತಂತ್ರ್ಯದ ವಿಜಯಧ್ವಜವನ್ನು ದಿಗಂತದಲ್ಲಿ ಉಡ್ಡಾಣಗೊಳಿಸುವಷ್ಟು ಸಮರ್ಥವಾಗುವದು. ಪ್ರಾಚೀನ ಕಾಲದಿಂದ ಇಲ್ಲಿಯವರೆಗೆ ಎಷ್ಟೋ ರಾಜಮಹಾರಾಜರಾಗಿ ಹೋಗಿದ್ದಾರೆ. ನಳ, ಮಾಂಧಾತ, ನಹುಷ ಮೊದಲಾದ ಚಕ್ರವರ್ತಿಗಳು ಆಳಿ ಹೋದರು. ಅವರು ಅತ್ಯಂತ ಪುಣ್ಯಶ್ಲೋಕಿಗಳಾಗಿದ್ದರೂ ಸಹ ಅವರ ರಾಜ್ಯ-ಸಾಮ್ರಾಜ್ಯಗಳು ನೋಡಲು ದೊರೆಯುವದಿಲ್ಲ. ಅಂದಮೇಲೆ ಪ್ರಜಾಜನರನ್ನು ಅನೇಕ ವಿಧವಾಗಿ ನಿರ್ವಿಣ್ಣಗೊಳಿಸುವ ಪರಮ ಸ್ವಾರ್ಥಿಗಳೂ ಕ್ರೂರರೂ ಅಧರ್ಮಿಗಳೂ ಆದ ವಿದೇಶೀಯರ ಆಳಿಕೆಯು ನೀರ ಮೇಲಿನ ಗುಳ್ಳೆಗಿಂತಲೂ ಕ್ಷಣಭಂಗುರವಾಗಿರುವದು. ಬಲವಂತರು ದುರ್ಬಲರನ್ನು ಮುಷ್ಟಿಯಲ್ಲಿ ಹಿಡಿದು ಬೇಕಾದ ಹಾಗೆ ಕೆಲ ಕಾಲ ಕುಣಿಸಬಹುದು; ಆದರೆ ಕಾಲಚಕ್ರದ ಗತಿಯು ಮಾನವ ಬುದ್ಧಿಗೆ ನಿಲುಕದಷ್ಟು ವಿಲಕ್ಷಣವಾದದ್ದಿದೆ. ದೈವೀ ಪ್ರೇರಣೆಯಿಂದ ಆ ಚಕ್ರದ ಗತಿ ಬದಲಾಯಿತೆಂದರೆ, ಅರಸು ಹೋಗಿ ಆಳಾಗಬಹುದು; ಆಳು ಹೋಗಿ ಅರಸಾಗಬಹುದು. ಈ ಈಶ್ವರ ನಿರ್ಮಿತ ಸೃಷ್ಟಿಯಲ್ಲಿ ಪ್ರತಿಯೊಬ್ಬ ಮಾನವನಿಗೆ ಬಾಳಿ ಬದಕುವ ಅಧಿಕಾರವುಂಟು. ಪ್ರತಿಯೊಬ್ಬನೂ ಸಮಾನ ಧರ್ಮದಿಂದ ಜೀವನ ಸಾಗಿಸಲು ಅವಕಾಶವುಂಟು. ಯಾರ ಯಾರ ಅಧಿಕಾರಗಳೇನು, ಯಾರು ಯಾರು ಯಾವ ಯಾವ ಸ್ಥಾನದಲ್ಲಿರತಕ್ಕದ್ದು ಮೊದಲಾದ ವಿಚಾರಗಳಿಗೆ ರಾಜಕಾರಣದಲ್ಲಿ ಪ್ರಶಸ್ತಿ ದೊರೆಯಲೇ ಬೇಕು. ಹಂಬೀರ, ನೀನು ರಾಜಕಾರಣದ ಅಭ್ಯಾಸವನ್ನು ಕೆಲ ದಿನಗಳ ಮಟ್ಟಿಗೆ ಮಾಡಲೇ ಬೇಕು. ಮಹಾರಾಜರು ರಾಷ್ಟ್ರಧರ್ಮದಲ್ಲಿ ನಿಷ್ಣಾತರಿರುವರು. ಕರ್ನಾಟಕದ ಮೇಲಿನ ದಾಳಿಯ ಕಾರ್ಯ ಮುಗಿದ ಮೇಲೆ ನನಗೂ ನಿನಗೂ ಸ್ವಲ್ಪ ಮಟ್ಟಿಗೆ ಅವಕಾಶ ದೊರೆಯುವದು. ಮಹಾರಾಜರಿಗಾದರೂ

ಸಂಧಿ ದೊರೆಯಬಹುದು. ಆಗ ತಿಂಗಳೊಪ್ಪತ್ತು ರಾಯಗಡದಲ್ಲಿದ್ದು ಎಲ್ಲ ವಿಧದ ವಿಷಯಗಳನ್ನು ಅಭ್ಯಾಸ ಮಾಡು. ನೀನು ತರುಣನಿರುವೆ. ಸುವಿಚಾರಿಯೂ ಶೂರನೂ ಇರುವೆ. ನೀನು ಮಹಾರಾಜರ ಬಳಿಯಲ್ಲಿ ಕೆಲವು ದಿನಗಳ ವರೆಗೆ ಇದ್ದರೆ ನಿಜವಾಗಿ ಘನತೆ ಹೊಂದುವೆ. ಮಹಾರಾಜರು ಗುಣಗ್ರಾಹಿಗಳಿರುವರು. ಅವರು ನಿನ್ನನ್ನು ನಿಜವಾಗಿ ಹಿಡಿವೆತ್ತುವರು."

ಮಾನಾಜಿರಾಯನು ಹೀಗೆ ನುಡಿದು ದೇವಗಾವಿಯ ದಾಳಿಯ ವಿಷಯವಾಗಿ ಹೇಳತಕ್ಕ ಮಾತುಗಳನ್ನು ಹೇಳಿ, ಹಂಬೀರರಾಯನಿಗೂ ರಾವಜಿಗೂ ಅಲ್ಲಿಂದ ಹೊರಡಲು ಅಪ್ಪಣೆ ಕೊಟ್ಟನು. ಅವರಿಬ್ಬರೂ ನಿಶ್ಚಿತ ಪಡೆಯೊಡನೆ ಹೊರಟು ದೇವಗಾವಿಯನ್ನು ತಲುಪಿದರು.

ದೈನ್ಯವನ್ನು ದೂರ ಮಾಡಿಕೊಂಡು ಉನ್ನತಾವಸ್ಥೆಯ ಮೆಟ್ಟಿಲನ್ನೇರತೊಡಗಿದ ಹಂಬೀರರಾಯನು ದೇವಗಾವಿಯಲ್ಲಿದ್ದ ತನ್ನ ವಾಡಿಗೆ ಸೈನ್ಯಸಮೇತನಾಗಿಯೂ ಸಂಪದ್ಯುಕ್ತನಾಗಿಯೂ ಬಂದದ್ದು ನೋಡಿ ದೈನ್ಯದಲ್ಲಿ ಮುಳುಗಿ ಮುಳುಗಿ ಏಳುತ್ತಿದ್ದ ವೀರಮಾತಾ ಜಯಾಬಾಯಿಯು ಆನಂದಶರಧಿಯಲ್ಲಿ ಮುಳುಗಿದಳೆಂಬದನ್ನು ಬೇರೆ ಹೇಳಬೇಕಾಗಿಲ್ಲ.

---

# ೧೯ ವರ್ಧಮಾನ ವಿಜಯ



ಹಂಬೀರರಾಯನು ದೇವಗಾವಿಯಲ್ಲಿರುವ ತನ್ನ ವಾಡೆಗೆ ಬಂದನು. ಬಹಳ ದಿನ ಅತ್ತೆಯ ಮನೆಗೆ ಹೋದ ಹೆಣ್ಣುಮಕ್ಕಳು ತವರೂರಿಗೆ ಬಂದರೆ ಎಷ್ಟು ಆನಂದವುಳ್ಳವರಾಗುವರೋ, ಅದರಂತೆಯೇ ಹಂಬೀರರಾಯನಿಗೆ ದೇವಗಾವಿಯ ತನ್ನ ವಾಡೆಗೆ ಬಂದದ್ದರಿಂದ ಉಂಟಾಯಿತು. ಅವನು ಹೇರಳ ಧನಕನಕಗಳನ್ನು ತಂದಿದ್ದನು, ಅಧಿಕಾರಾರೂಢನಾಗಿ ಬಂದಿದ್ದನು, ಅಭ್ಯುದಯದ ಪಥವೇರಿದ್ದನು ಇಂಥ ಮಗನನ್ನು ನೋಡಿ ಜಯಾಬಾಯಿಗಾದ ಆನಂದವನ್ನಂತು ವರ್ಣಿಸಲಸದಳವಲ್ಲ. ಅವಳಿಗೆ ದೇವಗಾವಿಯ ತನ್ನ ಹಳೆಯ ವಾಡೆಯು ಇಂದ್ರಭವನ ಸದೃಶವಾಗಿ ತೋರತೊಡಗಿತು. ತನ್ನ ಕುಮಾರನು ಒಬ್ಬ ರಾಜಕುಮಾರನೆಂಬಂತೆ ಕಾಣಲಾರಂಭಿಸಿದನು. ಅವಳು ಪತಿಮರಣ ದುಃಖವನ್ನೂ ದೈನ್ಯಾವಸ್ಥೆಯನ್ನೂ ಪೂರಾ ಮರೆತಳು.

ಮಾರನೆಯ ದಿನ ಮುಂಜಾನೆ ಹಂಬೀರರಾಯನು ಕಮಾಲಕೋಟೆಯ

ಠಾಣೇದಾರನ ಕಡೆಗೆ ಒಂದು ಸೂಚನೆ ಕಳುಹಿಸಿದನು. ಶಿವಾಜಿ ಮಹಾರಾಜರ ಆಜ್ಞಾನುಸಾರವಾಗಿ ಸೈನ್ಯದೊಡನೆ ಬಂದಿರುವ ಸುದ್ದಿಯನ್ನೂ ತಿಳಿಸಿದನು. ದೇವಗಾವಿಯ ಸುತ್ತಮುತ್ತು ಕೊಲೆಸುಲಿಗೆ, ಕೊಳ್ಳೆಗಳು ಮಿತಿಮೀರಿರುವದರಿಂದ ಅದರ ವ್ಯವಸ್ಥೆಗಾಗಿ ಬಂದಿರುವಿನೆಂದೂ, ತಕ್ಕ ವ್ಯವಸ್ಥೆ ಮಾಡುವ ಬಗ್ಗೆ ಹಾಗು ಪ್ರಜೆಗಳಿಗಾದ ಹಾನಿಯನ್ನು ತುಂಬಿಕೊಡುವ ಬಗ್ಗೆ ಹೊಣೆ ದೊರೆಯದೆ ಹೋದರೆ ಠಾಣೆಯನ್ನು ಮಹಾರಾಜರ ಆಜ್ಞಾನುಸಾರವಾಗಿ ಕೈವಶ ಮಾಡಿಕೊಳ್ಳುವೆನೆಂದೂ ಅವನು ಸೂಚನಾ ಪತ್ರದಲ್ಲಿ ಉಲ್ಲೇಖಿಸಿದ್ದನು.

ಹಂಬೀರರಾಯನ ಸೂಚನಾ ಪತ್ರ ನೋಡಿ ಠಾಣೇದಾರನು ಸಂತಪ್ತನಾದನು. ಅವನು ಆ ಪತ್ರ ಹರಿದು ಚೆಲ್ಲಿ, ಪತ್ರ ತಂದವನ ಮೇಲೆ ಒದರಾಡತೊಡಗಿದನು. "ಇದೇನೂ ಶಿವಾಜಿಯ ಸ್ವರಾಜ್ಯವಲ್ಲ; ಶಾಹೀ ಸಾಮ್ರಾಜ್ಯವು. ಇಲ್ಲಿ ಚಲನವಲನ ಮಾಡುವ ಅಧಿಕಾರವು ಶಿವಾಜಿಗೇನಿದೆ? ನಾವು ಶಿವಾಜಿಯ ಅಧಿಕಾರಗಳನ್ನು ಮನ್ನಿಸುವದಿಲ್ಲ ಮೊದಲಾದ ಗರ್ವೋಕ್ತಿಗಳನ್ನು ಆಡಿ, ಅವನು ಸಂಧಾನದೂತನನ್ನು ಅಪಮಾನಗೊಳಿಸಿ ಕಳುಹಿದನು.

ಠಾಣೇದಾರನಾದ ಕಮಾಲಖಾನನ ಉನ್ಮತ್ತತನದಿಂದ ಹಂಬೀರಾಯನು ರೇಗಿದನು. ಅವನು ಖಾನನ ಮದವನ್ನು ಇಳಿಸುವ ಸಂಕಲ್ಪ ಮಾಡಿಕೊಂಡು, ತನ್ನ ಸೈನ್ಯದಲ್ಲಿ ಎರಡು ಭಾಗ ಮಾಡಿದನು. ಒಂದು ಭಾಗವನ್ನು ರಾವಜಿ ಘೋರ್ಪಡೆಯ ಕಡೆಗೆ ಕೊಟ್ಟು ಅವನನ್ನು ಠಾಣೆಯ ಹಿಂಬಾಗಕ್ಕೆ ಕಳುಹಿಸಿದನು. ತಾನು ಉಳಿದ ಭಾಗವನ್ನು ತೆಗೆದುಕೊಂಡು ಹೋಗಿ ಕೋಟೆಯ ಮುಖ್ಯ ಬಾಗಿಲ ಮೇಲೆ ದಾಳೀ ಮಾಡಿದನು. ಕಮಾಲಕೋಟೆಯ ನೆಲಕೋಟೆಯಾದರೂ ಭದ್ರವಾದದ್ದಾಗಿತ್ತು. ಹಂಬೀರರಾಯನು ಸೈನ್ಯಸಮೇತನಾಗಿ ಬಂದುದರಿಂದ ಏನಾದರೂ ಅನಿಷ್ಟವೊದಗಬಹುದೆಂಬ ಸಂಶಯದಿಂದ ಠಾಣೇದಾರನು ಯುದ್ಧದ ಸಿದ್ಧತೆಯನ್ನು ಮಾಡಿದ್ದನು. ಅವನಿಗೆ ಹಂಬೀರರಾಯನ ಶಕ್ತಿಯ ಅಳತೆಯಿರಲಿಲ್ಲ. ಕೋಟೆಯನ್ನು ಪ್ರವೇಶಿಸಿದ ಕೂಡಲೆ ನುಗ್ಗು ಮಾಡಿ ಕಳುಹಿಸಬೇಕೆಂದು ಎಲ್ಲ ಸೈನಿಕರನ್ನು ಅಲ್ಲಿ ಸಿದ್ಧಗೊಳಿಸಿ ನಿಲ್ಲಿಸಿದ್ದನು. ಹಂಬೀರರಾಯನು ತನ್ನ ಸೈನಿಕರೊಡನೆ ಕೋಟೆಯ ಬಾಗಿಲನ್ನು ತಲುಪಿದ ಕೂಡಲೆ ಕೋಟೆಯೊಳಗಿನ ಸೈನಿಕರು ಪ್ರತಿದಾಳಿಯನ್ನು ಪ್ರಾರಂಭಿಸಿದರು. ಬಾಗಿಲ ಬಳಿಯಲ್ಲಿ ಸಂಗ್ರಾಮವು ನಡೆಯಿತು.

ಅಷ್ಟರಲ್ಲಿ ಕೋಟೆಯ ಹಿಂಭಾಗದಲ್ಲಿದ್ದ ರಾವಜಿ ಘೋರ್ಪಡೆಯು ತನ್ನ ಪಥಕ ದೊಡನೆ ಹಂಬೀರರಾಯನನ್ನು ಕೂಡಿದನು. ಮರಾಟಿಗರ ವೀರಾವೇಶಕ್ಕೆ ಯವನ ಪಕ್ಷದ ಸೈನಿಕರು ತಡೆಯಲಿಲ್ಲ. ಹಂಬೀರರಾಯನು ಸ್ವಲ್ಪ ವೇಳೆ ಯಲ್ಲಿ ಕೋಟೆಯನ್ನು ಪ್ರವೇಶಿಸಿದನು. ಶತ್ರು ಸೈನಿಕರು ಓಡತೊಡಗಿದರು. ಹಂಬೀರರಾಯನು ಠಾಣೇದಾರನನ್ನು ಸೆರೆ ಹಿಡಿದು, ಕೋಟೆಯ ಮೇಲಿನ ಯವನ ಪಾತಶಾಹೀ ಪತಾಕೆಯನ್ನು ಕೆಡಹಿ, ಆ ಸ್ಥಳದಲ್ಲಿ ಭಗವೀ ಧ್ವಜ ವನ್ನು ನೆಟ್ಟನು.

ಠಾಣೇದಾರನಾದ ಕಮಾಲಖಾನನೂ ಅವನ ಹೆಂಡಿರು-ಮಕ್ಕಳೂ ಕೋಟೆಯಲ್ಲಿಯೆ ಹಂಬೀರರಾಯನ ಸೆರೆಯಲ್ಲಿ ಸಿಕ್ಕರು. ಈ ಅವಸ್ಥೆಯು ಕಮಾಲಖಾನನಿಗೆ ಮರಣತುಲ್ಯ ವೇದನೆಗಳನ್ನುಂಟು ಮಾಡಿತು. ತಾನು ಸೆರೆ ಸಿಕ್ಕ ಬಗ್ಗೆ ಅವನಿಗೆ ಅಷ್ಟೊಂದು ದುಃಖವಾಗಿರಲಿಲ್ಲ. ತನ್ನ ರೂಪವತಿಯಾದ ಹೆಂಡತಿ ಹಾಗು ಹೆಣ್ಣುಮಕ್ಕಳ ಶೀಲದ ಬಗ್ಗೆ ಅವನಿಗೆ ಯೋಚನೆಯಾಗಿತ್ತು. ಯವನರ ಸೆರೆಯಲ್ಲಿ ಅಥವಾ ಅವರ ಹಿಡಿತದಲ್ಲಿ ಸಿಕ್ಕ ಹಿಂದು ಯುವತಿಯರ ಶೀಲ-ಮಾನಗಳು ಯಾವ ಯಾವ ರೀತಿಯಿಂದ ಸೂರೆ ಮಾಡಲ್ಪಡುವವೆಂಬ ದನ್ನು ಅವನು ಎಷ್ಟೋ ಸಲ ಕರೆಣ್ಣಾ ಕಂಡಿದ್ದನು. ಅವನಾದರೂ ಅಂಥ ಕೆಲಸ ಮಾಡುವವರಲ್ಲಿ ಅಗ್ರೇಸರನಿದ್ದನು. ಆದ್ದರಿಂದ ತನ್ನ ಮನೆತನದ ಮೇಲಾ ದರೂ ಅದೇ ಅವಸ್ಥೆ ಬಂತೆಂದು ಅವನು ಬಹುಪರಿಯಾಗಿ ಮಿಡುಕಿದನು. ಯುದ್ಧಾರಂಭದಲ್ಲಿಯೆ ತನ್ನ ಅಂತಃಪುರವನ್ನು ದಾಟಿಸದೆ ಬಿಟ್ಟುದಕ್ಕಾಗಿ ಅವ ನಿಗೆ ಬಹಳೇ ಪಶ್ಚಾತ್ತಾಪವಾಗತೊಡಗಿತು. ಕೊನೆಗೆ ಮಿಂಚಿ ಹೋದ-ಮಾತಿಗೆ ಚಿಂತಿಸಿ ಫಲವಿಲ್ಲವೆಂದು ಅವನು ತನ್ನ ಮನಸ್ಸನ್ನು ಸಮಾಧಾನಪಡಿಸತೊಡಗಿ ದನು; ಆದರೆ ಅವನ ಮನಸ್ಸಿನ ಕುದಿಯು ಮಾತ್ರ ದೂರಾಗಲಿಲ್ಲ. ಇಂಥ ಅವಸ್ಥೆ ಯಲ್ಲಿರುವಾಗ ಹಂಬೀರರಾಯನ ಸೇವಕರು ಖಾನನನ್ನು ಹಿಡಿದೊಯ್ದು ಅವನ ಮುಂದೆ ನಿಲ್ಲಿಸಿದರು. ಇಷ್ಟು ದಿನಗಳ ವರೆಗೆ ಠಾಣೇದಾರನಾಗಿದ್ದವನನ್ನು ಈ ಬಗೆಯಾದ ಅಪಮಾನಗೊಳಿಸುವದು ಹಂಬೀರರಾಯನಿಗೆ ಸರಿದೋರಲಿಲ್ಲ. ಆಗ ಅವನು ಠಾಣೇದಾರನನ್ನು ಬಂಧನದಿಂದ ಬಿಡುಗಡೆ ಮಾಡಿಸಿ ತನ್ನ ಬಳಿ ಯಲ್ಲಿ ಕುಳ್ಳಿರಿಸಿಕೊಂಡು:—"ಕಮಾಲಖಾನ ಸಾಹೇಬರೆ, ಜಯ-ಪರಾಜಯ ಗಳು ದೈವಾಧೀನವಾದವುಗಳಾದ್ದರಿಂದ ಖಿನ್ನರಾಗಕೂಡದು. ನೀವು ಪರಾ ಭೂತರಾದ ಮಾತ್ರಕ್ಕೆ ನಿಮ್ಮ ಶೌರ್ಯ-ಸಾಹಸಗಳೇನೂ ಸುಳ್ಳಾಗುವದಿಲ್ಲ.

ನಿಮ್ಮೆದುರಿಗೆ ಎರಡು ಮಾರ್ಗಗಳಿವೆ. ಒಂದು ಮಾರ್ಗವನ್ನು ಹಿಡಿದರೆ ನಿಮಗೆ ಸುಖವುಂಟು. ಮತ್ತೊಂದು ಮಾರ್ಗವು ಸ್ವಲ್ಪ ಗೊಂದಲದ್ದಿವೆ”

“ನೀವು ಏನು ಹೇಳಿದರೂ ನನ್ನ ಝುನಾನಖಾನೆಯು ಅಪಮಾನವೇ. ಇಷ್ಟು ದಿನಗಳ ವರೆಗೆ ನಾನು ಜರುಗಿಸಿದ ಅತ್ಯಾಚಾರಗಳ ಫಲವನ್ನು ನಾನು ಉಣ್ಣಬೇಕಾಗಬಹುದು. ಅದಕ್ಕೆ ನನ್ನ ಯತ್ನವಿಲ್ಲ. ನಾನು ನಿಮಗೊಂದು ವಿನಂತಿ ಮಾಡಿಕೊಳ್ಳುತ್ತೇನೆ. ನನ್ನನ್ನು ಎಂಥ ವಿಪತ್ತಿಗೆ ಗುರಿ ಮಾಡಿದರೂ ಅಡ್ಡಿಯಿಲ್ಲ. ನನ್ನ ಕುಟುಂಬದ ಜನರನ್ನು ಮಾತ್ರ ಸುರಕ್ಷಿತವಾಗಿ ವಿಜಾಪುರಕ್ಕೆ ಕಳಿಸಿದರೆ ನಿಮ್ಮ ಉಪಕಾರವನ್ನು ನಾನು ಮರೆಯಲಾರೆನು.”

“ನಿಮ್ಮ ಜನರನ್ನು ವಿಜಾಪುರಕ್ಕೆ ಕಳಿಸುವದರಿಂದ ನಿಮ್ಮ ಮೇಲೆ ದೊಡ್ಡ ಉಪಕಾರ ಮಾಡಿದಂತಾಯಿತೆಂದು ನನ್ನ ತಿಳುವಳಿಕೆಯಿಲ್ಲ. ನಿಮ್ಮ ಕುಟುಂಬದ ಜನರು ನಮಗೆ ವೈರಿಗಳಲ್ಲ. ಹೆಣ್ಣುಮಕ್ಕಳ ಶೀಲ-ಮಾನಗಳನ್ನು ಸೂರೆಗೊಳ್ಳುವ ಉದ್ದೇಶವು ಹಿಂದುಗಳಲ್ಲಿರುವದಿಲ್ಲ. ಅದು ನಿಮ್ಮಂಥ ಅನಾಗರಿಕರ ಧರ್ಮವು. ಶಿವ ಛತ್ರಪತಿಗಳ ಸ್ವರಾಜ್ಯ ಸಂಸ್ಥಾಪನೆಯ ಉದ್ದೇಶವು ಎಷ್ಟು ಉದಾತ್ತವಿರುವದೆಂಬದರ ಕಲ್ಪನೆ ನಿಮಗಾಗುವ ಸಂಭವವಿಲ್ಲ. ಅಲ್ಲಿ ಹಿಂದುಗಳಿಗೆ ಹಾಗು ವಿದೇಶೀಯರಾದ ನಿಮಗೆ ಸ್ವಾತಂತ್ರ್ಯವುಂಟು; ಸುಖಗಳುಂಟು; ಆದರೆ ವಿದೇಶೀಯರಾದ ನೀವು ಅತ್ಯಾಚಾರ ಮಾಡತೊಡಗಿದರೆ ಮಾತ್ರ ನಿಮ್ಮನ್ನು ದೇಶದಿಂದ ಹೊರದೂಡುವ ಸಾಹಸವು ಮಾತ್ರ ತಪ್ಪದೆ ಮಾಡಲ್ಪಡುವದು. ನೀವು ಸ್ವರಾಜ್ಯ ಹಿತೈಷಿಗಳಾಗಿದ್ದರೆ ಛತ್ರಪತಿಗಳ ಓಲಗದಲ್ಲಿ ಸ್ವರಾಜ್ಯ ಸೇವೆ ಮಾಡಲು ನಿಮಗೂ ಅವಕಾಶವುಂಟು. ಹಾಗಿಲ್ಲದಿದ್ದರೆ ಮಾತ್ರ ಶಿವಪ್ರಭುಗಳ ಆಜ್ಞೆಯಾಗುವವರೆಗೆ ನೀವು ನನ್ನ ಸೆರೆಯಾಳಾಗಿರಬೇಕಾಗುವದು. ಇನ್ನು ನಿಮ್ಮ ಇಚ್ಛೆಯಿದ್ದರೆ ಮಾತ್ರ ನಿಮ್ಮ ಹೆಂಡಿರು-ಮಕ್ಕಳನ್ನು ವಿಜಾಪುರಕ್ಕೆ ಕಳಿಸುವೆನು; ಆದರೆ ಅವರು ಇಲ್ಲಿದ್ದರೆ ಅವರ ಶೀಲ-ಮಾನಗಳಿಗೆ ತಿಲಾಂಶವಾದರೂ ಬಾಧೆಯಿಲ್ಲವೆಂದು ಆಶ್ವಾಸನೆ ಕೊಡುತ್ತೇನೆ.”

ಹಂಬೀರರಾಯನ ಮಾತುಗಳನ್ನು ಕೇಳಿ ಕಮಾಲಖಾನನಿಗೆ ಆಶ್ಚರ್ಯವಾಯಿತು. ಇನ್ನು ತನ್ನ ಹೆಂಡಿರು-ಮಕ್ಕಳ ಶೀಲವೂ ಮಾನವೂ ಉಳಿಯಲಾರದೆಂದೇ ಅವನ ಗ್ರಹಿಕೆಯಾಗಿತ್ತು; ಆದರೆ ಇಂಥ ದೊಡ್ಡಿಸ್ತನದ ಮಾತುಗಳನ್ನು ಕೇಳಿ ಹಿಂದು ಹೃದಯದ ಉದಾರತೆಯ ಚಿತ್ರವು ಮೂರ್ತಿಮಂತಾಗಿ ಅವನ ಕಣ್ಣು ಮುಂದೆ ಕಟ್ಟಿತು ಆಗ ಅವನು:—“ಹಂಬೀರರಾಯರೆ, ಹಿಂದು

ಗಳ ಹೃದಯವು ನಿಜವಾಗಿಯೂ ಇಷ್ಟು ಉದಾರವಾದದ್ದಿರುವವೆ? ಹಿಂದು ಗಳಾದ ನಿಮ್ಮ ವಿಷಯವಾಗಿ ನಮ್ಮ ಜ್ಞಾತಿಬಂಧುಗಳು ಎಂದಿನಿಂದಲೋ ಬಿಂಬಿಸಿದ್ದ, ಈಗಲೂ ಬಿಂಬಿಸುತ್ತಿದ್ದ ಚಿತ್ರಕ್ಕೂ ಈಗಿನ ನಿಮ್ಮ ಹೃದಯ ಚಿತ್ರಕ್ಕೂ ಏನೂ ಸಂಬಂಧವೇ ಇಲ್ಲವಲ್ಲ! ಬಹುತರ ಹಿಂದುಗಳು ನಿಮ್ಮಷ್ಟೇ ಉದಾತ್ತ ವಿಚಾರಿಗಳಿರುವರೆ? ನಿಮ್ಮ ಶಿವಛತ್ರಪತಿಗಳ ಹೃದಯವೂ ಹೀಗೆ ಯೇ ಇರುವದೆ? ನಿಜವಾಗಿಯೂ ಹಿಂದುಗಳು ಹೀಗಿದ್ದರೆ ನಾವು ಅವರನ್ನು ಹೇಯವಾದ ರೀತಿಯಿಂದ ನಡೆಯಿಸಿಕೊಂಡ ಬಗ್ಗೆ ಪಶ್ಚಾತ್ತಾಪವುಂಟಾಗು ವದು. ನಾವು ನಿಮ್ಮನ್ನು ಪಶುಗಳಂತೆ ತಿಳಿದಿರುವೆವು. ಹಿಂದು ಸುಂದರಿಯ ರನ್ನು ನಮ್ಮ ವಿಲಾಸ ಯೋಗ್ಯ ಒಡವೆಗಳೆಂದು ಭಾವಿಸುತ್ತಿರುವೆವು. ನಿಮ್ಮ ಜನರ ಮೇಲೆ ಬೇಕಾದಂಥ ಅನ್ಯಾಯ-ಅತ್ಯಾಚಾರಗಳನ್ನು ನಡೆಯಿಸಿರುವೆವು. ಹಂಬೀರರಾಯರೆ, ನಿಜವಾಗಿ ಹೇಳಬೇಕಾದರೆ ನೀವು ಪಶುಗಳಲ್ಲ; ನಾವೇ ಪಶುಗಳು!"

ಕಮಾಲಖಾನನ ಮಾತು ಕೇಳಿ ಹಂಬೀರರಾಯನು ನಸುನಕ್ಕನು. ಅವನ ಆ ನಗೆಯೂ ಕೂಡ ಅರ್ಥಗರ್ಭಿತವಾಗಿದ್ದಿತು. ಅವನು ಕಮಾಲ ಖಾನನನ್ನು ಕುರಿತು:—"ಖಾನರೆ, ಹಿಂದುಗಳ ಹೃದಯದ ಉದಾರತೆಯನ್ನು ಅಳೆಯುವಂಥ ವಿಚಾರವು ನಿಮ್ಮಲ್ಲಿಲ್ಲ. ನಮ್ಮ ಶಿವಪ್ರಭುಗಳ ಗುಣವರ್ಣನೆ ಯನ್ನು ನಿಮ್ಮಂಥವರ ಮುಂದೆ ಮಾಡಿಯೂ ಪ್ರಯೋಜನವಿಲ್ಲ. ನ್ಯಾಯ ಸಮ್ಮತ ಮಾರ್ಗದಿಂದ ಹೋಗುವದೇ ಹಿಂದು ಧರ್ಮದ ಗುರಿ. ನಿಮ್ಮ ಗುರಿ ಯೇ ಬೇರೆಯಿರುವದರಿಂದ ನಿಮ್ಮ ಹುಟ್ಟುಗುಣದಂತೆ ನಮ್ಮ ವಿಷಯವಾಗಿ ಅಕ್ರಾಳ ವಿಕ್ರಾಳ ಚಿತ್ರವನ್ನು ತೆಗೆದುಕೊಂಡಿಟ್ಟಿರುವಿರಿ. ನಿಮ್ಮಲ್ಲಿಯ ನಿಜ ವಾದ ವಿವೇಕ ಬುದ್ಧಿಯನ್ನು ಜಾಗ್ರತಗೊಳಿಸಿ ನಿಮ್ಮ ಜನರ ಹೃದಯದ ಚಿತ್ರ ಗಳನ್ನು ತೆಗೆದಿರಿಸಿಕೊಳ್ಳಲು ಸಮರ್ಥರಾದಾಗ ಮಾತ್ರ ಅನ್ಯರ ಹೃದಯದ ಯಥಾರ್ಥವಾದ ಚಿತ್ರ ತೆಗೆಯಲು ನಿಮ್ಮಲ್ಲಿ ಅಧಿಕಾರವುಂಟಾಗುವದು. ಖಾನ ರೆ, ನೀವೂ ನಿಮ್ಮ ಪರಿವಾರದವರೂ ನಿಶ್ಚಿಂತರಾಗಿರತಕ್ಕದ್ದು. ಮಹಾರಾಜರ ಆಜ್ಞೆಯ ಮೇರೆಗೆ ನಿಮ್ಮ ವ್ಯವಸ್ಥೆ ಮಾಡಲ್ಪಡುವದು." ಎಂದು ಹಂಬೀರ ರಾಯನು ಹೇಳಿ, ತನ್ನ ಸೈನಿಕರನ್ನು ತೆಗೆದುಕೊಂಡು ಮಹಂತನ ಮಠದ ಕಡೆಗೆ ತೆರಳಿದನು.

ಕಮಾಲಕೋಟೆಯ ವ್ಯವಸ್ಥೆಯನ್ನು ನೋಡಿ ರಂಗರಾಯನು ಗಾಬರಿ

ಗೊಂಡನು. ಹಂಬೀರರಾಯನು ತನ್ನ ಹಾಗು ಮಹಂತ-ಧುಂಡಿರಾಜರ ಸೇಡು ತೀರಿಸಿಕೊಳ್ಳುವದಕ್ಕಾಗಿ ಮಠದ ಮೇಲೆಯೂ ದಾಳಿ ಮಾಡದೆ ಇರಲಾರನೆಂದು ಅವನು ಗಾಬರಿಗೊಂಡನು. ಈ ವಿಷಯದಲ್ಲಿ ಹೇಗೆ ಮಾಡಬೇಕೆಂದು ಅವನು ಯೋಚನೆಗೊಳಗಾದನು. ಆಗ ಧುಂಡಿರಾಜನು ಅವನ ಬಳಿಗೆ ಬಂದು:--"ಸರದಾರ ಸಾಹೇಬರೆ, ಈಗ ನಿಮ್ಮ ಸ್ವಯಂಭೂ ಸರದಾರಿಕೆಯ ಪರೀಕ್ಷೆಯ ಕಾಲ ಸಮೀಪಿಸಿದೆ. ನೀವು ಎಂದಿನಿಂದಲೂ ಹಂಬೀರರಾಯನ ಮೇಲಿನ ಸೇಡು ತೀರಿಸಿಕೊಳ್ಳಬೇಕೆಂದು ಯೋಚಿಸುತ್ತಿದ್ದಿರಿ. ಆ ಸಂಧಿಯು ಈಗ ಅನಾಯಾಸವಾಗಿ ಪ್ರಾಪ್ತವಾಗಿದೆ. ಕಮಾಲಕೋಟೆಯನ್ನು ಕೈವಶಮಾಡಿಕೊಂಡ ಹಂಬೀರರಾಯನು ನಮ್ಮ ಮಠವನ್ನು ಮುತ್ತುವದಕ್ಕಾಗಿ ಸಸೈನ್ಯನಾಗಿ ಹೊರಟಿರುವನು. ನೀವು ಅವನೊಡನೆ ಯುದ್ಧಮಾಡಿ ಜಯ ಪಡೆದರೆ ನಮ್ಮ ಗೌರವವು ಉಳಿಯುವದು. ವಿಜಾಪುರದಿಂದ ನೆರವು ಬರುವವರೆಗಾದರೂ ನೀವು ಯುದ್ಧವನ್ನು ನಡೆಯಿಸಲೇಬೇಕು. ನೀವು ಶೂರರಿರುವಿರಿ; ನಿಮ್ಮ ಸೈನಿಕರು ಕಲಿಗಳಿದ್ದಾರೆ. ಹೇಗಾದರೂ ಮಾಡಿ ಧೈರ್ಯತಂದುಕೊಂಡು ಕಾದಬೇಕೆಂದು ಸರದಾರರಾದ ನಿಮ್ಮಲ್ಲಿ ನನ್ನ ನಮ್ರ ವಿಜ್ಞಪ್ತಿ."

ಧುಂಡಿರಾಜನು ರಂಗರಾಯನಿಗೆ ದೊಡ್ಡಿಸ್ತನ ಕೊಡುತ್ತ ಮಾರ್ಮಿಕವಾಗಿ ಮಾತಾಡಿದನು. ಕಮಾಲಖಾನನಂಥ ಠಾಣೇದಾರನು ಕೆಲವು ಗಳಿಗೆಗಳಲ್ಲಿ ಶರಣಾಗತನಾಗಿರುವಾಗ ತಾನು ಪ್ರಬಲ ಹಂಬೀರರಾಯನೆದುರಿಗೆ ನಿಂತು ಹೋರಾಡಲು ಸಮರ್ಥನಾಗಲಾರೆನೆಂಬದರ ಅರಿವು ರಂಗರಾಯನಿಗಿತ್ತು; ಆದರೆ ಅವನು ತನ್ನ ಹೇಡಿತನವನ್ನು ಒಮ್ಮೆಲೆ ಬೈಲಿಗಿಡದೆ:-"ಧುಂಡಿರಾಜರೆ, ನೀವು ನಿಶ್ಚಿಂತೆಯಿಂದ ಇರತಕ್ಕದ್ದು, ನಾನಿದ್ದೇನೆ." ಎಂದು ನುಡಿದು, ತನ್ನ ಸೈನಿಕರನ್ನು ಸಜ್ಜುಗೊಳಿಸತೊಡಗಿದನು. ಅಷ್ಟರಲ್ಲಿ ಹಂಬೀರರಾಯನು ಸಸೈನ್ಯನಾಗಿ ಬಂದು ಮಠವನ್ನು ಮುತ್ತಿದನು. ರಂಗರಾಯನಿಗೂ ಧುಂಡಿರಾಜನಿಗೂ ಮಹಂತ ಮಹಾರಾಜನಿಗೂ ಓಡಿ ಹೋಗಲು ಕೂಡ ಅವಕಾಶ ದೊರೆಯದಾಯಿತು. ಎಲ್ಲರೂ ಹಂಬೀರರಾಯನ ಸೆರೆಯಲ್ಲಿ ಸಿಕ್ಕರು. ಅವನು ಮಠದ ವ್ಯವಸ್ಥೆ ಮಾಡಿ ತನ್ನ ವಾಡಿಗೆ ಬಂದನು. ರಾವಜಿ ಘೋರ್ಪಡೆಯು ಮಾತ್ರ ಕಮಾಲ ಕೋಟೆಯಲ್ಲಿಯೆ ಉಳಿದನು.

ಮಗನ ವರ್ಧಮಾನ ವಿಷಯವನ್ನೂ ಅವನು ಉನ್ನತಸ್ಥಿತಿಗೆ ಹೋಗತೊಡಗಿದ್ದನ್ನೂ ನೋಡಿ ಜಯಾಬಾಯಿಯು ಆನಂದಭರಿತಳಾದಳು. ಹಂಬೀರ

ರಾಯನು ತಾನು ದೇವಗಾವಿಯಿಂದ ತೆರಳಿದ ಮೇಲೆ ಏನೇನು ಮಾಡಿದೆನೆಂಬ ದನ್ನು ತಾಯಿಗೆ ತಿಳಿಸಿದನು. ಅವನ ವಿಕ್ರಮವನ್ನೂ ಸಾಹಸವನ್ನೂ ನೋಡಿ ಅವಳು ಕೃತಕೃತ್ಯಳಾದಳು. ಮಾರನೆಯ ದಿನವೇ ಹಂಬೀರರಾಯನು ಕಮಾಲ ಕೋಟೆಯ ಹಾಗು ದೇವಗಾವಿಯ ಬಗ್ಗೆ ಎಲ್ಲ ಸಂಗತಿಗಳನ್ನು ಪತ್ರದಲ್ಲಿ ಬರೆದು, ಮಾನಾಜಿರಾಯನ ಕಡೆಗೂ ಶಿವಾಜಿ ಮಹಾರಾಜರ ಕಡೆಗೂ ಕಳುಹಿ ಸಿದನು.

---

## ೨೦ ಮಾನವೀಯತೆಯ ಸ್ವರಾಜ್ಯ ಸೋಪಾನ



ಮಾರನಯ ದಿನ ನಾಂದಗಾವಿಗೆ ಹೋಗಿ ಬರಬೇಕೆಂದು ಜಯಾಬಾಯಿ ಯು ಹಂಬೀರರಾಯನಿಗೆ ಹೇಳಿದಳು. ಅಲ್ಲಿಗೆ ಹೋಗುವಾಗ ರಾವಜಿ ಘೋರ್ಪಡೆಯನ್ನು ಕರೆಕೊಂಡು ಹೋಗಬೇಕೆಂದು ಅವನ ಯೋಚನೆಯಿತ್ತು. ಯಶವಂತರಾಯನ ಚಿಕ್ಕ ಮಗಳಾದ ಕಮಲೆಗೆ ರಾವಜಿಯು ಯೋಗ್ಯ ವರ ನೆಂದು ಅವನು ನಿರ್ಣಯಿಸಿದ್ದನು. ಕಮಾಲಕೋಟೆಯ ವ್ಯವಸ್ಥೆಗಾಗಿ ಅವನು ತೊಡಗಿದ್ದರಿಂದ ಅಲ್ಲಿಂದ ಕರೆತರಲು ಅನುಮಾನ ಹೊಂದಿದನು. ಅಷ್ಟರಲ್ಲಿ ಸಾವಂತವಾಡಿಯ ದೌಲತರಾಯನು ಅಲ್ಲಿಗೆ ಬಂದನು. ಧುಂಡಜಿ ಸುಲಿಗೆಗಾರ ನಾದರೂ ಬಂದನು. ಹಂಬೀರರಾಯನು ದೌಲತರಾಯನ್ನು ಕಮಾಲಕೋಟೆಗೆ ಕಳುಹಿಸಿ, ಧುಂಡಜಿಯನ್ನೂ ಶಂಭುವನ್ನೂ ದೇವಗಾವಿಯಲ್ಲಿರಿಸಿದನು. ರಾವಜಿ ಯು ವೇಳೆಗೆ ಸರಿಯಾಗಿ ಕಮಾಲಕೋಟೆಯಿಂದ ಬಂದನು. ಕೂಡಲೆ ಅವನು ತಾಯಿಯ ಆಜ್ಞೆ ಹೊಂದಿ ರಾವಜಿಯೊಡನೆ ನಾಂದಗಾವಿಗೆ ತೆರಳಿದನು.

ಹಂಬೀರರಾಯನ ವರ್ಧಮಾನ ವಿಜಯ ವಾರ್ತೆಗಳು ನಾಂದಗಾವಿಯ ಯಶವಂತರಾಯನಿಗೆ ತಿಳಿದಿದ್ದವು. ಈ ಸಂಗತಿಗಳನ್ನು ಅವನು ಪುತ್ಥಳಿಗೂ ಕಮಲೆಗೂ ತಿಳಿಸಿದ್ದನು. ಕಮಲೆಗಾಗಿ ಯೋಗ್ಯ ವರನನ್ನು ಆರಿಸಿರುವೆನೆಂದು ಹಂಬೀರರಾಯನು ತನ್ನ ಭಾವೀ ಮಾವನಿಗೆ ತಿಳಿಸಿದ್ದನು. ರಾವಜಿಯೊಡನೆ ಹಂಬೀರನು ಯಶವಂತರಾಯನ ವಾಡಿಗೆ ಬಂದನು. ಯಶವಂತರಾಯನು ಇಬ್ಬರನ್ನೂ ಸ್ವಾಗತಿಸಿ ಕುಶಲವಾರ್ತೆಯನ್ನು ಕೇಳಿಕೊಂಡನು. ತರುವಾಯ ಹಂಬೀರರಾಯನು ರಾವಜಿಯ ವಿಷಯವಾಗಿ ಎಲ್ಲ ಸಂಗತಿಗಳನ್ನು ಯಶವಂತ ರಾಯನಿಗೆ ತಿಳಿಸಿ ದೇವಗಾವಿಯಿಂದ ಹೋದ ಮೇಲೆ ಅಂದಿನ ವರೆಗೆ ನಡೆದ

ಎಲ್ಲ ಘಟನೆಗಳನ್ನು ಅವನಿಗೆ ಹೇಳಿದನು. ಯಶವಂತರಾಯನು ಎಲ್ಲ ಸಂಗತಿಗಳನ್ನು ಕೇಳಿ "ನವ್ಮು ಪುತ್ಥಳಿ, ಸುದೈವಿ!" ಎಂದಿಷ್ಟೇ ಉದ್ಗಾರ ತೆಗೆದು ತನ್ನ ಮನೋದಯವನ್ನು ಪ್ರಕಟಿಸಿದನು.

"ಕಮಲೆಯಾದರೂ ಸುದೈವಿಯೆ!" ಎಂದು ಹಂಬೀರರಾಯನು ನುಡಿದನು

ತರುವಾಯ ಯಶವಂತರಾಯನು ಒಳಗೆ ಹೋಗಿ ಪುತ್ಥಳಿಗೂ ಕಮಲೆಗೂ ಹಂಬೀರರಾಯನ ಆಗಮನದ ಸಂಗತಿ ತಿಳಿಸಿ, ಊಟ-ಉಪಹಾರಗಳ ವ್ಯವಸ್ಥೆ ಮಾಡುವ ಬಗ್ಗೆ ಮನೆಯ ದಾಸಿಗೆ ತಿಳಿಸಿದನು.

ಊಟ-ಉಡಿಗೆ ತಳಾದ ಮೇಲೆ ಕೌತುಕದ ಮಾತು-ಕಥೆಗಳು ನಡೆದವು. ಕಮಲೆಯು ಪುತ್ಥಳಿಯು ಹಾಗು ಹಂಬೀರರಾಯನಿಗೆ ವಿನೋದವಾಡತೊಡಗಿದಳು. ಆಗ ಹಂಬೀರರಾಯ:—"ಯಶವಂತರಾಯರು ನಿನಗೆ ಒಂದು ಸಂಗತಿ ತಿಳಿಸಿಲ್ಲ." ಎಂದು ನಗುತ್ತ ನುಡಿದನು.

"ಏನದು?" ಎಂದು ಕಮಲೆ ವಿಸ್ಮಯದಿಂದ ಕೇಳಿದಳು.

"ಈ ನನ್ನ ಸ್ನೇಹಿಗಳೇ ನಿನಗೆ ಪತಿಯಾಗಲು ಬಂದಿರುವರು. ಇವರನ್ನು ದಂಡಯಾತ್ರೆಯಲ್ಲಿ ನಿನಗಾಗಿ ಹಿಡಿದು ತಂದಿರುವೆವು." ಎಂದು ಹಂಬೀರರಾಯನು ಗಹಗಹಿಸಿ ನಗುತ್ತ ನುಡಿದನು.

ಕಮಲೆಯು ರಾವಜಿಯನ್ನೊಮ್ಮೆ ನೋಡಿ ಅಡಿಗೆಯ ಮನೆಗೋಟ ಓಡಿದಳು. ಪುತ್ಥಳಿಯು ನಗುತ್ತಲೆ ಅವಳನ್ನು ಹಿಡಿದು ತಂದು:—"ತಂಗೀ, ಇತರರಿಗೆ ವಿನೋದವಾಡಲು ನಿನಗೆ ಬಲು ಹುರುಪಲ್ಲವೆ? ನಿಲ್ಲು, ಇಲ್ಲಿಯೆ ನಿಂತು ಬೇಕಾದ ಹಾಗೆ ವಿನೋದವಾಡು."

ಕಮಲೆಯು ಲಜ್ಜೆಯಿಂದ ಶಿರಬಾಗಿಸಿ ನಿಂತಳು ಆದರೂ ಅವಳು ರಾವಜಿಯನ್ನು ಕಡೆನೋಟದಿಂದೆರಡು ಸಲ ನೋಡದೆ ಇರಲಿಲ್ಲ; ಮುಖವು ನಸುನಗೆಯಿಂದ ಅರಳದೆ ಇರಲಿಲ್ಲ; ಭಾವವು ಮೂಕ ಸಮ್ಮತಿಯನ್ನು ಕೊಡದೆ ಇರಲಿಲ್ಲ. ಅವಳ ಒಲವು ತಿಳಿದು ಯಶವಂತರಾಯನು:—"ಕಮಲೆ, ಇಲ್ಲಿ ನೀನು ಮೋಸ ಹೋಗಲಾರೆ. ಹಂಬೀರರಾಯನು ತನ್ನ ಪರೀಕ್ಷೆಯಲ್ಲಿ ಉತ್ತೀರ್ಣನಾದ ಮೇಲೆಯೆ ಈ ರಾವಜಿರಾಯನನ್ನು ನಿನಗನುರೂಪನಾದ ವರನೆಂದು ಇಲ್ಲಿಗೆ ತಂದಿದ್ದಾನೆ. ನೀನೊಮ್ಮೆ ನನ್ನೆದುರಿಗೆ ಸಮ್ಮತಿಯಿತ್ತರೆ ನಾನು ನಿಶ್ಚಿಂತನಾವೆನು. ಪರದೇಶಿ ಕುಮಾರಿಯರಾದ ನಿಮ್ಮಿಬ್ಬರ ತಲೆಯ ಮೇಲೆ

ಅಕ್ಷತೆಗಳನ್ನು ಹಾಕಿದರೆ ನನ್ನ ಭಾರವು ಪೂರ್ಣವಾಗಿ ಇಳಿಯಿತು. ನನ್ನ ಕಷ್ಟಾರ್ಜಿತ ಆಸ್ತಿಗೆ ನೀವು ಇಬ್ಬರೂ ಕುಮಾರಿಯರು ಸಮಾನ ಪಾಲುಗಾರರಿರುವಿರಿ ಇದನ್ನು ನೀವು ಉಪಭೋಗಿಸುತ್ತ ಪುತ್ರಸಂತಾನ ಹೀನನಾದ ನನ್ನನ್ನು ಮುಪ್ಪಿನ ಕಾಲಕ್ಕೆ ರಕ್ಷಿಸುತ್ತ ಪುತ್ರಹೀನತೆಯಿಂದುಂಟಾಗುವ ಕ್ಲೇಶ-ಕಷ್ಟಗಳನ್ನು ಮರೆಯಿಸಿಯೇ ಮರೆಯಿಸುವಿರೆಂದು ನಾನು ನಿಜವಾಗಿಯೂ ವಿಶ್ವಾಸಗೊಂಡಿದ್ದೇನೆ. ಹೇಳು, ಕಮಲೆ! ನಿನ್ನ ಮನೋಗತವನ್ನು ಮರೆಮಾಜದೆ ಹೇಳು. ನಿನ್ನ ಮುಪ್ಪಿನ ತಂದೆಯ ಕೋಮಲವಾದ ಅಂತಃಕರಣವನ್ನು ಅರಳಿಸುವ ನಿನ್ನ ಅಮೃತ ವಾಣಿಯು ನನ್ನ ಕಿವಿಯಲ್ಲಿ ಅಮೃತಧಾರೆಯನ್ನು ಸುರಿಸಲಿ."

ಕಮಲೆಯು ತಂದೆಯನ್ನೊಮ್ಮೆ ನಗುತ್ತ ನೋಡಿದಳು. ಆ ನೋಟವು ಅವಳ ಮೂಕ ಸಮ್ಮತಿಗೆ ಬೆಂಬಲವೀಯುತ್ತಿದ್ದರೂ ಅಷ್ಟರಿಂದ ಯಶವಂತರಾಯನಿಗೆ ತೃಪ್ತಿಯಾಗುವಂತಿದ್ದಿಲ್ಲ. ರಾವಜಿಯಂತು ತನ್ನ ಭಾವೀ ಪ್ರಿಯತಮೆಯ ವಾಣಿಯನ್ನು ಕೇಳಲು ಒಳ್ಳೆಯ ಕುತೂಹಲವುಳ್ಳವನಾಗಿದ್ದನು. ಹಂಬೀರರಾಯನೂ ಪುತ್ಥಳಿಯೂ ಕಮಲೆಗೆ:"ಹೇಳು, ಬೇಗ ಹೇಳು." ಎಂದು ಅವಸರ ಅವಸರ ಮಾಡತೊಡಗಿದ್ದರು. ಆಗ ಕಮಲೆಯು ಸುಳ್ಳು ಸಿಟ್ಟು ತಂದುಕೊಂಡು ಪುತ್ಥಳಿ-ಹಂಬೀರರಾಯರನ್ನು ಕುರಿತು:—"ನೀವೂ ಹೀಗೆಯೇ ಹೇಳಿದ್ದಿರೇನು?" ಎಂದು ಕೇಳಿದಳು."

ಎಲ್ಲರೂ ಖೊಳ್ಳನೆ ನಕ್ಕರು.. ಇದೊಂದೇ ಮಾತಿನಲ್ಲಿ ಕಮಲೆಯ ಮನೋಭಾವವು ಗರ್ಭಿತವಾಗಿದ್ದದರಿಂದ ಮತ್ತೆ ಒತ್ತಾಯ ಮಾಡುವದರಲ್ಲಿ ಅರ್ಥವಿಲ್ಲೆಂದು ಹಂಬೀರರಾಯನು:—"ಕಮಲೆ, ಸಾಕು; ನೀನು ಹೇಳಬೇಕಾದುದನ್ನು ಹೇಳಿದೆ. ಮತ್ತೇನೂ ಹೇಳುವದುಳಿಯಲಿಲ್ಲ." ಎಂದು ನಗುತ್ತ ನುಡಿದನು.

ಅನಂತರದಲ್ಲಿ ಯಶವಂತರಾಯನು ಹರಭಟ್ಟ ಪುರೋಹಿತರನ್ನು ಕರೆಯಿಸಿ ವಿವಾಹಕ್ಕೆ ಶುಭಮುಹೂರ್ತವನ್ನು ಗೊತ್ತುಪಡಿಸಿದನು. ಈ ಲಗ್ನದ ಸಲುವಾಗಿ ಮಹಾರಾಜರನ್ನೂ ಮಾನಾಜಿರಾಯರನ್ನೂ ಕರೆಯಿಸಬೇಕೆಂಬ ನಿಶ್ಚಯವು ಅಂದೇ ಆಯಿತು. ಅದರಂತೆ ವಿವಾಹಮಹೋತ್ಸವಾಹ್ವಾನ ಪತ್ರಿಕೆಗಳೂ ಕಳಿಸಲ್ಪಟ್ಟವು. ವಿವಾಹದ ಸೌರಣೆಯೂ ಭರದಿಂದ ನಡೆಯಿತು.

ವಿವಾಹದ ಸೌರಣೆಯಲ್ಲಿಯೇ ಕುಳಿತುಕೊಳ್ಳಲು ಹಂಬೀರರಾಯನಿಗೂ

ರಾವಜಿಗೂ ಅವಕಾಶವಿರಲಿಲ್ಲ ಅವರ ಮೇಲೆ ದೊಡ್ಡ ರಾಜಕಾರಣವಿದ್ದಿತು. ಮಹಾರಾಜರೂ ಮಾನಾಜಿರಾಯನೂ ದೇವಗಾವಿಗೆ ಬಂದ ಮೇಲೆ ಅಲ್ಲಿಯ ವ್ಯವಸ್ಥೆಯನ್ನು ಹೇಗೆ ಹೇಗೆ ಮಾಡಬೇಕೆಂಬ ಬಗ್ಗೆ ವಿಚಾರ ಮಾಡಬೇಕಾಗಿತ್ತು. ಅವರು ಬರುವವರೆಗೆ ಅಲ್ಲಿಯ ವ್ಯವಸ್ಥೆಯನ್ನು ಸುವ್ಯವಸ್ಥಿತವಾಗಿ ಕಾಯ್ದುಕೊಳ್ಳಬೇಕಾಗಿತ್ತು. ಆದ್ದರಿಂದ ಅವರು ನಾಂದಗಾವಿಯಲ್ಲಿ ಹೆಚ್ಚಿಸಿಲ್ಲದೆ ಮಾರನೆಯ ದಿನವೇ ದೇವಗಾವಿಗೆ ತೆರಳಿದರು.

ಹಂಬೀರರಾಯನು ದೇವಗಾವಿಗೆ ಬಂದ ಮಾರನೆಯ ದಿನವೆ ಮಹಾರಾಜರೂ ಮಾನಾಜಿರಾಯನೂ ಅಲ್ಲಿಗೆ ಬಂದರು. ಅಷ್ಟರಲ್ಲಿ ಯಶವಂತರಾಯನ ಹಾಗು ಹಂಬೀರರಾಯನ ಪರವಾಗಿ ಮಾನಾಜಿರಾಯನ ಹೆಸರಿನಿಂದ ಬರೆಯಿಸಿದ ಲಗ್ನಪತ್ರಿಕೆಗಳು ಮಹಾರಾಜರಿಗೆ ತಲುಪಿದ್ದವು. ಅವರು ಬಂದ ಕೂಡಲೆ ಹಂಬೀರರಾಯನನ್ನು ಕುರಿತು:—"ದೇವಗಾವಿಯ ಸರದಾರನ ಮದುವೆ-ಮಾನಾಜಿರಾಯರು ಬರೆದ ಪತ್ರ-ನಾನು ಮಾನಾಜಿರಾಯರ ಬಳಿಯಲ್ಲಿರುವಾಗಲೆ ಅವರ ಹೆಸರಿನ ಪತ್ರವನ್ನು ನಾಂದಗಾವಿಯ ಚಾರನು ತಂದು ಕೊಟ್ಟು ಹೋದನು. ದೇವಗಾವಿಯ ಹಾಗು ಕಮಾಲಕೋಟೆಯ ವ್ಯವಸ್ಥೆ ಮಾಡುತ್ತಲೆ ಅಲ್ಲಿಯ ಠಾಣೇದಾರ-ಸುಭೇದಾರರ ಪವಾಸವನ್ನು ಪೂರೈಸಿಕೊಂಡೇ ಸ್ಥಳ ಬಿಡೋಣ. ಯಾಕಂದರೆ ಲಗ್ನವು ಇಂದಿಗೆ ಎಂಟೇ ದಿನ ಉಳಿಯಿತು. ಈ ಎಂಟು ದಿನ ಜಯಾಬಾಯಿಯವರ ಅತಿಥಿಗಳಾಗಿ ಉಳಿಯಲು ಆಮಂತ್ರಣ ಪತ್ರಿಕೆಯಿಂದ ನಮಗೆ ಅಧಿಕಾರ ಬಂದಿದೆ. ಮಾನಾಜಿರಾಯರಂತು ಮನೆಯ ಹಿರಿಯ ಮನುಷ್ಯರೇ ಇದ್ದಾರೆ."

ಆನಂದಪೂರಿತ ಹಾಸ್ಯದಿಂದ ನುಡಿಯುವ ಮಹಾರಾಜರ ಮಾತುಗಳ ಪ್ರತಿಯೊಂದು ಅಕ್ಷರಗಳು ಅಮೃತ ಬಿಂದು ಸಿಂಚಿತವಿದ್ದವು. ಎಲ್ಲರೂ ಆನಂದಗೊಂಡರು. ಹಂಬೀರರಾಯನಂಥ ಮಹಾನುಭಾವ ಮನುಷ್ಯನು ದೇವಗಾವಿಯ ಸರದಾರನಾಗುವ ಸುಯೋಗವು ಅಪೂರ್ವವಾದದ್ದೆಂದು ಎಲ್ಲರೂ ಬಗೆದರು. ಇಷ್ಟರಲ್ಲಿ ರಾವಜಿ ಘೋರ್ಪಡೆಯ ವಿಷಯವಾಗಿ ಜನರಿಗೆ ತಕ್ಕ ಮಟ್ಟಿಗೆ ತಿಳುವಳಿಕೆಯಾಗಿತ್ತು. ಆ ಭಾಗದ ಸರದಾರ ಠಾಣೇದಾರರು ಉತ್ತಮರು ದೊರೆತರೆಂದೂ ಯವನ ಸತ್ತೆಯಿಂದ ಹತಾಶವಾಗಿದ್ದ ಜನತೆಗೆ ಸ್ವರಾಜ್ಯ ಸೋಪಾನವೇರಲು ಆ ತರುಣರು ನೆರವಾಗುವರೆಂದೂ ಎಲ್ಲ ಜನರೂ ಆನಂದಗೊಂಡರು.

ಮಾರನೆಯ ದಿನ ಶಿವಾಜಿ ಮಹಾರಾಜರು ದೊಡ್ಡ ಓಲಗವನ್ನು ಕೂಡಿಸಿ, ಹಂಬೀರರಾಯನಿಗೆ ದೇವಗಾವಿಯ ಸರದಾರಿಕೆಯನ್ನೂ ರಾವಜಿ ಘೋರ್ಪಡೆಗೆ ಕಮಾಲಕೋಟೆಯ ಠಾಣೇದಾರಿಕೆಯನ್ನೂ ಕೊಟ್ಟರು. ಆಗ ಅವರು ಹಂಬೀರ ರಾಯನ ಯೋಗ್ಯತೆಯ ವಿಷಯವಾಗಿ ಓಲಗಕ್ಕೆ ಚನ್ನಾಗಿ ಪರಿಚಯ ಮಾಡಿ ಕೊಟ್ಟದ್ದಲ್ಲದೆ, ರಾವಜಿ ಘೋರ್ಪಡೆಯ ಬಗ್ಗೆ ಗೊತ್ತುವಳಿ ಮಾಡಿ ಕೊಟ್ಟರು. ಹಂಬೀರರಾಯನಂಥ ಸ್ವರಾಜ್ಯಪ್ರೇಮಿಗಳು ನಿಸ್ವಾರ್ಥ ಬುದ್ಧಿಯಿಂದಲೂ ಪ್ರಾಣಪಣದಿಂದಲೂ ಕರ್ತವ್ಯ ಮಾಡುತ್ತಿರುವದರಿಂದ ಹಿಂದು ಜನತೆಯು ಸ್ವರಾಜ್ಯ ಸೋಪಾನದ ಮೆಟ್ಟಿಲನ್ನೇರುತ್ತ ಸ್ವರಾಜ್ಯಮಂದಿರವನ್ನು ಸಮೀಪಿಸ ತೊಡಗಿರುವದೆಂಬ ಸಂಗತಿಯನ್ನು ಜನರಿಗೆ ಅವರು ಮನವರಿಕೆ ಮಾಡಿ ಕೊಟ್ಟರು. ಇಷ್ಟೆಲ್ಲ ಭಾಷಣವಾದ ತರುವಾಯ ಅವರು ಸುಲಿಗೆಗಾರ ಧುಂಡಜಿ ಯನ್ನು ಕಮಾಲಕೋಟೆಯ ಜಮಾದಾರನನ್ನಾಗಿಯೂ ಶಂಭುವನ್ನು ದೇವ ಗಾವಿಯ ಜಮಾದಾರನನ್ನಾಗಿಯೂ ನಿಯಮಿಸಿದರು. ತರುವಾಯ ಅವರು ನಾಂದಗಾವಿಯ ರಂಗರಾಯನನ್ನು ಕರೆಯಿಸಿ ನಾಲ್ಕು ಉಪದೇಶಪರ ಮಾತು ಗಳನ್ನು ಹೇಳಿ, ಅವನನ್ನು ಹಂಬೀರರಾಯನ ಕೈಕೆಳಗೆ ಸಾಮಾನ್ಯ ಸೈನಿಕ ನಂತೆ ಕೆಲಸ ಮಾಡಲು ಆಜ್ಞಾಪಿಸಿದರು. ವರ್ತನದಲ್ಲಿ ಸುಧಾರಣೆಯಾದರೆ ಮುಂದೆ ದೊಡ್ಡ ಕೆಲಸ ದೊರೆಯಲು ಸಂಧಿಯುಂಟೆಂಬ ಸಂಗತಿಯನ್ನಾದರೂ ರಂಗರಾಯನಿಗೆ ಮಹಾರಾಜರು ತಿಳಿಸಿದರು. ತರುವಾಯ ಅವರು ಧನಗಿರಿ ಮಹಂತನನ್ನೂ ಧುಂಡಿರಾಜ ದಿವಾಣನನ್ನೂ ಕರೆಯಿಸಿ, ಸಾವುಕಾರಿಕೆಯಿಂದ ಸಂಪಾದಿಸಿದ ಆಸ್ತಿಯನ್ನೆಲ್ಲ ಬಡವರ ಹಿತಾರ್ಥವಾಗಿ ವೆಚ್ಚಮಾಡಬೇಕೆಂದೂ, ಅದರ ಮೇಲೆ ಲಕ್ಷ್ಯವಿಡಲು ಹಂಬೀರರಾಯನಿಗೆ ಅಧಿಕಾರವುಂಟೆಂದೂ ತಿಳಿ ಸಿದರು. ಮಠವು ಸಾರ್ವಜನಿಕ ಸ್ವತ್ತಿನದಿರುವ ಮೂಲಕ ಅದರ ವ್ಯವಹಾರ ವನ್ನು ಮಹಂತನಾಗಲಿ ದಿವಾಣನಾಗಲಿ ಸ್ವತಂತ್ರವಾಗಿ ನಡೆಯಿಸಲು ಅನರ್ಹ ರಿರುವರೆಂಬ ಸಂಗತಿಯನ್ನು ಅವರು ಸ್ಪಷ್ಟವಾಗಿ ಎಲ್ಲರಿಗೆ ತಿಳಿಸಿ ಹೇಳಿದರು. ತರುವಾಯ ಕಮಾಲಕೋಟೆಯ ಮೊದಲಿನ ಸುಭೇದಾರನಾದ ಕಮಾಲಖಾನ ನನ್ನು ಕರೆಯಿಸಿ, ಮಹಾರಾಜರು ಗೌರವಪೂರ್ಣವಾದ ಭಾಷೆಯಿಂದ:—

“ಖಾನಸಾಹೇಬರೆ, ನೀವು ಬಹಳವಾಗಿ ಭಯಗೊಂಡಂತೆ ತೋರುವದು. ನಿಮ್ಮ ಜನರು ಹಿಂದುಗಳ ಮೇಲೆ ಎಷ್ಟೇ ಅತ್ಯಾಚಾರ ನಡೆಯಿಸಲಿ, ಅದರ ಪ್ರತೀಕಾರ ವು ನ್ಯಾಯವಾದ ರೀತಿಯಿಂದ ಮಾಡಲ್ಪಡುವದೇ ಹೊರತು ನೀವು ಮಾಡು

ತ್ತಿರುವ ರೀತಿಯಿಂದ ಮಾಡುತ್ತಿರುವದಿಲ್ಲವೆಂಬ ಮಾತನ್ನು ಪೂರಾ ಲಕ್ಷ್ಯದಲ್ಲಿ ಡಿರಿ. ಕುಟುಂಬ ಸಮೇತವಾಗಿ ನೀವು ನಮ್ಮ ಕೈಯಲ್ಲಿ ಸಿಲುಕಿರುವ ಮೂಲಕ ಮಾಡಿದ್ದುಣ್ಣುವ ಹೊತ್ತು ಬಂತೆಂದು ನೀವು ಕ್ಲೇಶಗೊಂಡಿರುವದೇನೂ ಅಸ್ವಾಭಾವಿಕವಲ್ಲ. ಆದರೂ ಹಿಂದುಪದಪಾತಶಾಹಿಯಲ್ಲಿ ಹಿಂದು ಮುಸಲ್ಮಾನರೆಂಬ ಭೇದವಿಲ್ಲ. ಆದರೆ ಮುಸಲ್ಮಾನರು ಹಿಂದುಗಳ ಕತ್ತನ್ನು ಹಿಚುಕುವ ಇಲ್ಲವೆ ಯಾವದೊಂದು ಅತ್ಯಾಚಾರವನ್ನು ಜರುಗಿಸುವ ಪ್ರಯತ್ನ ಮಾಡಿದರೆ ಮಾತ್ರ ಅದು ಎಂದೂ ನಡೆಯಲಾರದು. ಆರ್ಯರು ಉತ್ತರ ಏಶಿಯಾದ ತಮ್ಮ ಜನ್ಮಭೂಮಿಯನ್ನು ಬಿಟ್ಟು ಇಲ್ಲಿಗೆ ಬಂದ ಮೇಲೆ ಈ ಭರತ ಖಂಡವನ್ನು ತಮ್ಮ ಜನ್ಮಭೂಮಿಯೆಂದು ಬಗೆದು ಹೇಗೆ ಅದರ ಹಿತಸಾಧನೆ ಮಾಡುತ್ತ ಬಂದರೋ, ಅನೇಕ ಜನಾಂಗದವರು ಎಲ್ಲರೂ ಹೇಗೆ ಮಿತ್ರತ್ವದಿಂದ ಆಚರಿಸುತ್ತಿರುವರೋ ಅದರಂತೆ ಮುಸಲ್ಮಾನರು ತಮ್ಮ ಮಾತೃಭೂಮಿಯನ್ನು ಬಿಟ್ಟು ಇಲ್ಲಿಗೆ ಬಂದು ಅನೇಕ ಶತಮಾನಗಳಾಗಿರುವ ಮೂಲಕ ಹಿಂದೂ ಭೂಮಿಯನ್ನು ತಮ್ಮ ಮಾತೃಭೂಮಿಯಂತೆ ಬಗೆದು ಅದರ ಸೇವೆ ಮಾಡಬೇಕು. ಯಾವದೇ ಸಂಸ್ಕೃತಿಯಿರಲಿ, ಯಾವದೇ ಧರ್ಮವಿರಲಿ ಹಿಂದುಸ್ತಾನದ ಅನ್ನದಿಂದ ಕಾಯಪೋಷಣೆ ಮಾಡುವ ಜನರು ಹಿಂದುಸ್ತಾನಕ್ಕೆ ಅಹಿತವಾಗುವಂಥ ಕರ್ತವ್ಯ ಮಾಡುವದು ನಿಶ್ಚಯವಾಗಿ ವಿದ್ರೋಹಿತನವು. ಯಾವ ಧರ್ಮವೇನು, ಯಾವ ಸಂಸ್ಕೃತಿಯೇನು ಪರಸ್ಪರರ ಬಾಂಧವ್ಯದಿಂದಲೂ ಸ್ನೇಹ-ಸೌಹಾರ್ದ ಭಾವನೆಯಿಂದಲೂ ನಡೆದುಕೊಳ್ಳುವದು ಮಾನವೀ ಧರ್ಮವು. ಯಾವ ಮನುಷ್ಯನು ತನ್ನದು ಯಾವದೋ ಒಂದು ಜನ್ಮಭೂಮಿಯೆಂದು ಕಲ್ಪಿಸಿ, ಇಡೀ ಆಯುಷ್ಯದಲ್ಲಿ ಅದನ್ನು ಕಾಣದಂತಿದ್ದರೂ ಅದರ ವಿಷಯವಾಗಿ ವ್ಯರ್ಥ ಅಭಿಮಾನ ಹಿಡಿದು, ನಿಜವಾದ ಜನ್ಮಭೂಮಿಯನ್ನು ಶತ್ರುಭೂಮಿಯೆಂದಾಗಲಿ, ತನ್ನ ಜನ್ಮ ಭೂಮಿಯಲ್ಲವೆಂದಾಗಲಿ ಬಗೆದು ವಿಪರೀತವಾದ ಆಚರಣೆಯನ್ನಿಡುವನು. ಕೈಯಲ್ಲಿ ಅಧಿಕಾರ ಹಾಗು ಶಕ್ತಿಗಳಿದ್ದಾಗ ತನ್ನ ಕುಭಾವನೆಗೆ ಸರಿಯಾದ ಕೃತ್ಯಗಳನ್ನು ಮಾಡಿ ಅಂಧಶ್ರದ್ಧೆಯ ತನ್ನ ಮನಸ್ಸನ್ನು ಸಾಂತ್ವನ ಪಡಿಸಿಕೊಳ್ಳುವನು. ಅನ್ನದಾತೆ ಜನ್ಮದಾತೆಯಾಗಿದ್ದ ಮಾತೃಭೂಮಿಯ ಅಭಿಮಾನವನ್ನು ಬಿಡುವಂಥ ಮಹಾಪಾತಕವು ಯಾವದೂ ಇಲ್ಲವೆಂದು ನನ್ನ ಭಾವನೆ. ಬೌದ್ಧ ಮತವು ಭರತ ಭೂಮಿಯಲ್ಲಿಯೆ ಉದಯವಾಗಿ ಭಾರತದ ಹೊರಗೆ ಇರುವ ದೇಶಗಳಲ್ಲಿ

ಹಬ್ಬಿದೆ. ಹೀಗಿದ್ದರೂ ಆ ದೇಶಗಳೊಳಗಿನ ಬೌದ್ಧಮತಾನುಯಾಯಿಗಳಲ್ಲಿ ಯಾವನು ತನ್ನ ಮಾತೃಭೂಮಿಯು ಹಿಂದುಸ್ತಾನವೆಂದು ತಿಳಿದುಕೊಂಡಿರುವನು? ಏಸೂಕ್ರಿಸ್ತನು ಜನಿಸಿದ್ದು ಏಶಿಯಾದಲ್ಲಿ. ಅವನ ಧರ್ಮಪ್ರಸಾರವಾದದ್ದು ಯುರೋಪದಲ್ಲಿ. ಯಾವ ಯುರೋಪಿಯನನು ತನ್ನ ಜನ್ಮಭೂಮಿಯನ್ನು ಏಶಿಯವೆಂದು ಹೇಳುವನು? ಮುಸಲ್ಮಾನರಾದ ನೀವು ವಿದೇಶದಿಂದ ಬಂದಿರುವಿರಿ. ಇಲ್ಲಿ ರಾಜ್ಯಪ್ರಸಾರ ಮಾಡಿ ರಾಜ್ಯವಾಳತೊಡಗಿರುವಿರಿ. ನೀವು ನಿಮ್ಮ ಮಾತೃಭೂಮಿಯೆಂದು ಯಾವುದಕ್ಕೆ ತಿಳಿದಿರುವಿರೋ ಅಲ್ಲಿಗೆ ಹೋಗುವದು ಬಹು ಮಟ್ಟಿಗೆ ಅಸಂಭಾವ್ಯ. ಇಲ್ಲಿಯ ಯವನ ಜನಾಂಗದಲ್ಲಿ ಅನೇಕರು ಧರ್ಮಾಂತರ ಹೊಂದಿ ಬಂದ ಮುಸಲ್ಮಾನರಿರುವರು. ಇಂಥ ಜನರಾದ ನೀವು ಎಷ್ಟೋ ಶತಮಾನಗಳನ್ನು ಇಲ್ಲಿ ಕಳೆದಿದ್ದರೂ ಭಾರತವನ್ನು ಶತ್ರುಭೂಮಿಯೆಂದು ಬಗೆದಿರುವಿರಿ. ಹಿಂದುಗಳನ್ನು ಬಾಂಧವ್ಯದಿಂದ ನೋಡದೆ ಶತ್ರುಸ್ಥಾನದಲ್ಲಿ ಗಣಿಸುತ್ತಿರುವಿರಿ. ಅಂದ ಮೇಲೆ ನಿಮ್ಮ ರಾಜ್ಯವು ಇಲ್ಲಿ ಚಿರಸ್ಥಾಯಿಯಾಗಿ ಬಾಳುವ ಬಗೆ ಹೇಗೆ? ನಿಮ್ಮಂಥವರ ಮುಂದೆ ಇಷ್ಟೆಲ್ಲವನ್ನು ಹೇಳುವದರಿಂದ ಅಷ್ಟೊಂದು ಪ್ರಯೋಜನವಾಗುವದಿಲ್ಲವೆಂಬದು ನನಗೆ ಗೊತ್ತಿದೆ; ಆದರೆ ಹಿಂದುಗಳ ಮನಸ್ಸು ಹೇಗದೆ? ಹಿಂದುಗಳ ಹೃದಯವೆಂತಹದು ಮೊದಲಾದವುಗಳನ್ನು ಚನ್ನಾಗಿ ಅಭ್ಯಾಸ ಮಾಡದೆ, ಕೇವಲ ಖಡ್ಗದಿಂದ ರಾಜ್ಯವಾಳಬೇಕೆಂದೆಳಸುವ ನಿಮ್ಮ ಬಾದಶಹನಿಗೆ ಸ್ವರಾಜ್ಯದ ಧ್ಯೇಯವು ಅಲ್ಪಮಟ್ಟಿಗಾದರೂ ನಿಮ್ಮಿಂದ ತಿಳಿದರೆ ಸಾಕೆಂದು ತೋರಿದ್ದರಿಂದ ನಿಮ್ಮೆದುರಿಗೆ ಎರಡು ಮಾತಾಡಿರುವೆನು. ನಿಮ್ಮ ಹಾಗು ನಿಮ್ಮ ಕುಟುಂಬದವರ ಮೇಲೆ ಅತ್ಯಾಚಾರ ಮಾಡಬೇಕೆಂಬ ಬುದ್ಧಿಯು ಕಾಲತ್ರಯದಲ್ಲಿಯೂ ನನ್ನಲ್ಲಿ ಹುಟ್ಟುವದಿಲ್ಲ. ನೀವು ನಿರಾತಂಕವಾಗಿ ನಿಮ್ಮ ಬಾದಶಹನ ಕಡೆಗೆ ಬೇಕಾದಾಗ ಹೋಗಬಹುದು. ಇಲ್ಲಿಂದ ಏಕಾಕಿಯಾಗಿ ಹೋಗಲು ನಿಮಗೆ ಭಯವೆನಿಸುತ್ತಿದ್ದರೆ ಸಮೀಪದ ಯಾವುದೊಂದು ಯವನ ಪಾದಾಕ್ರಾಂತ ದುರ್ಗದ ವರೆಗೆ ನಿಮ್ಮನ್ನು ಸುರಕ್ಷಿತವಾಗಿ ತಲುಪಿಸುವ ವ್ಯವಸ್ಥೆ ಮಾಡುತ್ತೇನೆ."

ಶಿವಾಜಿ ಮಹಾರಾಜರ ಮಾತುಗಳು ಕಮಾಲಖಾನನ ಮನಸ್ಸಿನ ಮೇಲೆ ಒಳ್ಳೆಯ ಪರಿಣಾಮವನ್ನುಂಟು ಮಾಡಿದವು. ಪ್ರಭುಗಳ ಹೃದಯವು ಅಷ್ಟು ವಿಶಾಲವೂ ಅಷ್ಟು ಪವಿತ್ರವೂ ಅಷ್ಟು ನಿಸ್ಪೃಹವೂ ಅಷ್ಟು

ಸಮವೂ ಇದ್ದುದರಿಂದ ಸ್ವರಾಜ್ಯ ಸಂಸ್ಥಾಪನೆಯು ಕಾರ್ಯವು ಅತ್ಯಂತ ವೇಗ ದಿಂದ ನಡೆದಿರುವದೆಂದು ಅವನು ತಿಳಿದನು. ಅವನು ಕೈಜೋಡಿಸಿ ವಿನಯ ದಿಂದ:—"ಮಹಾರಾಜರೇ, ನೀವು ನಿಜವಾಗಿ ಘನವಂತರು. ನಿಮ್ಮ ವಿಚಾರ ಗಳು ಅತ್ಯಂತ ಶುದ್ಧವಾದವುಗಳು. ಸದ್ಯದ ಸ್ಥಿತಿಯಲ್ಲಿ ನೀವು ಏನೇ ಹೇಳಿ ದರೂ ಮುಸಲ್ಮಾನರಾದ ನಮಗೆ ಬುದ್ಧಿ ಬರುವದಿಲ್ಲ. ರಾಜ್ಯಲಕ್ಷ್ಮಿಯು ಕೈಯಲ್ಲಿದ್ದಾಳೆ, ಆಳರಸರ ವಿಚಾರಗಳನ್ನು ಅನುಕರಿಸುವ ವಿಚಾರಹೀನ ಆಡಳಿತಗಾರರಿದ್ದಾರೆ, ದೈವಾನುಕೂಲವಿದೆ. ಇಂಥ ಸಂಧಿಯಲ್ಲಿ ಬೇಕಾದ ಹಾಗೆ ವರ್ತಿಸಲು ಸೈನಿಕರೂ ಸೇನಾಪತಿಗಳೂ ಸಿದ್ಧರಿದ್ದಾರೆ. ಇಂಥ ಸ್ಥಿತಿ ಯಲ್ಲಿ ನಮ್ಮವರಿಗೆ ಯಾರು ಏನು ಹೇಳಿದರೂ ನಿಷ್ಪ್ರಯೋಜಕವು. ಆದರೂ ನಿಮ್ಮ ವಿಚಾರಗಳನ್ನು ಆದಿಲಶಹರ ಮುಂದಿರಿಸಲು ನಾನು ಪ್ರಯತ್ನ ಮಾಡು ವೆನು. ನನ್ನನ್ನೂ ನನ್ನ ಕುಟುಂಬದವರನ್ನೂ ಯಾವ ಆತಂಕ ಮಾಡದೆ ಬಿಟ್ಟುಕೊಟ್ಟದ್ದರಿಂದ ನಾನು ನಿಮಗೆ ತುಂಬ ಉಪಕೃತನಾಗಿರುವೆನು."

"ಖಾನರೇ!" ಮಹಾರಾಜರು ಗಂಭೀರತೆಯಿಂದ:—"ನೀವು ಉಪಕೃತ ರಾಗುವಂಥದನ್ನು ನಾನೇನೂ ಮಾಡಿಲ್ಲ. ಯುದ್ಧದಲ್ಲಿ ಪರಾಭೂತರಾದವ ರನ್ನು ಅತ್ಯಾಚಾರಕ್ಕೊಳಪಡಿಸುವದು ಪಶುಧರ್ಮವು. ನೀವು ಇನ್ನು ನಿಶ್ಚಿಂತೆಯಿಂದ ಹೊರಟು ಹೋಗಿರಿ.

ಖಾನನು ಮಹಾರಾಜರಿಗೆ ವಂದನೆ ಮಾಡಿ ಹೊರಟು ಹೋದನು. ಅನಂತದಲ್ಲಿ ಮಹಾರಾಜರು ಯುದ್ಧದಲ್ಲಿ ವಿಕ್ರಮವನ್ನು ತೋರಿಸಿದ ಸೇನಾ ಪತಿಗಳಿಗೂ ಸೈನಿಕರಿಗೂ ಬಹುಮಾನಗಳನ್ನು ಕೊಟ್ಟು, ಮುಂದಿನ ಕರ್ನಾ ಟಕದ ಮೇಲಿನ ದಾಳಿಯಲ್ಲಿ ಹೆಚ್ಚಿನ ಪರಾಕ್ರಮವನ್ನು ತೋರ್ಪಡಿಸಿ ಸ್ವರಾ ಜ್ಯದ ಅಭ್ಯುದಯ ಮಾಡಬೇಕೆಂದು ಹೇಳಿದರು. ಅನಂತರದಲ್ಲಿ ಸಭೆಯು ವಿಸರ್ಜನೆಯಾಯಿತು. ಮಹಾರಾಜರೂ ಮಾನಾಜಿರಾಯನೂ ಹಂಬೀರ ರಾಯನ ವಾಡೆಗೆ ಪ್ರಯಾಣ ಮಾಡಿದರು.

———



# ೨೦ ಕೊನೆ.



ಸರದಾರ ಹಂಬೀರರಾಯನ ಹಾಗು ಠಾಣೇದಾರ ರಾವಜಿ ಘೋರ್ಪಡೆಯ ವಿವಾಹವು ಪುತ್ಥಳಿ ಕಮಲೆಯರೊಡನೆ ದೇವಗಾವಿಯಲ್ಲಿ ವಿಜೃಂಭಣೆಯಿಂದ ನಡೆಯಿತು. ಮಹಾರಾಜರು ವಧೂವರರಿಗೆ ಶುಭಾಶೀರ್ವಾದ ಮಾಡಿ ರಾಜಧಾನಿಗೆ ತೆರಳಿದರು. ಮಾನಾಜಿರಾಯನು ಒಂವೆರಡು ವಾರ ನಿಂತು, ಹಂಬೀರರಾಯನಿಗೂ ರಾವಜಿಗೂ ರಾಜಕಾರಣದ ಗೊತ್ತುವಳಿ ಮಾಡಿಕೊಟ್ಟು ಸುಂದರಗಡದ ಕಡೆಗೆ ತೆರಳಿದನು.

ಹಂಬೀರರಾಯನು ದೇವಗಾವಿಯ ಸುತ್ತಮುತ್ತಲಿನ ಪ್ರದೇಶಗಳಲ್ಲಿಯ ಕೊಲೆ-ಸುಲಿಗೆಗಳನ್ನು ನಿಲ್ಲಿಸಿದನು. ನಿಯಮಿತವಾದ ಕಂದಾಯವನ್ನು ಹಾಕಿ ಜನರ ತೊಂದರೆಗಳನ್ನು ದೂರ ಮಾಡಿದನು. ಒಡ ಒಕ್ಕಲಿಗರಿಗೆ ಅನುಕೂಲವಾಗುವಂತೆ ಇತರ ವ್ಯವಸ್ಥೆಗಳನ್ನು ಏರ್ಪಡಿಸಿದನು. ಸಾಲಗಾರ ಒಕ್ಕಲಿಗರಿಗೆ ತೀರ ಸಣ್ಣ ಬಡ್ಡಿಯ ಹಣವನ್ನು ಸರಕಾರದಿಂದ ಕೊಡಿಸಿ, ಅದನ್ನು ಕಂತಗಳಿಂದ ತೆಗೆದುಕೊಳ್ಳುವ ವ್ಯವಸ್ಥೆ ಮಾಡಿಸಿದನು. ಮಠದ ಮಹಂತ ಧನಗಿರಿಯು ಸಾವುಕಾರಿಕೆಯ ವ್ಯವಹಾರವನ್ನು ಮಾಡತಕ್ಕದ್ದಲ್ಲವೆಂದು ಆಜ್ಞಾಪತ್ರ ಕಳುಹಿಸಿದನು. ಪ್ರತಿಯೊಂದು ಊರಲ್ಲಿ ಗರಡಿ ಮನೆಗಳನ್ನು ಕಟ್ಟಿಸಿ ವ್ಯಾಯಾಮದ ಸೌಕರ್ಯಗಳನ್ನೊದಗಿಸಿ ಕೊಟ್ಟನು. ಪ್ರತಿಯೊಂದು ಗ್ರಾಮದಲ್ಲಿ ನಗರರಕ್ಷಕ ದಳಗಳನ್ನು ನಿರ್ಮಾಣ ಮಾಡಿದನು. ಪ್ರತಿಯೊಬ್ಬ ತರುಣನು ಯುದ್ಧವಿದ್ಯೆ ಕಲಿಯಬೇಕೆಂದು ಪ್ರಯತ್ನಮಾಡತೊಡಗಿದನು. ಯುದ್ಧಕಲೆಯಲ್ಲಿ ನಿಷ್ಣಾತರಾದವರನ್ನು ಅವರ ಇಚ್ಛೆಯ ಮೇರೆಗೆ ಸ್ವರಾಜ್ಯಸೇವಾ ಪಥಕದಲ್ಲಿ ಸೇರಿಸಿಕೊಳ್ಳತೊಡಗಿದನು. ಜಾತಿ-ಧರ್ಮಗಳನ್ನು ಬದಿಗಿರಿಸಿ ಪ್ರತಿಯೊಂದು ಜಾತಿಯವರೂ ಪ್ರತಿಯೊಂದು ಧರ್ಮದವರೂ ಮಾತೃಭೂಮಿಯ ಸೇವೆ ಮಾಡುವಂತೆ ಉತ್ಸಾಹ ಕೊಡತೊಡಗಿದನು. ರಾವಜಿ ಘೋರ್ಪಡೆಯಾದರೂ ಹಂಬೀರರಾಯನನ್ನೇ ಅನುಕರಿಸುತ್ತಿದ್ದನು. ಒಟ್ಟಿನ ಮೇಲೆ ದೇವಗಾವಿಯ ಸುಭೆಯು ಸ್ವರಾಜ್ಯದೊಳಗಿನ ಮಾದರಿಯ ಸುಭೆಯಾಯಿತು.

ಹಂಬೀರರಾಯನು ತನ್ನ ಪ್ರಿಯತಮೆಯಾದ ಪುತ್ಥಳಿಯೊಡನೆ ಆನಂದ ದಿಂದ ಕಾಲಕಳೆಯುತೊಡಗಿದನು. ರಾವಜಿಯೂ ತನ್ನ ಪ್ರಿಯೆಯಾದ ಕಮಲಿ ಯೊಡನೆ ಸುಖವಾಗಿ ಆಯುಷ್ಕ್ರಮಣ ಮಾಡತೊಡಗಿದನು. ತನ್ನ ಇಬ್ಬ ರು ಕುಮಾರಿಯರೂ ಸುಖಸಾಮ್ರಾಜ್ಯದಲ್ಲಿ ಲೋಲಾಡತೊಡಗಿದ್ದನ್ನು ಕಂಡು ನಾಂದಗಾವಿಯ ಯಶವಂತರಾಯನಿಗೆ ಸ್ವರ್ಗೀಯ ಆನಂದವು ಲಭಿಸತೊಡ ಗಿತು. ಜಯಾಬಾಯಿಗಾದ ಆನಂದವನ್ನು ವರ್ಣಿಸಲಳವಲ್ಲ. ತನ್ನ ಮಗನ ಅಭ್ಯುದಯಕ್ಕೆ ಕಾರಣನಾದ ಮಾನಾಜಿರಾಯನನ್ನು ಅವಳು ದೇವಸದೃಶ ವಾಗಿ ನೋಡತೊಡಗಿದಳು. ತನ್ನ ಸ್ನೇಹಿತನ ಮಗನು ಅಭ್ಯುದಯ ಹೊಂ ದಿದ್ದು ನೋಡಿ ಮಾನಾಜಿರಾಯನಾದರೂ ಕೃತಕೃತ್ಯನಾದನು.

ಶಿವಾಜಿ ಮಹಾರಾಜರ ಕೈಕೆಳಗಿನ ರಾಷ್ಟ್ರಪ್ರೇಮಿ ವಿಭೂತಿಗಳಿಂದ ಜನತೆಯು **ಸ್ವರಾಜ್ಯಸೋಪಾನ**ವನ್ನೇರತೊಡಗಿತು. ಕೆಲ ದಿನಗಳಲ್ಲಿ ಮಾತೃಭೂಮಿಯು ಸ್ವಾತಂತ್ರ್ಯದ ಉನ್ನತ ಶಿಖರವನ್ನು ತಲುಪುವದೆಂಬ ಚಿಹ್ನಗಳು ತೋರತೊಡಗಿದ್ದರಿಂದ ಭಾರತೀಯರು ಸ್ವಾನಂದ ಸಾಮ್ರಾಜ್ಯ ದಲ್ಲಿ ಲೋಲಾಡತೊಡಗಿದರು.

---

ಸಮಾಪ್ತ

---

**ಇದು ಆನಂದವನ-ಅಗಡಿಯ ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸಿನಲ್ಲಿ**
**ಭಿ. ಪ. ಕಾಳೆ ಇವರಿಂದ ಮುದ್ರಿಸಲ್ಪಟ್ಟಿತು.**

